ಕರ್ನಾಟಕ ನವಜೀವನ ಗ್ರಂಥಮಾಲೆ
ಗ್ರಂಥ ೧.

# ಕನ್ನಡಿಗನ-ಸರ್ವಸ್ವ
## ಅಥವಾ
# ಸಂಯುಕ್ತ-ಕರ್ನಾಟಕಪ್ರಾಂತ.

ಲೇಖಕ ಹಾಗು ಪ್ರಕಾಶಕ
ಆರ್. ಬೀ. ಕುಲಕರ್ಣಿ ಕಾವ್ಯರತ್ನ,
ಬೆಳಗಾಂವಿ.

॥ ಚಂಪಕ ॥

ಅಹಹಹ! ಸಂಧಿ, ಸಂಧಿ ನೆರೆ ಬಂದುದು ಬಂದುದು ಏಳಿರೇಳಿರೆಂ- ।
ದಿಹರಣಭೇರಿಗರ್ಜನೆಗೆ ಕನ್ನಡ ಮಾತೆಯು ಛತ್ರದಿಂಬಿನೊಳ್ ॥
ಬಹು ಮುದದಿಂದೆ ಪೂಣ್ದನಡೆ ಧೈರ್ಯದೆ ಕಾದುತ ಕಾದಿ ಬೀಳ್ವೊಡಂ ।
ಇಹಪರದಲ್ಲಿ ಕನ್ನಡಿಗ, ನೀನೆಲೆ ಕೀರ್ತಿವರಾಂಗನಾ ಧವಂ ॥

( ಕಾವ್ಯರತ್ನ ).

ಶ್ರೀಮಹಾವೀರ ಮುದ್ರಣಾಲಯ ಬೆಳಗಾಂವಿ.

೧೯೨೪.

ಬೆಲೆ ೧ ರೂ.

ಈ

ಚಿಕ್ಕ ಪುಸ್ತಕವನ್ನು

ಭಾರತಮಾತೆಯ ಸೇವೆಗೆ ಸಮರ್ಥರಾಗಬೇಕೆಂದು

ಕರ್ನಾಟಕದ ಏಕೀಕರಣಕ್ಕೆ

ಹಗಲಿರುಳು ಹಂಬಲಿಸುತ್ತಿರುವ

ನನ್ನ ಕನ್ನಡ ಬಂಧುಭಗಿನಿಯರ

ಅಡಿದಾವರೆಗಳಿಗೆ

ಪ್ರೀತಿಯಿಂದ

ಅರ್ಪಿಸಿರುವೆನು.





ಆರ್. ಬೀ. ಕುಲಕರ್ಣಿ
(ಕಾವ್ಯರತ್ನ...)



# ಗ್ರಂಥಕರ್ತನ ಮುನ್ನುಡಿ.

ಈ ಗ್ರಂಥಕ್ಕೆ ಪ್ರಸ್ತಾವನೆಯನ್ನು ಬರೆಯುವ ಭಾರವನ್ನು ಡಾ. ಸವಣೂರವರು ವಹಿಸಿದ್ದರೂ, ಇಲ್ಲಿ ನಾಲ್ಕು ಮಾತುಗಳನ್ನು ಬರೆಯುವದು ನನ್ನ ಕರ್ತವ್ಯವಾಗಿರುತ್ತದೆ.

ಬಂಧುವಾತ್ಸಲ್ಯದಿಂದ ಅನೇಕತರವಾಗಿ ಸಹಾಯ ಮಾಡಿದ ಹಾಗು ಮಾಡುತ್ತಿರುವ ಡಾಕ್ಟರ ಸವಣೂರರವರಿಗೂ, ಈ ವಿಷಯದ ಬಗ್ಗೆ ಹೋರಾಡಲು ವಚನವನ್ನು ಕೊಟ್ಟ ಶ್ರೀಯುತ ಎಸ್. ಎನ್. ಅಂಗಡಿ ಬಿ. ಎ. ಎಲ್ ಎಲ್. ಬಿ. ಎಮ್. ಎಲ್. ಸಿ. ಯವರಿಗೂ, ನಾನು ಅತ್ಯಂತ ಕೃತಜ್ಞನಾಗಿರುವೆನು. ಇದೇ ರೀತಿ ಅಭಿಮಾನದಿಂದಲೂ, ಔದಾರ್ಯದಿಂದಲೂ, ನಮ್ಮ ಗ್ರಂಥಮಾಲೆಗೆ ಸಹಾಯಮಾಡಿದ ಪೋಷಕರು, ಆಶ್ರಯದಾತರು, ಚಂದಾದಾರರು ಇವರೆಲ್ಲರಿಗೂ ಋಣಿಯಾಗಿರುವೆನು. ನನಗೆ ಯಾರ ಗ್ರಂಥದಿಂದ ತುಸುಮಟ್ಟಿಗೆಯಾದರೂ ಸಹಾಯವು ದೊರೆಯಿತೋ ಆಯಾ ಗ್ರಂಥಕಾರರನ್ನೂ ಸ್ಮರಿಸುವೆನು. ಕೆಲವು ಪುಸ್ತಕಗಳನ್ನು ಒದಗಿಸಿಕೊಟ್ಟ ಶ್ರೀ. ಎಲ್. ಕೆ. ಮುಜುಮದಾರ ( ಬಿ. ಎ. ) ಹಾಗು ಜಿ. ಎಮ್. ಮುಡಬಿದರಿ, ಕರ್ನಾಟಕದ ನಕ್ಷೆಯನ್ನು ತೆಗೆದುಕೊಟ್ಟ ಶ್ರೀ. ಅಷ್ಟೇಕರ ಡ್ರಾಯಿಂಗಮಾಸ್ತರ, ಹಾಗು ನಮ್ಮ ವಿನಂತಿಪತ್ರವನ್ನು ಮುದ್ರಿಸಿ ಸಹಾಯಮಾಡಿದ ಕನ್ನಡ ವೃತ್ತಪತ್ರಕಾರರು ಇವರೆಲ್ಲರ ಉಪಕಾರವನ್ನು ಮರೆಯಲಾರೆನು. ಕಾಲಕ್ಕೆ ಸರಿಯಾಗಿಯೂ ಅಚ್ಚುಕಟ್ಟಾಗಿಯೂ ಈ ಗ್ರಂಥವನ್ನು ಮುದ್ರಿಸಿಕೊಟ್ಟ ಶ್ರೀಮಹಾವೀರ ಮುದ್ರಣಾಲಯದ ಚಾಲಕರನ್ನೂ ಇನ್ನುಳಿದ ರೀತಿಯಿಂದ ಸಹಾಯಮಾಡಿದವರನ್ನೂ ಈ ಪ್ರಸಂಗದಲ್ಲಿ ಮರೆಯಲಾರೆನು.

ಬೆಳಗಾಂವಿಯ ಕರ್ನಾಟಕ ರಾಷ್ಟ್ರೀಯ ಸಭೆಯ ಕಾಲಕ್ಕೆ ಈ ಗ್ರಂಥವು ಪ್ರಸಿದ್ಧವಾಗಲೇಬೇಕೆಂದು ನನ್ನ ಸ್ನೇಹಿತರು ಒತ್ತಾಯಪಡಿಸಿದ್ದರಿಂದ ನಾನು

ಯೋಜಿಸಿದ ದೊಡ್ಡ ಗ್ರಂಥದಲ್ಲಿಯ ಮುಖ್ಯ ಸಂಗತಿಗಳಲ್ಲಿ ಒಂದನ್ನೂ ಬಿಡದೆ ಕೇವಲ ವರ್ಣನೆಯ ಭಾಗವನ್ನು ಮಾತ್ರ ಸಂಕ್ಷೇಪಿಸಿ, ಸರ್ವರೂ ಸಂಗ್ರಹಿಸಲಿಕ್ಕೆ ಯೋಗ್ಯವಾಗಿರುವಂತೆ ಮಾಡಿರುವೆನು. ಇದರಲ್ಲೇನಾದರೂ ಕುಂದುಕೊರತೆಗಳು ಕಂಡುಬಂದರೆ ಸಹೃದಯರಾದ ವಾಚಕರು ಕ್ಷಮಿಸುವರೆಂದು ನಂಬಿರುವೆನು.

ನಾನು ಪ್ರಾರಂಭಿಸಿದ ಕರ್ನಾಟಕ ನವಜೀವನ ಗ್ರಂಥಮಾಲೆಯಿಂದ ಉದ್ಗ್ರಂಥಗಳು ಹೊರಟು, ತನ್ಮೂಲಕ ಕರ್ನಾಟಕದ ಸೇವೆಯು ಲಭಿಸಿ, ಕನ್ನಡ ವಾಙ್ಮಯಕ್ಕೆ ಕಳೆಯೇರುವದಲ್ಲದೆ, ನವೀನ ಕರ್ನಾಟಕವು ಸಿದ್ಧವಾಗ ಬೇಕೆಂಬ ಉತ್ಕಟೇಚ್ಛೆಯು ನನ್ನಲ್ಲಿ ತುಂಬಿದೆ. ಇದೆಲ್ಲ ಕನ್ನಡಿಗರ ಸಹಾಯದ ಮೇಲೆ ಅವಲಂಬಿಸಿರುವದರಿಂದ, ದೇವರು ಅವರಲ್ಲಿ ಸದ್ಭಾವನೆಯನ್ನು ಹುಟ್ಟಿಸಿ ನನ್ನ ಸದಿಚ್ಛೆಯನ್ನು ಪೂರ್ಣಗೊಳಿಸಲೆಂದು ಏಕಭಾವದಿಂದ ಪ್ರಾರ್ಥಿಸುವೆನು.

**ಬೆಳಗಾಂವಿ**
ಖಡೇಬಝಾರ ನಂ. ೨೯೯೧.
ತಾ|| ೨೨-೧೧-೨೪.

ತಮ್ಮ ವಿಧೇಯ,
**ಆರ್. ಬಿ. ಕುಲಕರ್ಣಿ,**
( ಕಾವ್ಯರತ್ನ. )

---

# ಪ್ರಸ್ತಾವನೆಯು.

ಕರ್ನಾಟಕ ರಾಷ್ಟ್ರೀಯ ಸಭೆಯು ಬೆಳಗಾಂವಿಯಲ್ಲಿ ಕೂಡುವದು ನಿಶ್ಚಿತವಾದನಂತರ ಯಾವ ಮಹತ್ವದ ಯೋಜನೆಯನ್ನು ಕನ್ನಡಿಗರ ಮುಂದಿಟ್ಟು ಕರ್ನಾಟಕದ ಅಭ್ಯುದಯಕ್ಕಾಗಿ ಅವರ ಲಕ್ಷವನ್ನು ಆಕರ್ಷಿಸಬೇಕೆಂದು ಬಹಳ ತುಸು ಚರ್ಚೆಯು ನಡೆದಿತ್ತು. ಆ ಪ್ರಸಂಗದಲ್ಲಿ ಮಿ. ಕುಲಕರ್ಣಿಯವರು ಈ ಗ್ರಂಥದ ವಿಷಯವಾಗಿ ವಿವರಿಸಿ ಹೇಳಲು ನಮ್ಮೆಲ್ಲರಿಗೆ ಅತೀವ ಸಂತೋಷವಾಯಿತಲ್ಲದೆ ರಾಷ್ಟ್ರೀಯ ಸಭೆಯ ಕಾಲಕ್ಕೆ ಈ ಗ್ರಂಥವು ಪ್ರಸಿದ್ಧವಾದರೆ, ಪ್ರಸಂಗಕ್ಕೆ ಸರಿಯಾಗಿ ಬೆಳಗಾಂವಿಯ ಕನ್ನಡಿಗರು ತಮ್ಮ ಕರ್ತವ್ಯವನ್ನು ಯೋಗ್ಯವಾಗಿ ಜರಗಿಸಿದಂತಾಗುವದೆಂದು ಎನಿಸಿತು. ಅದರಂತೆ, ಮಿ. ಕುಲಕರ್ಣಿಯವರು ಬರೆಯುವ ಶ್ರಮವಲ್ಲದೆ, ಖರ್ಚಿನ ಭಾರವನ್ನು ಸಹ ತಾವೇ ವಹಿಸಿ ಕಾಲಕ್ಕೆ ಸರಿಯಾಗಿ ಈ ಗ್ರಂಥವನ್ನು ನಮ್ಮೆಲ್ಲರ ಕೈಯ್ಯಲ್ಲಿ ಕೊಟ್ಟುದರಿಂದ, ಅವರು ಕನ್ನಡಿಗರ ಆದರಕ್ಕೆ ಪಾತ್ರರಾಗಿರುವರಲ್ಲದೆ, ಕನ್ನಡಿಗರನ್ನು ಋಣಿಯಾಗಿ ಮಾಡಿದರೆಂದು ಹೇಳಲು ಅಡ್ಡಿಯಿಲ್ಲ.

ಈ ಗ್ರಂಥದ ಯೋಗ್ಯತೆಯು ಹಾಗು ಅವಶ್ಯಕತೆಯು ಬಗ್ಗೆ ಹೆಚ್ಚಿಗೆ ಹೇಳಲು ಕಾರಣವಿಲ್ಲ. ಇದನ್ನು ಓದಿದನಂತರ ಪ್ರತಿಯೊಬ್ಬನ ಮನಸ್ಸಿನ ಮೇಲೆ ಆಗುವ ಪರಿಣಾಮವೇ ಎಲ್ಲವನ್ನು ಹೇಳುವದು. ಇದರಲ್ಲಿ ೧೦ ಪ್ರಕರಣಗಳಿದ್ದು ಪ್ರತಿಯೊಂದು ಪ್ರಕರಣವು ಹೊಸ ಸಂಗತಿ, ಹೊಸ ವಿಚಾರಗಳಿಂದ ತುಂಬಿ ಹೋಗಿದೆ. ವಿವೇಚನಪದ್ಧತಿಯಂತೂ ಸ್ಫಟಿಕದಷ್ಟು ಸ್ಪಷ್ಟವಾಗಿದೆ. ಈ ಪುಸ್ತಕದೊಳಗಿನ ಪ್ರತಿಯೊಂದು ಪುಟವೂ ಮಿ. ಕುಲಕರ್ಣಿಯವರು ವಹಿಸಿದ ಶ್ರಮದ ಸಾಕ್ಷಿಯಾಗಿ ನಿಲ್ಲುವದೆಂದು ಹೇಳಲು ಅಡ್ಡಿಯಿಲ್ಲ. ಎಲ್ಲಕ್ಕೂ ಹೆಚ್ಚಿನದೆಂದರೆ ಆರಂಭದಿಂದ ಕೊನೆಯವರೆಗೆ ಉತ್ತಮ ಗ್ರಂಥಕಾರರಿಗೆ ಒಪ್ಪುವ ಗಂಭೀರವೃತ್ತಿಯೇ ಇದರಲ್ಲಿ ಕಂಡುಬರುವದು.

ಕರ್ನಾಟಕದ ಏಕೀಕರಣವು ಕನ್ನಡಿಗರಿಗೆ ಅತ್ಯಂತ ಇಷ್ಟವಾದ ವಿಷಯವೆಂಬುದರಲ್ಲಿ ಸಂದೇಹವಿಲ್ಲ. ಇದರ ಹೊರತು ಕರ್ನಾಟಕದ ಅಭ್ಯುದಯಕ್ಕೆ ತರಣೋಪಾಯವೇ ಇಲ್ಲ. ಬೇರೆ ಬೇರೆ ಕಡೆಗೆ ಬಿದ್ದ ಕರ್ನಾಟಕದ ಭಾಗಗಳನ್ನು ಒಂದುಗೂಡಿಸಿ, ಒಂದೇ ಪ್ರಾಂತಿಕ ಸರಕಾರದ ಕೆಳಗೆ ತರುವಂತೆ ಪ್ರಯತ್ನಿಸುವದೇ ನಾವು ಮಾಡತಕ್ಕ ಕರ್ತವ್ಯಗಳಲ್ಲಿ ಆದ್ಯಕರ್ತವ್ಯವಾಗಿದೆ. ಇದ

ಕ್ಕಾಗಿ ಸತತ ಪ್ರಯತ್ನಮಾಡಬೇಕಾಗುವದರಿಂದ "ಕರ್ನಾಟಕ ಏಕೀಕರಣ ಸಂಘ" ವೆಂಬ ಮಧ್ಯವರ್ತಿ ಸಂಘವನ್ನು ಸ್ಥಾಪಿಸಿ, ಇದರ ಶಾಖಾಸಂಘಗಳನ್ನು ಜಿಲ್ಹೆ, ತಾಲೂಕು, ದೊಡ್ಡ ಊರುಗಳಲ್ಲಿ ಸ್ಥಾಪಿಸುವದು ಅವಶ್ಯವಾಗಿದೆ. ಸಂಯುಕ್ತಕರ್ನಾಟಕವೆಂಬ ಹೆಸರಿನ ಇಂಗ್ಲಿಷ (ಅರ್ಧ ಇಂಗ್ಲಿಷ ಮತ್ತು ಅರ್ಧ ಕನ್ನಡ) ವಾರಪತ್ರವೂ ಬೇಕು. ಒಟ್ಟಿಗೆ ಈ ವಿಷಯದ ಆತುರತೆಯನ್ನು ಕರ್ನಾಟಕದ ಪ್ರತಿಯೊಂದು ಮೂಲಿಯಲ್ಲಿ ಬಿದ್ದುಕೊಂಡಿರುವ ಹಳ್ಳಿಗೂ ಮುಟ್ಟಿಸುವಷ್ಟು ಕಾರ್ಯವನ್ನು ಮಾಡಿದರೆ, ನಮ್ಮ ಈ ನಾಟಕದೊಳಗಿನ ಪ್ರಥಮಾಂಕವನ್ನು ನಾವು ನಟಿಸಿದಂತಾಗುವದು. ಕೊನೆಯ ಸಿದ್ಧಿಯವರೆಗೆ ಇಂತಹ ಎಷ್ಟೋ ಅಂಕಗಳನ್ನು ನಾವು ನಟಿಸಬೇಕಾಗುವದೆಂಬದನ್ನು ಮರೆಯಲಾಗದು.

ಆಂಧ್ರ, ಉತ್ಕಲ ಪ್ರಾಂತಿಕ ಕಾಂಗ್ರೇಸ ಕಮೀಟಿಯವರು ಈ ವಿಷಯವನ್ನು ವಹಿಸಿಕೊಂಡು ಪ್ರಯತ್ನಮಾಡಿರುವದು ನಿಜವು. ಕರ್ನಾಟಕದ ಸ್ಥಿತಿಯು ಮಾತ್ರ ಬೇರೆಯಾಗಿದೆ. ಲೊ. ಟಿಳಕರಿಂದ ಮಹಾರಾಷ್ಟ್ರವೂ, ಲಾಲಾಜಿಯವರಿಂದ ಪಂಜಾಬವೂ, ಈಗ ಮಹಾತ್ಮಾ ಗಾಂಧಿಯವರಿಂದ ಗುಜರಾಥವೂ ಮುಂದೆ ಬಂದಿರುವಂತೆ, ಕರ್ನಾಟಕವನ್ನು ಮುಂದೆ ತರುವ ಮುಂದಾಳು ಇನ್ನೂ ಉದಯವಾಗಿಲ್ಲ. ಹೀಗೆ ಉದಯವಾಗಲಿಕ್ಕೆ ತಕ್ಕ ವಾತಾವರಣವು ಉಂಟಾಗಲೇ ಬೇಕು. ಹೀಗಾಗಲು ಮೊದಲು ಕರ್ನಾಟಕದ ಏಕೀಕರಣವಾಗಬೇಕು. ಇದಲ್ಲದೆ ಲಿಂಗವಂತ, ಜೈನ ಮೊದಲಾದವರು ಸಿಡಿದುನಿಂತಿರುವರು. ಇವರೆಲ್ಲರು ಒಂದಾಗಿ ಕಾರ್ಯವನ್ನು ಕೈಕೊಳ್ಳಬೇಕಾಗಿದೆ. ಕರ್ನಾಟಕಕ್ಕೆ ಪ್ರಾಂತಿಕ ಸರ್ಕಲ್ ದೊರೆತ ಕೂಡಲೆ, ಅಸಹಕಾರ ಚಳವಳಿಯು ಪ್ರಾರಂಭವಾದದರಿಂದ ಈ ವಿಷಯದ ಬಗ್ಗೆ ಹೋರಾಡಲು ಶಕ್ಯವಾಗಲಿಲ್ಲೆಂದು ನಮಗೆ ತೋರುತ್ತದೆ. ಇನ್ನು ಮೇಲೆ ರಾಷ್ಟ್ರೀಯ ಸಭೆಯು ಕೌನ್ಸಿಲಪ್ರವೇಶಕ್ಕೆ ಅನುಕೂಲಮತ ಕೊಟ್ಟರೆ, ( ಕೊಡುವ ಲಕ್ಷಣವಿದೆ. ) ಮಿ. ಕುಲಕರ್ಣಿಯವರು ಬರೆದ ಗ್ರಂಥವನ್ನು ಕರ್ನಾಟಕ ಪ್ರಾಂತಿಕ ಕಾಂಗ್ರೇಸ ಕಮೀಟಿಯು ಕೊರಳಿಗೆ ಕಟ್ಟಲಿಕ್ಕೆ ಕನ್ನಡಿಗರು ಹಿಂಜರಿಯಲಿಕ್ಕಿಲ್ಲೆಂದು ನನಗೆ ನಂಬಿಗೆಯದೆ. ಕರ್ನಾಟಕ ಪ್ರಾಂತಿಕ ಕಾಂಗ್ರೇಸ ಕಮೀಟಿಗೆ ಇದರಷ್ಟು ಬೇರೆ ಮಹತ್ವದ ಕಾರ್ಯವಿನ್ನೇನು?

ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವ ಚಳವಳಿಯು ಪ್ರಜೆಗಳ ಹಿತಕ್ಕೆ ಅವಶ್ಯಕವಾಗಿದೆ. ಸರಕಾರವೂ ಇದಕ್ಕೆ ಒಪ್ಪಿರುತ್ತದೆ. ನಮ್ಮಂತೆ ಇತರ

ಪ್ರಾಂತದವರೂ ಬೇಡುತ್ತಿರುವರು. ಇದರಲ್ಲಿ ದ್ವೇಷದ ಭಾವನೆಯು ಇರುವದಿಲ್ಲ. ಇದು ಜಾತಿಯ ಪ್ರಶ್ನವಲ್ಲ. ವಿಶಿಷ್ಟ ರಾಜಕೀಯ ಪಕ್ಷದ ಪ್ರಶ್ನವೂ ಅಲ್ಲ. ಇದು ಕೇವಲ ಕರ್ನಾಟಕದ ಅಭ್ಯುದಯದ ಪ್ರಶ್ನವಿರುತ್ತದೆ. ಆದ್ದರಿಂದ ಎಲ್ಲ ಜಾತಿಯ ಹಾಗು ಎಲ್ಲ ಪಕ್ಷದ ಜನರು ಇದರಲ್ಲಿ ಸಮಾವಿಷ್ಟರಾಗಿ ಪ್ರಯತ್ನಿಸಿದರೆ, ಬೇಗನೆ ಭಾಗ್ಯೋದಯವು ಗೋಚರವಾಗುವಂತಿದೆ.

ಆದ್ದರಿಂದ ರಾಷ್ಟ್ರೀಯಸಭೆಯ ಸುಮಂಗಲಪ್ರಸಂಗಕ್ಕೆಂದು ಬಂದುಕೂಡಿದ ಕನ್ನಡಿಗರು ಈ ಸುಮುಹೂರ್ತದಲ್ಲಿಯೇ "ಕರ್ನಾಟಕ ಏಕೀಕರಣ ಸಂಘ" ವನ್ನು ಸ್ಥಾಪಿಸಿ ಕಾರ್ಯತತ್ಪರರಾಗುವದು ಉಚಿತವು. ಮುಂದೆ ಕರ್ನಾಟಕ ಪ್ರಾಂತಿಕ ಕಾಂಗ್ರೇಸ ಕಮೀಟಿಯು ಈ ಕಾರ್ಯವನ್ನು ಕೈಕೊಂಡರೆ ನಿಮ್ಮ ಕಾರ್ಯಕ್ಕೆ ವಿಶೇಷ ಸಹಾಯವೇ ಆದೀತಲ್ಲದೆ ಹಾನಿಯೇನು? ರಾಷ್ಟ್ರೀಯ ಸಭೆಗೆ ಸೇರದ ಜನರು "ಕರ್ನಾಟಕ ಏಕೀಕರಣ ಸಂಘ"ದಲ್ಲಿ ಕೆಲಸಮಾಡಲಿಕ್ಕೂ ಆಸ್ಪದವಾಗುವದು.

ಈ ಗ್ರಂಥವನ್ನು ಓದಿದ ಕೂಡಲೆ ಮಿ. ಕುಲಕರ್ಣಿಯವರು ಹೊರಡಿಸಿದ ಕರ್ನಾಟಕ ನವಜೀವನ ಗ್ರಂಥಮಾಲೆಯ ಯೋಗ್ಯತೆಯೂ, ಅವಶ್ಯಕತೆಯೂ ಕಂಡುಬರುವದು. ಕನ್ನಡ ವಾಙ್ಮಯದಲ್ಲಿ ಅಗ್ರಸ್ಥಾನವನ್ನು ಪಡೆಯುವ ಉದ್ಗ್ರಂಥಗಳನ್ನು ಬಹು ಪರಿಶ್ರಮಪಟ್ಟು ಬರೆಯಬೇಕೆಂದು ಮಿ. ಕುಲಕರ್ಣಿಯವರು ಇಚ್ಛಿಸುತ್ತಿರುವರು. ಜನರ ಆಶ್ರಯವಿಲ್ಲದೆ ದೊಡ್ಡ ದೊಡ್ಡ ಗ್ರಂಥಗಳು ಹೊರಡುವದು ಶಕ್ಯವಿಲ್ಲ. ಇದು ಕನ್ನಡಿಗರ ಸಹಾಯದ ಮೇಲೆ ಅವಲಂಬಿಸಿರುವದರಿಂದ ಯೋಗ್ಯತೆಯಂತೆ ಪೋಷಕರಾಗಿ, ಆಶ್ರಯದಾತರಾಗಿ, ಚಂದಾದಾರರಾಗಿ ಸಹಾಯಮಾಡಿ, ಅವರು ಕೈಕೊಂಡಿರುವ ಕರ್ನಾಟಕದ ಸೇವಾ ಕಾರ್ಯಕ್ಕೆ ತುಸು ಕೈಹಚ್ಚಿ, ಶ್ರೇಯೋಭಾಗಿಗಳೂ, ಪುಣ್ಯಭಾಗಿಗಳೂ ಆಗಬೇಕೆಂದು ನಾನು ಮನಃಪೂರ್ವಕವಾಗಿ ಇಚ್ಛಿಸುತ್ತೇನೆ. ಗುಣ ಹಾಗು ಯೋಗ್ಯತೆಗಳನ್ನು ಪರೀಕ್ಷಿಸುವಷ್ಟು ಜಾಣತನವು ಕನ್ನಡಿಗರಲ್ಲಿರುವದರಿಂದ ತಕ್ಕ ಸಹಾಯವು ದೊರಕುವದೆಂದು ನಾನು ಆಶಿಸುತ್ತೇನೆ.

**ಬೆಳಗಾಂವಿ.**
ತಾ. ೨೫-೧೧-೧೯೨೪.

**ಎಚ್. ವ್ಹಿ. ಸವಣೂರ.**
L. M. & S.

———

# ವಿಷಯಾನುಕ್ರಮಣಿಕೆ.

# ಕನ್ನಡಿಗನ ಸರ್ವಸ್ವ

ಅಥವಾ

# ಸಂಯುಕ್ತ ಕರ್ನಾಟಕ ಪ್ರಾಂತ.



## ಮೊದಲನೆಯ ಪ್ರಕರಣ.



### ಪೂರ್ವಪೀಠಿಕೆ.



೧ ಕರ್ನಾಟಕವು ಎಲ್ಲಿರುವದು?, ೨ ಅಸ್ವಾಭಾವಿಕ ರಾಜಕೀಯ ವಿಭಾಗಗಳು, ೩ ಇದಕ್ಕೆ ಕಾರಣಗಳು, ೪ ಭಾಷೆಯಂತೆ ಪ್ರಾಂತವಿಭಾಗ, ೫ ಸದ್ಗೃಹಸ್ಥರ ಸಾಕ್ಷಿಗಳು, ೬ ಉಳಿದ ಪ್ರಾಂತದವರ ಚಳವಳಿಯು, ೭ ಕರ್ನಾಟಕ ಚಳವಳಿಯ ಸಂಕ್ಷಿಪ್ತ ಇತಿಹಾಸ, ೮ ಒಂದೇ ಉಪಾಯ.

**೧ ಕರ್ನಾಟಕವು ಎಲ್ಲಿರುವದು?:**—ಸಾಧಾರಣವಾಗಿ ೪ನೆಯ ಇಯತ್ತೆಯಲ್ಲಿ ಓದುತ್ತಿರುವ ಹುಡುಗನು ಕೈಯಲ್ಲಿ ಕರ್ನಾಟಕದ ಇತಿಹಾಸವನ್ನು ಹಿಡಿದಾಗ ತಾನು ಕನ್ನಡಿಗನೆಂದೂ, ಕರ್ನಾಟಕ ಪ್ರಾಂತದವನೆಂದೂ, ಮನೆಯಲ್ಲಿ ತಾಯಿಯು ಅಕ್ಕರತೆಯಿಂದ ಎತ್ತಿ ಮುದ್ದಿಟ್ಟು ಕಲಿಸಿದ ಮುದ್ದುಭಾಷೆಯು ಕನ್ನಡವೆಂದೂ ತಿಳಿಯುವದು ಅವಶ್ಯವಾಗಿದೆ. ಹೀಗೆ ತಿಳಿವಳಿಕೆಯಾದ ಹುಡುಗನು ಹಿಂದುಸ್ಥಾನದ ನಕ್ಷೆಯನ್ನು ನೋಡಿ “ ನನ್ನ ಮುದ್ದಿನ ಕನ್ನಡ ನಾಡೆಲ್ಲಿರುವದು, ಎಂದು ಆತುರದಿಂದ ಹುಡುಕಬಹುದು. ಗುರುಗಳನ್ನು ಕೇಳಬಹುದು. ಹಿಂದುಸ್ಥಾನದ ರಾಜಕೀಯ ವಿಭಾಗಗಳನ್ನು ಒಂದೊಂದಾಗಿ ಗುರ್ತಿಸಬಹುದು. ಆದರೇನು? ಕರ್ನಾಟಕಪ್ರಾಂತವು ಕಾಣಬಹುದೇನು? ಕರ್ನಾಟಕವು ಛಿನ್ನವಿಚ್ಛಿನ್ನವಾಗಿ ಬೇರೆ ಬೇರೆ ಪ್ರಾಂತಗಳಲ್ಲಿ ಅಡಕವಾಗಿದೆ ಎಂದು ಗುರುಗಳು ಹೇಳಿದಾಗ ಆ ಬಾಲಕನಿಗೂ ಕೂಡ ಅಸಮಾಧಾನವೆನಿಸಲಿಕ್ಕಿಲ್ಲವೆ? ಇನ್ನು ಕರ್ನಾಟಕದ ಇತಿಹಾಸವನ್ನು ಪಠಿಸಿ, ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ, ಕರ್ನಾಟಕದ ಸೇವೆಗಾಗಿ ಕಟಿಬದ್ಧರಾಗಿನಿಂತ ನಾವೆಲ್ಲರು, ಸರಕಾರವು ಪ್ರಾಂತಗಳನ್ನು ವಿಭಾ

ಗಿಸಿ ನೂರಾರು ವರ್ಷಗಳಾಗಿದ್ದರೂ ಕಾಲಕಾಲಕ್ಕೆ ಏರ್ಪಾಡುಗಳನ್ನು ಮಾಡು ತ್ತಲಿದ್ದರೂ ನಮ್ಮ ಕರ್ನಾಟಕವನ್ನು ಏಕೀಕರಿಸಿ ಸ್ವತಂತ್ರ ಪ್ರಾಂತವನ್ನು ಮಾಡಿ ರೆಂದು ಏಕಕಾಲಕ್ಕೆ ಎಲ್ಲೆಡೆಗಳಲ್ಲಿ ಒತ್ತಾಯಪಡಿಸಿದರೆ, ಇಂದಿಲ್ಲ ನಾಳೆಯಾ ದರೂ ಕರ್ನಾಟಕ ಪ್ರಾಂತವು ತಲೆದೋರದಿರದು.

**೨ ಅಸ್ವಾಭಾವಿಕ ರಾಜಕೀಯ ವಿಭಾಗಗಳು:—** ಸದ್ಯಕ್ಕೆ ಹಿಂದು ಸ್ಥಾನವನ್ನು ೧೫ ಪ್ರಾಂತಗಳನ್ನಾಗಿ ವಿಭಾಗಿಸಿರುವರು. ನಮ್ಮ ಕರ್ನಾಟಕದ ಅಂಶಗಳು ಮುಂಬೈ ಇಲಾಖೆಯಲ್ಲಿ ಕೆಲವು, ಮದ್ರಾಸ ಇಲಾಖೆಯಲ್ಲಿ ಕೆಲವು, ಮೈಸೂರ, ಹೈದರಾಬಾದ ಮೊದಲಾದ ಸಣ್ಣ ದೊಡ್ಡ ದೇಶೀಯ ಸಂಸ್ಥಾನಗ ಳಲ್ಲಿ ಕೆಲವು, ಹೀಗೆ ತ್ರಿವರ್ಗವಾಗಿ ವಿಂಗಡಿಸಲ್ಪಟ್ಟಿವೆಯೆಂದು ಸ್ಥೂಲಮಾನದಿಂದ ಹೇಳಬಹುದು. ರಾಷ್ಟ್ರೀಯ ಭಾವನೆಗಳಿಗೆ ಪರಿಪೋಷಕವಲ್ಲದ ಈ ಭಿನ್ನವಿಚ್ಛಿ ನ್ನತೆಯ ದುರದೃಷ್ಟವು ಕೇವಲ ಕನ್ನಡಿಗರನ್ನಷ್ಟೇ ಅಲ್ಲ, ಮರಾಟಿಗರಿಗೂ, ಓಡಿಸಾಪ್ರಾಂತದವರಿಗೂ, ತೆಲಗರಿಗೂ ಗಂಟುಬಿದ್ದು ಕಾಡುತ್ತಿದೆ. ಮುಂಬೈ ಇಲಾಖೆಯೆಂದರೆ ೧ ಸಿಂದೀ ಜನರು, ೨ ಗುಜರಾಥೀ ಜನರು, ೩ ಮರಾಟಿಗರು ೪, ಕನ್ನಡಿಗರು ಹೀಗೆ ನಾಲ್ವರನ್ನು ಒತ್ತಾಯದಿಂದ ಕೂಡಿಸಿ ಕಟ್ಟಿದ ಒಂದು ಗಂಟಾ ಗಿದೆ. ಇದೇ ರೀತಿ ಮದ್ರಾಸ ಇಲಾಖೆಯೆಂದರೆ ೧ ತೆಲಗರು, ೨ ತಮಿಳರು, ೩ ಉರಿಯಾಜನರು, ೪ ಕನ್ನಡಿಗರು, ೫ ಮಲಿಯಾಳಿಜನರು ಈ ಐವರನ್ನು ಬಿಗಿದ ಒಂದು ಗಂಟಾಗಿದ್ದು, ತುಸು ನಿರೀಕ್ಷಿಸಿ ನೋಡಿದರೆ ಮುಂಬೈ ಇಲಾಖೆಯು ಚತು ರ್ಮುಖ ಬ್ರಹ್ಮನಂತೆ ತೋರಿದರೆ ಮದ್ರಾಸ ಇಲಾಖೆಯು ಪಂಚಮುಖ ಪರಮಾ ತ್ಮನನ್ನು ಹೋಲಬಹುದಷ್ಟೇ? ಇದರಿಂದ ಯಾರ ಉನ್ನತಿಗೂ ಕಾರಣವಾ ಗದೆ ಪರಸ್ಪರ ದ್ವೇಷಾಸೂಯಗಳಿಗೆ ಮಾತ್ರ ತವರೂರಾಗಿವೆ. ಬಹುಸಂಖ್ಯಾ ಕರು ಲಘುಸಂಖ್ಯಾಕರನ್ನು ಬಗ್ಗುಬಡಿಯುವದರಲ್ಲಿಯೇ ಹಿಗ್ಗುತ್ತಿರುವರು.

**೩ ಇದಕ್ಕೆ ಕಾರಣಗಳು:—** ಇಂಗ್ಲೀಷ ಸರಕಾರದವರು ಬುದ್ಧಿಪುರ ಸ್ಸರವಾಗಿ ಹೀಗೆ ಮಾಡಿರುತ್ತಾರೆಂದು ಯಾರೂ ಆರೋಪಿಸುವಂತಿಲ್ಲ. ಇಡೀ ಹಿಂದುಸ್ಥಾನವನ್ನು ಒಂದೇ ಕಾಲದಲ್ಲಿ ಗೆಲ್ಲಲಿಲ್ಲ. ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಅರಸರ ಕೂಡ ಆದ ಕಾಳಗಗಳಿಂದಲೂ, ಒಪ್ಪಂದಗಳಿಂದಲೂ ಈಗಿನ ಪ್ರದೇಶಗಳು ಅವರಿಗೆ ದೊರಕಿರುತ್ತವೆ. ಒಂದು ಪ್ರದೇಶವು ದೊರೆತ ಕೂಡಲೆ ಸಮೀಪದಲ್ಲಿದ್ದ ತಮ್ಮ ಪ್ರದೇಶಗಳಿಗೆ ಜೋಡಿಸಿಕೊಂಡಿರುವದು ಕಂಡುಬರು

ತ್ತದೆ. ಬಳ್ಳಾರಿ, ಮಂಗಳೂರ ಈ ಕನ್ನಡ ಜಿಲ್ಹೆಗಳು ಮುಂಬೈ ಇಲಾಖೆಯಲ್ಲಿದ್ದರೆ ನೆಟ್ಟಗಾಗುತ್ತಿತ್ತೆಂದು ನಾವು ತಿಳಿಯುವದು ಸ್ವಾಭಾವಿಕವು. ಆದರೆ ಬಳ್ಳಾರಿ ಮಂಗಳೂರಗಳು ದೊರೆತಾಗ ಮುಂಬೈ ಇಲಾಖೆಯೇ ಅವರ ವಶದಲ್ಲಿ ಇಲ್ಲದಿರಲು ಅವುಗಳನ್ನು ಗತ್ಯಂತರವಿಲ್ಲದೆ ಮದ್ರಾಸಕ್ಕೆ ಜೋಡಿಸಿದರು. ಇದೇ ರೀತಿ ಸಿಂಧಪ್ರಾಂತವನ್ನು ಪಂಜಾಬಕ್ಕೆ ಜೋಡಿಸಿದ್ದರೆ ನೆಟ್ಟಗಾಗುತ್ತಿತ್ತೆಂದು ಕೆಲವರು ಹೇಳಬಹುದು. ೧೮೪೩ ರಲ್ಲಿ ಸಿಂಧಪ್ರಾಂತವನ್ನು ಗೆದ್ದಾಗ ಪಂಜಾಬವು ಅವರ ವಶದಲ್ಲಿರಲಿಲ್ಲ. ೧೮೪೯ ರಲ್ಲಿ ಅದು ಅವರ ಕೈಸೇರಿತು. ಆದ್ದರಿಂದ ಸಮೀಪದಲ್ಲಿದ್ದ ಹಾಗು ವಶವಾದ ಮುಂಬೈ ಇಲಾಖೆಗೆ ಸಿಂಧವನ್ನು ಗತ್ಯಂತರವಿಲ್ಲದೆ ಜೋಡಿಸಬೇಕಾಯಿತು ಇವೆಲ್ಲ ನಿಜವಿದ್ದರೂ ಒಮ್ಮೆ ಗೆಲ್ಲುವ ಕಾರ್ಯವು ತೀರಿದ ನಂತರ ಪ್ರಾಂತಗಳನ್ನು ಸ್ವಾಭಾವಿಕ ಪದ್ಧತಿಗನುಸರಿಸಿ ಹೊಂದಿಸಬಹುದಾಗಿತ್ತೆಂದು ಹೇಳಿದರೆ ತಪ್ಪಾಗದು. ಎಷ್ಟೋ ತಜ್ಞರು ಈ ವಿಷಯವನ್ನು ಪುಷ್ಟೀಕರಿಸಿದ್ದರೂ ಸರಕಾರದ ಔದಾಸೀನ್ಯದ ಧೋರಣದಲ್ಲಿ ಬೇಗ ಬದಲಾಗುವ ಲಕ್ಷಣಗಳಿಲ್ಲ. ಗೊತ್ತಿಲ್ಲದವರ ಗೊಡವೆಗೆ ಹೋಗದೆ ಒತ್ತಾಯಪಡಿಸುವವರ ಗರಜುಗಳನ್ನು ಮಾತ್ರ ಪೂರೈಸುತ್ತ ಸಾಗುವ ಧೋರಣವನ್ನು ಇಟ್ಟುಕೊಂಡಂತೆ ತೋರುತ್ತದೆ.

**೪ ಭಾಷೆಯಂತೆ ಪ್ರಾಂತವಿಭಾಗ:**—ಯಾವದೊಂದು ಸ್ವಾಭಾವಿಕ ಪದ್ಧತಿಯಿಂದ ಪ್ರಾಂತಗಳನ್ನು ವಿಭಾಗಿಸಬೇಕೆಂದು ತಜ್ಞರ ಅಭಿಪ್ರಾಯವು ಭಾಷೆ, ಧರ್ಮ, ಶಿಕ್ಷಣ, ಆಚಾರವಿಚಾರ, ಭೌಗೋಲಿಕ ಸಂಗತಿಗಳು ಇವುಗಳನ್ನು ಅನುಲಕ್ಷಿಸಿ ವಿಭಾಗಿಸುವದು ಸ್ವಾಭಾವಿಕವೆಂದು ಹೇಳಿದರೂ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದರಲ್ಲಿ ಸಮಂಜಸತನವೂ ಸೌಲಭ್ಯವೂ ತೋರುವದಲ್ಲದೆ ಉತ್ತರೋತ್ತರ ಪ್ರಾಂತಗಳ ಅಭ್ಯುದಯಕ್ಕೆ ಆಸ್ಪದವುಂಟೆಂದು ವಿದ್ವಾಂಸರು ಅನೇಕ ಪ್ರಮಾಣಗಳನ್ನು ತೋರಿಸಿ ಸಿದ್ಧಪಡಿಸಿರುವರು. “ ಸುಶಿಕ್ಷಿತರಪ್ರಾಂತ, ಅಶಿಕ್ಷಿತರಪ್ರಾಂತ ” ಎಂದು ಮಾಡಿದರೆ ಅಶಿಕ್ಷಿತರಿಗೆ ಸುಶಿಕ್ಷಿತರ ಸಂಪರ್ಕವಿಲ್ಲದಂತಾಗುವದು. ಇದು ನೆಟ್ಟಗಲ್ಲ. ಧರ್ಮದಂತೆ ಭಾಗಗಳನ್ನು ಮಾಡಿದರೆ ಬ್ರಾಹ್ಮಣರಪ್ರಾಂತ, ಲಿಂಗವಂಶರಪ್ರಾಂತಗಳೆಂದು ಕರೆಯುವದು ಇಷ್ಟವಾಗಿಲ್ಲ. ಯಾಕೆಂದರೆ ಒಂದು ಬ್ರಾಹ್ಮಣರ ಪ್ರಾಂತದಲ್ಲಿ ದಕ್ಷಿಣೀ ಬ್ರಾಹ್ಮಣ, ಕೊಂಕಣಸ, ತೆಲಗು, ಬಂಗಾಲೀ, ಗುಜರಾಥೀ, ಕನೋಜ ಬ್ರಾಹ್ಮಣ, ಸಾರಸ್ವತ

ಬ್ರಾಹ್ಮಣ ಮೊದಲಾದವರೆಲ್ಲರ ಸಮಾವೇಶವಾಗುವದರಿಂದಲೂ, ಇವರೆಲ್ಲರ ಭಾಷೆ, ಆಚಾರವಿಚಾರಗಳು ಭಿನ್ನವಾಗಿರುವದರಿಂದಲೂ ವ್ಯವಹಾರಕ್ಕೆ ಸೌಲಭ್ಯವಾದೀತೆಂದು ಭಾವಿಸಲಾಗದು. ಆದ್ದರಿಂದ ಸ್ವಾಭಾವಿಕ ಪದ್ಧತಿಗಳಲ್ಲಿ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದು ಸುಲಭವೂ ಅನುಕೂಲವೂ ಆಗಿರುತ್ತದೆ.

೫ **ಸದ್ಗೃಹಸ್ಥರ ಸಾಕ್ಷಿಗಳು:**—ಕನ್ಯಾಕುಮಾರಿಭೂಶಿರದಿಂದ ಹಿಮಾಲಯದವರೆಗಿನ ವಿದ್ಯೆ ಕಲಿತ ಯಾವ ಹಿಂದೀ ಗೃಹಸ್ಥನೂ ಈ ವಿಚಾರಕ್ಕೆ ವಿರೋಧವನ್ನುಂಟುಮಾಡಲಾರನು. ಆಂಧ್ರ, ಮರಾಟೆ, ಉರಿಯಾ, ಕನ್ನಡಗಳ ಮುಂದಾಳುಗಳೂ, ವಕ್ತಾರರೂ, ಲೇಖಕರೂ ಈ ವಿಷಯವನ್ನು ಸಪ್ರಮಾಣ ಮಂಡಿಸಿರುತ್ತಾರೆ. ಹಾಗು ವಿರೋಧವನ್ನು ಸಂಪೂರ್ಣ ಖಂಡಿಸಿರುತ್ತಾರೆ. ಇಲ್ಲಿ ಚರ್ವಿತ ಚರ್ವಣಕ್ಕೆ ಆಸ್ಪದವಿಲ್ಲದ್ದರಿಂದ ಕೇವಲ ರೈ. ಆ. ಮಾಂಟೆಗೂ ಹಾಗು ಲಾರ್ಡ ಹಾರ್ಡಿಂಜಧೊರೆಗಳ ಅಭಿಪ್ರಾಯವನ್ನಷ್ಟೇ ಕೊಡುವೆನು. “ಹಿಂದುಸ್ಥಾನದ ಸ್ವರಾಜ್ಯವೆಂದರೆ—ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಿ ಆಯಾ ಪ್ರಾಂತಗಳ ಆಢಳಿತೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು, ಮೇಲ್ವಿಚಾರಕ ಹಾಗು ಮಧ್ಯವರ್ತಿಯಾದ ಸರಕಾರದಿಂದ ಇವುಗಳನ್ನು ಕೇಂದ್ರೀಕರಿಸುವದೇ” ಎಂದು ರೈ. ಆ. ಮಾಂಟೆಗೂ ಧೊರೆಗಳು ಸಾರಿ ಹೇಳಿರುತ್ತಾರೆ. ಲಾರ್ಡ ಹಾರ್ಡಿಂಜರವರು ಈ ಮಾತಿನ ಪುರಸ್ಕರ್ತರಿದ್ದು, ಅವರು ಬಂದಕೂಡಲೆ ಆಸಾಮುಪ್ರಾಂತಕ್ಕೆ ಲಾರ್ಡ ಕರ್ಝನ್ನರವರು ಜೋಡಿಸಿದ ಬಂಗಾಲದ ಭಾಗವನ್ನು ಪುನಃ ಬಂಗಾಲಕ್ಕೆ ಜೋಡಿಸಿದ್ದಲ್ಲದೆ ಬಿಹಾರ ಓಡಿಸಾ ಪ್ರಾಂತವನ್ನು ಬೇರೆ ಮಾಡಿ ಉರಿಯಾ (ಓಡಿಸಾ) ಜನರನ್ನು ಏಕೀಕರಿಸಿದರು. “ಒಂದೇ ಎಡೆಯಲ್ಲಿ ಊಟಮಾಡುವದಕ್ಕಿಂತ ಒಂದೇ ಭಾಷೆಯನ್ನು ಮಾತಾಡುವದು ಒಕ್ಕಟ್ಟಿಗೆ ಹೆಚ್ಚಿನ ಸಾಧನ” ವೆಂದು ಪಂಡಿತ ವ್ಯಾಕ್ಸಮುಲ್ಲರವರ ಆಕಾಶವಾಣಿಯು ಇನ್ನೂ ಆಕಾಶದಲ್ಲಿ ಗುಡುಗುಡಿಸುತ್ತದೆ. ಆಕ್ಶನ್‌ಫ್ರಂಟರಂತೂ ಈ ವಿಷಯವನ್ನು ಸವಿಸ್ತರ ಚರ್ಚಿಸಿರುವರು. ಇಂಪೀರಿಯಲ್ ಕೌನ್ಸಿಲ್ (ಈಗಿನ ಲೇಜಿಸ್ಲೇಟಿವ್ಹ ಅಸೇಂಬ್ಲಿ) ದಲ್ಲಿ ಈ ವಿಷಯದ ಚರ್ಚೆ ನಡೆದಾಗ ಸರಕಾರವು ಖರ್ಚಿನ ಅಡಚಣಿಮೂಲಕ ಇಲ್ಲವೆ ಆತುರದ ಇತರ ಕೆಲಸಗಳ ಮೂಲಕ ಈ ವಿಷಯವನ್ನು ಹಿಂದಕ್ಕೆ ಇಟ್ಟಿರುವದಲ್ಲದೆ ಅಯೋಗ್ಯವೆಂದಾಗಲಿ, ಅಶಕ್ಯವೆಂದಾಗಲಿ ಈ ವಿಷಯವನ್ನು ಹಿಂದಟ್ಟಲಿಲ್ಲ.

**೬ ಉಳಿದ ಪ್ರಾಂತದವರ ಚಳವಳಿಯು:**—ಕನ್ನಡಿಗರು ಸ್ವತಂತ್ರ ಪ್ರಾಂತದ ವಿಷಯವಾಗಿ ಕೋಲಾಹಲವನ್ನೆಬ್ಬಿಸಿದಂತೆ ತೆಲಗರು, ಮರಾಟಿಗರು, ಉರಿಯಾಜನರು ಎಬ್ಬಿಸಿರುವರು. ಇವರೆಲ್ಲರ ಚಳವಳಿಯ ಸಂಕ್ಷಿಪ್ತ ಇತಿಹಾಸ ವನ್ನು ೧೭ನೆಯ ಪ್ರಕರಣದಲ್ಲಿ ನೋಡಬಹುದು. ಇಲ್ಲಿ ಹೇಳತಕ್ಕ ಮುಖ್ಯಾಂಶ ಗಳೆಂದರೆ-ಸ್ವತಂತ್ರಪ್ರಾಂತದ ಬಗ್ಗೆ ಕನ್ನಡಿಗರ ಕೋಲಾಹಲಕ್ಕಿಂತ ತೆಲಗರ ಹಾಗೂ ಉರಿಯಾಜನರ ಕೋಲಾಹಲವು "ನ ಭೂತೋ ನ ಭವಿಷ್ಯತಿ" ಎನಿಸುವಂತೆ ಪರಿಣಮಿಸಿತು. ಅವರ ಪರಿಶ್ರಮಕ್ಕೆ ತಕ್ಕಂತೆ ಅವರಿಗೆ ಅಲ್ಪ ಸ್ವಲ್ಪ ಯಶಸ್ಸು ದೊರೆತಿರುತ್ತದೆ. ಆದ್ದರಿಂದ ನನ್ನ ಕನ್ನಡ ಬಂಧುಗಳೇ! ಈ ವಿಷಯ ವನ್ನು ನಿಮ್ಮ ಸರ್ವಸ್ವವೆಂದು ತಿಳಿದು ಮೊದಲಿಗಿಂತಲೂ ಹೆಚ್ಚಿನ ಸ್ಫೂರ್ತಿದಾ ಯಕವಾದ ಚಳವಳಿಯನ್ನು ಬೇರೆ ಬೇರೆ ಪ್ರಾಂತಗಳಲ್ಲಿ ಪಸರಿಸಿದ ಎಲ್ಲ ಕನ್ನಡ ನಾಡುಗಳಲ್ಲಿ ಏಕಕಾಲಕ್ಕೆ ಎಬ್ಬಿಸಿ ಧ್ಯೇಯವು ಸಾಧ್ಯವಾಗುವವರೆಗೆ ಅದನ್ನು ಪದ್ಧತಿಗನುಸರಿಸಿ ಸಾಗಿಸುವದು ನಿಮ್ಮ ಆದ್ಯಕರ್ತವ್ಯವಾಗಲಿಕ್ಕಿಲ್ಲವೇ? ಇನ್ನು ಮುಂದೆ ಆಕ್ರಮಿಸಬೇಕಾದ ಮಾರ್ಗವು ಹೆಚ್ಚಾಗಿರುವದೇನೋ ನಿಜವು! ಹಿಂದೆ ನೀವು ಆಕ್ರಮಿಸಿದ ಮಾರ್ಗವು ನಿಮಗೆ ಪ್ರೋತ್ಸಾಹನಕೊಡುವದೆಂದು ಬಗೆದು ಇನ್ನುಮುಂಡೆ ನಿಮ್ಮವರ ಚಳವಳಿಯ ಸಂಕ್ಷಿಪ್ತ ಇತಿಹಾಸವನ್ನು ಕೊಡುವೆನು.

**೭ ಕರ್ನಾಟಕ ಚಳವಳಿಯ ಸಂಕ್ಷಿಪ್ತ ಇತಿಹಾಸ:**—ಕರ್ನಾಟ ಕದ ಉನ್ನತಿಯ ಬಗ್ಗೆ ಇದುವರೆಗೆ ಆದ ಚಳವಳಿಗಳನ್ನು ೧ ಭಾಷಾವಿಷಯಕ, ೨ ಧಾರ್ಮಿಕ, ೩ ರಾಜಕೀಯ ಹೀಗೆ ತ್ರಿವರ್ಗವಾಗಿ ವರ್ಗೀಕರಿಸಬಹುದು.

**(i) ಭಾಷಾವಿಷಯಕ:**–ತಾಳೀಕೋಟೆಯ ಕಾಳಗದಿಂದ (೧೫೬೫) ಸುಮಾರು ೩೦೦ ವರ್ಷಗಳವರೆಗೆ ಕರ್ನಾಟಕವು ತಲೆಯೆತ್ತಲಿಲ್ಲ. ಮುಸಲ್ಮಾ ನರು ಕನ್ನಡಿಗರ ಸೇಡು ತೀರಿಸುವದಕ್ಕಾಗಿ ಮರಾಟಿಗೆ ಪ್ರೋತ್ಸಾಹನ ಕೊಟ್ಟು ದೇ ಕಾರಣವು. ಮರಾಟಿಯ ಭ್ರಮೆಯನ್ನು ತೆಗೆದು ಕರ್ನಾಟಕದ ಅಭಿಮಾನ ವನ್ನು ಹುಟ್ಟಿಸಿದವರು ಡೆಪುಟಿ ಚನ್ನಬಸಪ್ಪನವರು (೧೮೫೬-೮೧). ಇವರ ಮಾರ್ಗವನ್ನು ಮುಂದೆ ವೆಂಕಟ ರಂಗೋ ಕಟ್ಟಿ, ತುರಮುರಿಯವರು ಗ್ರಂಥ ಬರೆದು ಪುಷ್ಟೀಕರಿಸಿದರು. ೧೮೯೦ ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವು ಧಾರ ವಾಡದಲ್ಲಿ ಸ್ಥಾಪಿತವಾಗಿ ಕನ್ನಡಭಾಷೆಗೆ ಆಧಾರಸ್ತಂಭವಾಯಿತು. ಈ ಸಂಘವು ಮೈಸೂರ ಕನ್ನಡಿಗರೊಡನೆಸಹ ಬಳಿಕೆಯನ್ನಿಟ್ಟಿತು. ಮೈಸೂರ ಶ್ರೀಮನ್ಮಹಾ

ರಾಜರ ಉದಾರಾಶ್ರಯದಿಂದ ಇದಕ್ಕೆ ಸ್ವತಂತ್ರವಾದ ಕಟ್ಟಡವು ದೊರಕಿತು. ಚಾಮರಾಜಮಂದಿರವೆಂದು ಹೆಸರಿಟ್ಟಿರುವರು. ಇದೇ ಕಾಲಕ್ಕೆ ಮಾಸಪತ್ರಿಕೆಗಳೂ, ವೃತ್ತಪತ್ರಗಳೂ ತಲೆದೋರಿ ಕರ್ನಾಟಕದಲ್ಲಿ ಜಾಗ್ರತೆಯನ್ನು ಪ್ರಾರಂಭಿಸಿದವು. ಕರ್ನಾಟಕವೃತ್ತಪತ್ರವು ಇದೇ ಧ್ಯೇಯವನ್ನಿಟ್ಟುಕೊಂಡಿರುವದು! ಸಂತೋಷ! ೧೯೧೪ರಲ್ಲಿ ಇತಿಹಾಸಮಂಡಳವು ಸ್ಥಾಪಿತವಾಯಿತು. ೧೯೧೫ರಲ್ಲಿ ಮೈಸೂರ ಶ್ರೀಮನ್ಮಹಾರಾಜರವರ ಪೋಷಣೆಯಿಂದ ಬೆಂಗಳೂರಲ್ಲಿ ಕರ್ನಾಟಕ ಸಾಹಿತ್ಯಪರಿಷತ್ತು ಸ್ಥಾಪಿಸಲ್ಪಟ್ಟಿತು. ಈ ಪರಿಷತ್ತು ಪ್ರತಿವರ್ಷ ಬೇರೆ ಬೇರೆ ಭಾಗಗಳಲ್ಲಿ ನೆರವೇರಿಸಲ್ಪಡುವಂತೆ ಏರ್ಪಾಡಾಗಿರುವದರಿಂದ ಎಲ್ಲ ಕನ್ನಡಿಗರು ಒಂದೆಡೆಯಲ್ಲಿ ಕುಳಿತು ವಿಚಾರ ವಿನಿಮಯಮಾಡಲಿಕ್ಕೆ ಅನುವು ದೊರೆಯಿತು. ಬ್ರಿಟಿಶ್ ಕರ್ನಾಟಕವು ಸಂಸ್ಥಾನಗಳ ಕರ್ನಾಟಕದೊಡನೆ ಬಳಿಕೆಯನ್ನಿಟ್ಟಿತು. ಅಂದಿನಿಂದ ಇದುವರೆಗೆ ಅನೇಕ ಗ್ರಂಥಗಳನ್ನು ಪ್ರಕಟಿಸಿ ಕರ್ನಾಟಕದ ಸೇವೆಯನ್ನು ಅಪ್ರತಿಮವಾಗಿ ಜರಗಿಸುತ್ತಿದ್ದದರಿಂದ ಶ್ರೀಮನ್ಮಹಾರಾಜರವರಿಗೆ ಕನ್ನಡಿಗರೆಲ್ಲರು ಅದೆಷ್ಟು ಕೃತಜ್ಞರಾಗಿದ್ದರೂ ತೀರದು. ೧೯೧೬ ರಲ್ಲಿ ಮೈಸೂರ ವಿಶ್ವವಿದ್ಯಾಲಯವು (ಯುನಿವ್ಹರ್ಸಿಟಿ) ಸ್ಥಾಪಿತವಾಗಿ ಕನ್ನಡಿಗರಿಗೆ ಮತ್ತಿಷ್ಟು ಹರ್ಷವಾಯಿತು. ಕರ್ನಾಟಕದಲ್ಲಿ ಉಚ್ಚಶಿಕ್ಷಣಕ್ಕೆ ಆಸ್ಪದವಿಲ್ಲೆಂಬ ಕುಂದನ್ನು ಹೋಗಲಾಡಿಸಬೇಕೆಂದು ರಾವಬಾ॥ ಎಸ್. ಕೇ. ರೊದ್ದ ಸಿ. ಆಯ್. ಈ. ನಾಮದಾರ ಬೆಳವಿ ಹಾಗೂ ರಾವಬಾ॥ ಆರ್. ಸಿ. ಅರಟಾಳ ಆಯ್. ಎಸ್. ಓ. ಈ ಮಹಾಶಯರು ಪ್ರಯತ್ನಮಾಡಿದರು. ಅದರಂತೆ ತಾ. ೨೦-೬-೧೯೧೭ ದಿವಸ ಧಾರವಾಡದಲ್ಲಿ ಕರ್ನಾಟಕ ಕಾಲೇಜವು ನೆಲೆಗೊಂಡಿತು. ಬ್ರಾಹ್ಮಣ ಲಿಂಗಾಯತರ ಒಕ್ಕಟ್ಟಿನಿಂದ ಕರ್ನಾಟಕದ ಉದ್ಧಾರವು ಕಟ್ಟಿಟ್ಟ ಮಾತೆಂಬದಕ್ಕೆ ಇದಕ್ಕೂ ಹೆಚ್ಚಿನ ನಿದರ್ಶನಗಳೇಕೆ? ಈ ಆನಂದದ ತರಂಗವು ನಿಲ್ಲುವಷ್ಟರಲ್ಲಿಯೇ ೧೯೨೨ ರಲ್ಲಿ ಮುಂಬೈ ವಿಶ್ವವಿದ್ಯಾಲಯವು ಬಿ. ಎ. ಪರೀಕ್ಷೆಗೆ ಕನ್ನಡವನ್ನು ಸ್ವೇಚ್ಛೆಯ ವಿಷಯವಾಗಿ ಗೊತ್ತುಪಡಿಸಿತು. ಇದರಿಂದ ಕನ್ನಡಭಾಷೆಗೆ ಮತ್ತಿಷ್ಟು ಕಳೆಯೇರಿತು. ಈಗಂತೂ ಕರ್ನಾಟಕದಲ್ಲಿ ಅತ್ತಿತ್ತ ಸಂಘಗಳು ಸ್ಥಾಪಿತವಾಗಿದ್ದು ಕನ್ನಡ ಭಾಷಾಭಿಮಾನದ ಸುಳಿಗಾಳಿಯು ಸುಳಿಯತೊಡಗಿದೆ. ಮದ್ರಾಸದಲ್ಲಿ ಕರ್ನಾಟಕಸಂಘವೂ ಮುಂಬೈಯಲ್ಲಿ ಕರ್ನಾಟಕಸಂಘವೂ ಅನಂತಪೂರ ಸರಸ್ವತಿನಿಕೇತನವೆಂಬ ಕನ್ನಡಸಂಘವೂ, ಬೆಳಗಾಂವಿಯ ಕನ್ನಡಸಂಘವೂ

ಸ್ಥಾಪಿತವಾಗಿವೆ. ವಾಚನಾಲಯಗಳೂ ವಿಶೇಷವಾಗಿವೆ. ಗ್ರಂಥಕರ್ತರು ವಿವಿಧ ವಿಷಯಗಳ ಮೇಲೆ ಗ್ರಂಥಗಳನ್ನು ರಚಿಸಿರುವರು. ತಾ॥ ೨೫-೮,೧೯೨೪ ದಿವಸ ಮುಂಬೈ ಗವ್ಹರ್ನರರಾದ ನೇಕನಾಮದಾರ ಸರ್ ಲೆಸ್ಲಿವಿಲ್ಸನ್ ಧೊರೆಗಳು ಇತ್ತ ಕಡೆಗೆ ಆಗಮಿಸಿದಾಗ ಧಾರವಾಡದವರು ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸಬೇಕೆಂದು ಬಿನ್ನಹಮಾಡಿಕೊಂಡರು. ಕರ್ನಾಟಕ ವಿದ್ಯಾವರ್ಧಕ ಸಂಘವು ಈಗಿನ ಯುನಿವ್ಹರ್ಸಿಟಿ ರಿಫಾರ್ಮ ಕಮಿಟಿಗೆ ಈ ಬಗ್ಗೆ ಅರ್ಜಿಯನ್ನು ಹಾಕಿರುತ್ತದೆ. ಇವೆಲ್ಲ ಲಕ್ಷಣಗಳನ್ನು ನೋಡಲಾಗಿ ಕರ್ನಾಟಕದಲ್ಲಿ ಅರುಣೋದಯದ ಸ್ಪಷ್ಟ ಲಕ್ಷಣಗಳು ಕಂಡುಬರುತ್ತವೆ. ಹೀಗಿರಲು ಕರ್ನಾಟಕದ ಭಾಗ್ಯರವಿಯು ಇನ್ನು ಮೂಡದೆ ಹೋಗುವನೇ?

(ii) **ಧಾರ್ಮಿಕ**:—ಕರ್ನಾಟಕದ ಏಕೀಕರಣ ವಿಷಯದಲ್ಲಿ ಬ್ರಾಹ್ಮಣರ ಧಾರ್ಮಿಕ ಸಭೆಗಳು, ವೀರಶೈವರ ಮಹಾಸಭೆಗಳು, ಜೈನರ ಪರಿಷತ್ತುಗಳು, ಭಗವದ್ಭಕ್ತರ ಕಥೆಸಂಕೀರ್ತನೆಗಳು ಪರ್ಯಾಯದಿಂದ ಕಾರಣಗಳಾಗಿರುತ್ತವೆಂಬದನ್ನು ನಾವು ಒಪ್ಪಿಕೊಳ್ಳಲೇ ಬೇಕು. ಇವುಗಳ ಮುಖ್ಯ ಉದ್ದೇಶವು ಧಾರ್ಮಿಕವಾಗಿದ್ದರೂ ದೂರದೂರಿನ ಕನ್ನಡಿಗರನ್ನು ಒತ್ತಟ್ಟಿಗೆ ತರಿಸಿ, ಅವರಲ್ಲಿ ವಿಚಾರವಿನಿಮಯಕ್ಕೆ ಆಸ್ಪದವನ್ನುಂಟುಮಾಡಿದವೆಂದು ಹೇಳಲು ಬಾಧೆಯೇನು?

(iii) **ರಾಜಕೀಯ**:—ಕರ್ನಾಟಕವು ತನ್ನದೊಂದು ಸ್ವತಂತ್ರಪ್ರಾಂತವನ್ನು ಪಡೆಯಲೋಸುಗ ರಾಜಕೀಯ ದೃಷ್ಟಿಯಿಂದ ಹೇಗೆ ಹೋರಾಡಿರುತ್ತದೆಂಬದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆನು. ಈ ರಾಜಕೀಯ ಚಳವಳಿಯು ಮಹತ್ವದ್ದಾಗಿದ್ದು, ಉಳಿದ ಭಾಷಾವಿಷಯಕ ಹಾಗೂ ಧಾರ್ಮಿಕ ಚಳವಳಿಗಳು ಇದಕ್ಕೆ ಪರ್ಯಾಯದಿಂದ ಸಹಾಯಕಗಳಾಗಿರುತ್ತವೆಂಬಂಶವನ್ನು ಮುಂದಿನ ಚಳವಳಿಗಾರರು ಲಕ್ಷದಲ್ಲಿಟ್ಟು ರಾಜಕೀಯ ದೃಷ್ಟಿಯಿಂದ ಈ ವಿಷಯದ ಬಗ್ಗೆ ಹೋರಾಡಬೇಕು. ಎಲ್ಲಕ್ಕೂ ಮೊದಲು ಭಾಷೆಯಂತೆ ಪ್ರಾಂತವಿಭಾಗದ ಕಲ್ಪನೆಯನ್ನು ಕನ್ನಡಿಗರ ಮನಸ್ಸಿನಲ್ಲಿ ವಂಗಭಂಗ ಚಳವಳಿಯೇ ಹುಟ್ಟಿಸಿತು. ೧೯೦೫ ರಲ್ಲಿ ಲಾರ್ಡ ಕರ್ಝನ್‌ಸಾಹೇಬರು ಪೂರ್ವ ಬಂಗಾಲದ ರಾಜಶಾಹಿ, ಡಾಕಾ, ಚಿತಗಾಂಗ ಈ ಮೂರು ಜಿಲ್ಹೆಗಳನ್ನು ಆಸಾಮಪ್ರಾಂತಕ್ಕೆ ಕೂಡಿಸಿ, ಬಂಗಾಲವನ್ನು ಇಬ್ಭಾಗಮಾಡಿದರು. ತಮ್ಮ ನಾಡಿನ ಹಾಗೂ ನುಡಿಯ ಬಗ್ಗೆ ಅತ್ಯಂತಾಭಿಮಾನವನ್ನು ವಹಿಸುತ್ತಿರುವ ವಂಗಬಂಧುಗಳಿಗೆ ಇದು ಸಹನವಾಗದೆ “ನ

ಭೂತೋ ನ ಭವಿಷ್ಯತಿ" ಎನಿಸುವಂತೆ ಪ್ರಚಂಡವಾದ ಚಳವಳಿಯನ್ನೆಬ್ಬಿಸಿದರು. ಮುಂದೆ ಲಾರ್ಡ ಹಾರ್ಡಿಂಜರವರು ೧೯೧೧ ರಲ್ಲಿ ಪುನಃ ಬಂಗಾಲವನ್ನು ಏಕೀಕರಿಸಿರುವದರಿಂದ ವಂಗಬಂಧುಗಳಿಗೆ ಯಶಸ್ಸು ದೊರೆಯಿತಲ್ಲದೆ ಇತ್ತಕಡೆಗೆ ಲಕ್ಷವನ್ನಿಟ್ಟು ನೋಡುತ್ತಿದ್ದ ಉಳಿದ ಪ್ರಾಂತದವರಿಗೆ ಪ್ರೋತ್ಸಾಹನವನ್ನುಂಟು ಮಾಡಿತು. ಬಂಗಾಲವು ಇಭ್ಭಾಗವಾದಾಗ ಮುಸಲ್ಮಾನರಿಗೂ ಉರಿಯಾ ಜನರಿಗೂ ಅನುಕೂಲವಾಗಿತ್ತು. ಆದರೆ ಅದು ಪುನಃ ಏಕೀಕರಿಸಲ್ಪಟ್ಟುದರಿಂದ ಉರಿಯಾ ಜನರು ಚಳವಳಿಯನ್ನಾರಂಭಿಸಿದರು. ಇವರಿಗೆ ಸಂಪೂರ್ಣವಾಗಿ ಯಶಸ್ಸು ದೊರೆಯದಿದ್ದರೂ ಲಾರ್ಡ ಹಾರ್ಡಿಂಜರವರು ಬಿಹಾರ ಮತ್ತು ಓಡಿಸಾ ಪ್ರಾಂತವನ್ನು ಒಂದುಗೂಡಿಸಿದ್ದರಿಂದ ಇವರ ಗರಜು ಬಹುಮಟ್ಟಿಗೆ ಪೂರೈಸಿದಂತಾಗಿದೆ. ಇದನ್ನು ನೋಡಿ ತೆಲಗರು ತಮ್ಮದೊಂದು ಸ್ವತಂತ್ರ ಪ್ರಾಂತವಿರಬೇಕೆಂದು ಪ್ರಯತ್ನಮಾಡತೊಡಗಿದರು. ಇವರಿಗೆ ಇನ್ನೂ ಯಶಸ್ಸು ದೊರೆತಿಲ್ಲವಾದರೂ ೧೯೧೭ ರಲ್ಲಿ ರಾಷ್ಟ್ರೀಯ ಸಭೆಯಲ್ಲಿ ತೆಲಗುನಾಡಿಗೆ ಸ್ವತಂತ್ರ ಪ್ರಾಂತವಿರಬೇಕೆಂದು ನಿರ್ಣಯಿಸಿಕೊಂಡರು. ಶ್ರೀಯುತ ಬಿ. ಎನ್. ಶರ್ಮಾ ಎಂಬವರು ೧೯೧೮ ರಲ್ಲಿ ಇಂಪೀರಿಯಲ್ ಕೌನ್ಸಿಲದಲ್ಲಿ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವ ಕುರಿತು ಒಂದು ಠರಾವನ್ನು ತಂದಿದ್ದರು. ಸರಕಾರದವರು ತಾತ್ವಿಕದೃಷ್ಟಿಯಿಂದ ಆದಕ್ಕೆ ಯಾವತರದ ವಿರೋಧವನ್ನು ತಕ್ಕೊಳ್ಳದೆ ಕೇವಲ ಇತರ ಅಡಚಣಿಗಳ ಮೂಲಕ ಅದನ್ನು ಹಿಂದಿಟ್ಟರು. ೧೯೧೭ ರಲ್ಲಿ ಸ್ಟೇಟ ಸೆಕ್ರೇಟರಿಯವರಾದ ಮಾಂಟೆಗೂಸಾಹೇಬರು ಪಾರ್ಲಿಮೆಂಟದಲ್ಲಿ ಹಿಂದುಸ್ಥಾನದ ಸಂಬಂಧವಾಗಿ ಮಾತಾಡುವಾಗ ಈ ವಿಷಯಕ್ಕೆ ಒಳ್ಳೇ ಚಾಲನೆಯನ್ನು ಕೊಟರು. ಇಷ್ಟಲ್ಲದೆ ೧೯೧೮ ರಲ್ಲಿ ಹಿಂದುಸ್ಥಾನಕ್ಕೆ ಬಂದು ರಾಜಕೀಯ ಸುಧಾರಣೆಯ ಬಗ್ಗೆ ವಿಚಾರಮಾಡಿ "ಮಾಂಟೆಗೂ ಚೇಮ್ಸಫರ್ಡ ರಿಪೋರ್ಟ" ಎಂಬ ಪುಸ್ತಕವನ್ನು ಪ್ರಸಿದ್ಧಪಡಿಸಿದರು. ಈ ಪುಸ್ತಕದಲ್ಲಿಯೂ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದು ಎಲ್ಲ ರಾಜಕೀಯ ಸುಧಾರಣೆಗಳ ಮೊದಲು ಮೆಟ್ಟಾಗಿರುವದೆಂಬದನ್ನು ಸಾರಿಹೇಳಿ, ಹಿಂದುಸ್ಥಾನದ ಅಧಿಕಾರಿಗಳು ಇತ್ತಕಡೆಗೆ ಗಮನ ಕೊಡಬೇಕೆಂಬ ಉಪದೇಶವನ್ನು ಮಾಡಿರುವರು. ಈ ಧೊರೆಗಳು ರಾಜಕೀಯ ಸುಧಾರಣೆಗಾಗಿ ಇಲ್ಲಿ ಬಂದ ಕಾಲದಲ್ಲಿ ಧಾರವಾಡದ ಕನ್ನಡಿಗರು ಕನ್ನಡಪ್ರಾಂತವನ್ನು ಏಕೀಕರಿಸಿ ಒಂದು ಸ್ವತಂತ್ರ ಪ್ರಾಂತವನ್ನು ಮಾಡುವ ಬಗ್ಗೆ ಒಂದು ಅರ್ಜಿಯನ್ನು ಕಳಿಸಿದ್ದರು. ( ಈ ಅರ್ಜಿಯನ್ನು ಪುರವಣಿಯಲ್ಲಿ ನೋಡಿರಿ. )

ಮತ್ತು ಊರಲ್ಲಿ ಪ್ರಚಂಡವಾದ ಸಭೆಯನ್ನು ಕೂಡಿಸಿ ಈ ವಿಷಯದಲ್ಲಾದ ಒಂದು ನಿರ್ಣಯವನ್ನು ಅನೇಕ ಜನರ ಸಹಿಯೊಡನೆ ಅರ್ಪಿಸಿದ್ದರು. ಕರ್ನಾಟಕವು ಈಗ ಚೇತರಿಸತೊಡಗಿತು. ಸ್ವತಂತ್ರಪ್ರಾಂತದ ಭಾವನೆಯು ಅದರಲ್ಲಿ ಬಲವತ್ತರವಾಯಿತು. ೧೯೨೦ ನೆಯ ಎಪ್ರಿಲ್‌ದಲ್ಲಿ ಲೋ. ಟಿಳಕರು "ಕಾಂಗ್ರೇಸ ಡಿಮಾಕ್ರಟಿಕ್ ಪಾರ್ಟಿ"ಯನ್ನು ಸ್ಥಾಪಿಸಿ ಅದರದೊಂದು ಜಾಹೀರನಾಮೆಯನ್ನು ಪ್ರಕಟಿಸಿದರು. ಭಾಷೆಯಂತೆ ಪ್ರಾಂತವನ್ನು ವಿಭಾಗಿಸುವದು ತಮ್ಮ ಧ್ಯೇಯಗಳಲ್ಲಿ ಒಂದಾಗಿರುತ್ತದೆಂಬದನ್ನು ಕಾಣಿಸಿದ್ದರು. ಹೀಗೆ ಅನುಕೂಲಗಾಳಿಯು ಬೀಸುತ್ತಿರುವಾಗ ತೂರಿಕೊಳ್ಳದಿರುವದು ಜಾಣತನವಲ್ಲವೆಂದು ಧಾರವಾಡದ ಕನ್ನಡಿಗರು ಭಾವಿಸಿ ೧೯೨೦ ನೆಯ ಮೇ ತಿಂಗಳಲ್ಲಿ ಕರ್ನಾಟಕ ರಾಜಕೀಯ ಸಭೆಯನ್ನು ಸ್ಥಾಪಿಸಿದರು. ಇದರ ಮೊದಲನೇ ಪರಿಷತ್ತು ಮೇ ತಿಂಗಳಲ್ಲಿ ಕೂಡಿತ್ತು. ಇದಕ್ಕೆ ದಿವಾಣಬಹಾದ್ದೂರ ವ್ಹಿ. ಪಿ. ಮಾಧವರಾಯರು ಅಧ್ಯಕ್ಷರಾಗಿದ್ದರು. ಇವರು ತಮ್ಮ ಭಾಷಣದಲ್ಲಿ ಸ್ವತಂತ್ರವಾದ ಕರ್ನಾಟಕ ಪ್ರಾಂತವು ಶಕ್ಯವಾಗಿದೆ ಎಂಬದನ್ನು ಘಂಟಾಘೋಷದಿಂದ ಸಾರಿ ಹೇಳಿದರು. (ಪುರವಣಿಯಲ್ಲಿ ಕೊಟ್ಟ ಇವರ ಭಾಷಣದ ಸಾರಾಂಶವನ್ನು ನೋಡಿರಿ.) ಅನಂತರ ಕರ್ನಾಟಕವು ರಾಷ್ಟ್ರೀಯ ಸಭೆಯಿಂದ ಕರ್ನಾಟಕಪ್ರಾಂತಕ್ಕೆ ಒಪ್ಪಿಗೆಯನ್ನು ಪಡೆಯಬೇಕೆಂದು ಪ್ರಯತ್ನಮಾಡತೊಡಗಿತು. (ರಾಷ್ಟ್ರೀಯ ಸಭೆಯ ಚಾಲಕರಿಗೆ ಕನ್ನಡಿಗರು ಹಾಕಿದ ಅರ್ಜಿಯನ್ನು ಪುರವಣಿಯಲ್ಲಿ ಕೊಟ್ಟದೆ.) ಇದಕ್ಕನುಗುಣವಾಗಿ ೧೯೨೦ ರಲ್ಲಿ ನಾಗಪೂರದಲ್ಲಿ ಆದ ರಾಷ್ಟ್ರೀಯ ಸಭೆಯಲ್ಲಿ ಕರ್ನಾಟಕಪ್ರಾಂತಕ್ಕೆ ಒಪ್ಪಿಗೆ ದೊರೆಯಿತು. ರಾಷ್ಟ್ರೀಯ ಸಭೆಯ ಒಪ್ಪಿಗೆ ದೊರೆತ ಮಾತ್ರಕ್ಕೆ ಕರ್ನಾಟಕವು ಪ್ರಾಂತಿಕಸ್ವರೂಪವನ್ನು ಪಡೆಯಿತೆಂದು ಹೇಳಲಾಗದು. ಆದರೂ ಇದುವರೆಗೆ ಹಿಂದುಸ್ಥಾನದಲ್ಲಿ ಅತ್ಯಂತ ಮಹತ್ವದ ಹಾಗೂ ವರ್ಚಸ್ಸುಳ್ಳ ಸಂಸ್ಥೆಯೆನಿಸಿದ ರಾಷ್ಟ್ರೀಯ ಸಭೆಯಿಂದ ಒಪ್ಪಿಗೆ ದೊರೆತದ್ದು ಸಾಮಾನ್ಯವಾದ ಕೆಲಸವಲ್ಲ. ಮುಂದೆ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವ ಪ್ರಸಂಗ ಒದಗಿದಾಗ ಈ ವಿಷಯವನ್ನು ಮರೆತು ಸಾಗುವಂತಿಲ್ಲ. ಕಳೆದ ಚುನಾವಣೆಯಲ್ಲಿ ಲೇಜಿಸ್ಲೆಟಿವ್ಹ ಅಸೆಂಬ್ಲಿಗೆ ಪ್ರೋಫೇಸರ ಲಠ್ಠೆಯವರು ದಕ್ಷಿಣಭಾಗದವತಿಯಿಂದ ಸಭಾಸದರಾಗಿದ್ದರು. ಇವರು ೧೯೨೧ ರಲ್ಲಿ ಈ ವಿಷಯವಾಗಿ ಒಂದು ಠರಾವನ್ನು ತಂದಿದ್ದರು. ರಾಜ್ಯದಾಢ್ಯಳತೆಯಲ್ಲಿ ಬಲವು ಬರುವಂತೆಯೂ, ಪ್ರಾಂತಿಕ ಉನ್ನತಿಯು ತೀವ್ರವಾಗಿ ಆಗುವಂತೆಯೂ ಸದ್ಯದ ಪ್ರಾಂತಗಳನ್ನು ಹೆಚು ಸ್ವಾಭಾವಿಕವೆನಿ

ಸಿದ ರೀತಿಯಿಂದ ವಿಭಾಗಿಸಬೇಕೆಂಬುದೂ ಮತ್ತು ಈ ತರದ ಪುನರ್ರಚನೆಯಲ್ಲಿ ಆಗತಕ್ಕ ಬದಲಾವಣೆಯನ್ನು ಸೂಚಿಸಿ ರಿಪೋರ್ಟ ಮಾಡುವ ಒಂದು ಕಮಿಟಿ ಯನ್ನು ನಿಯಮಿಸಬೇಕೆಂಬುದೂ ಇವರ ಠರಾವಿನ ಅಭಿಪ್ರಾಯವಾಗಿತ್ತು. ಇವರು ಈ ಠರಾವಿನಲ್ಲಿ "ಭಾಷೆಗನುಸರಿಸಿ" ಎಂಬ ಶಬ್ದದ ಬದಲು "ಸ್ವಾಭಾವಿಕ ಪದ್ಧತಿ" ಎಂಬ ಶಬ್ದವನ್ನು ಉಪಯೋಗಿಸಿದ್ದರೂ ಭಾಷೆಯಷ್ಟು ಸ್ವಾಭಾವಿಕವು ಇನ್ನೊಂದಾಗದೆಂದು ಒಡೆದು ಹೇಳಬೇಕಾಗಿಲ್ಲ. ೧೯೨೪ ನೆಯ ಮೇ ತಿಂಗಳಲ್ಲಿ ಗೋಕರ್ಣದಲ್ಲಿ ಕೂಡಿದ ಕರ್ನಾಟಪ್ರಾಂತಿಕ ಸಭೆಯಲ್ಲಿ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ (ಕಾರವಾರ ಹಾಗೂ ಮಂಗಳೂರ) ಜಿಲ್ಹೆಗಳನ್ನು ಕಾರ್ಯಸೌಕರ್ಯಕ್ಕಾಗಿ ಒಂದುಗೂಡಿಸುವ ವಿಚಾರವು ನಡೆದಿತ್ತು. ಇವೆಲ್ಲವನ್ನು ನೋಡಲಾಗಿ ಆದಷ್ಟು ಸಮಾಧಾನಕರವಾಗಿದೆಯೆಂದು ಕಂಡುಬಂದರೂ ಸಾಕಷ್ಟಾಗಲಿಲ್ಲೆಂದು ಒಪ್ಪಿಕೊಳ್ಳಬೇಕಾಗಿದೆ. ಇದಕ್ಕೆ ಕಾರಣವೇನಂದರೆ ಎಲ್ಲ ಭಾಗಗಳಲ್ಲಿ ಏಕಕಾಲಕ್ಕೆ ಗಲಭೆಯೇಳಲಿಲ್ಲ. ಹಾಗೂ ಎದ್ದ ಗಲಭೆಯು ಕಡೆಗೂ ಪೂರ್ಣೈಸಲಿಲ್ಲ.

**೮ ಒಂದೇ ಉಪಾಯ:**—ಕರ್ನಾಟಕವನ್ನು ಮುಂದೆ ತರುವದಕ್ಕಾಗಿ ಹಲವು ಪ್ರಯತ್ನಗಳಾಗಿವೆ. ಈಗಲೂ ಆಗುತ್ತಿವೆ. ಅವುಗಳಲ್ಲಿ ಭಾಷೆಯಂತೆ ಪ್ರಾಂತವಿಭಾಗಕ್ಕೆ ಅಗ್ರಸ್ಥಾನವನ್ನು ಕೊಡಲೇಬೇಕು. ಶಕ್ಯವಿಲ್ಲೆಂದು ಕೆಲವರೂ, ಗ್ರಂಥಪ್ರಸಾರ, ಶಿಕ್ಷಣಪ್ರಸಾರಗಳಿಂದಲೇ ಕರ್ನಾಟಕವು ಮುಂದೆ ಬರುವದೆಂದು ಕೆಲವರೂ ಭಾವಿಸಿ, ಈ ಪ್ರಾಂತಿಕ ಏಕೀಕರಣವನ್ನು ದುರ್ಲಕ್ಷಿಸಬಹುದು. ಆದರೆ ಕೇವಲ ಗ್ರಂಥಪ್ರಸಾರದಿಂದ ಬೇರೆ ಕಡೆಗೆ ಸಿಡಿದುಬಿದ್ದ ಕನ್ನಡ ಜಿಲ್ಹೆಗಳು ಜಾದುಗಾರನ ಮಾಟದಂತೆ ಒಟ್ಟುಗೂಡಲಾರವು. ಇದರಿಂದ ನಾನು ಗ್ರಂಥರಚನೆಗೆ ವಿರುದ್ಧವಾಗಿರುವೆನೆಂದು ಯಾರೂ ತಿಳಿಯಬಾರದು. ಕರ್ನಾಟಕದ ಅಭ್ಯುದಯಕ್ಕೆ ಒಂದೇ ತರಣೋಪಾಯವು? ಅದು ಯಾವದೆಂದರೆ ಕರ್ನಾಟಕಪ್ರಾಂತವನ್ನು ಪಡೆಯುವದು. ಇದು ಸಾವಿತ್ರಿಯ ವರದಂತೆ ಅದೆ. ಇದೊಂದು ಕೈಗೂಡಿದರೆ ಎಲ್ಲವು ತಾವೇ ಕೈಗೂಡುವವು. ಆದ್ದರಿಂದ ಇದು ಪ್ರತಿಯೊಬ್ಬ ಕನ್ನಡಿಗನ ಸರ್ವಸ್ವವಾಗಿರುವದು. ಈ ವಿಷಯವನ್ನು ಸಾದ್ಯಂತವಾಗಿ ಚರ್ಚಿಸಿದ ಈ ಗ್ರಂಥಕ್ಕೂ ಕನ್ನಡಿಗನ ಸರ್ವಸ್ವವೆಂದೇ ಹೆಸರಿಟ್ಟದೆ. ನನ್ನ ಕನ್ನಡ ಬಂಧುಗಳೇ! ನಿಮಗೆ ಸಮರ್ಪಿಸಿದ ನಿಮ್ಮ ಸರ್ವಸ್ವವನ್ನು ಆದರದಿಂದ ಸ್ವೀಕರಿಸಿ ಈ ವಿಷಯಕ್ಕೆ ಹೆಚ್ಚು ಚಾಲನೆಯನ್ನು ಕೊಟ್ಟು ನಿಮ್ಮ ಧ್ಯೇಯವು ಸಾಧ್ಯ

ವಾಗುವವರೆಗೆ ಸತತ ಪ್ರಯತ್ನಮಾಡಬೇಕೆಂಬುದೇ ನನ್ನ ಪ್ರಾರ್ಥನೆಯು. ಬರುವ ದಿಶಂಬರ ತಿಂಗಳಲ್ಲಿ ಕರ್ನಾಟಕವು ರಾಷ್ಟ್ರೀಯ ಸಭೆಗೆ ಆಮಂತ್ರಣವನ್ನು ಕೊಟ್ಟಿರುವದರಿಂದಲೂ, ಈ ೩೯ ನೆಯ ರಾಷ್ಟ್ರೀಯ ಸಭೆಯು ಬೆಳಗಾಂವಿಯಲ್ಲಿ ನೆರವೇರಿಸಲ್ಪಡುವದರಿಂದಲೂ ದಿಶಂಬರದಲ್ಲಿ ಬೆಳಗಾಂವಿಯು ರಾಷ್ಟ್ರಭಕ್ತರಿಗೆ ಕ್ಷೇತ್ರಸ್ಥಳವೆನಿಸುವದರಲ್ಲಿ ಸಂದೇಹವಿಲ್ಲ. ಈ ರಾಷ್ಟ್ರೀಯ ಸಭೆಯ ಯಾತ್ರೆಗಾಗಿ, ದೂರ ದೂರಿನ ನಾಡುಗಳಿಂದ ವಿದ್ವಾಂಸರು, ರಾಜಕಾರಣಪಟುಗಳು ಬರುವರಲ್ಲದೆ ನಮ್ಮ ಕನ್ನಡ ನಾಡಿನಿಂದ ಸಾಮಾನ್ಯ ಜನಸಮೂಹವಂತೂ ಮಿತಿಯಿಲ್ಲದೆ ಕೂಡುವದು. ಈ ಅಸದೃಶವಾದ ಪ್ರಸಂಗದಲ್ಲಿ ಕರ್ನಾಟಕದ ದುರ್ದೆಶೆಯನ್ನು ದೂರೀಕರಿಸಲು ಹಾಗು ಇತರ ಪ್ರಾಂತದವರಲ್ಲಿ ಕರ್ನಾಟಕದ ವಿಷಯವಾಗಿಯೂ ಕನ್ನಡಿಗರ ವಿಷಯವಾಗಿಯೂ ಪಸರಿಸಿದ ಅಜ್ಞಾನಾಂಧಕಾರವನ್ನು ಹೋಗಲಾಡಿಸಲು ತಕ್ಕ ಪ್ರಯತ್ನಗಳಾಗುವದು ಅತ್ಯಂತಾವಶ್ಯಕವು! ಹೀಗಾದರೆ ಮಾತ್ರ ಕರ್ನಾಟಕದ ರಾಷ್ಟ್ರೀಯ ಸಭೆಯೆಂದು ಕರೆಯಲು ಸಾರ್ಥಕವಾಗುವದು. ಈ ವಿಷಯವಾಗಿ ಇಲ್ಲಿಯ ಕಾಂಗ್ರೇಸ ಕಮೀಟಿಯು "ಕರ್ನಾಟಕ ಹ್ಯಾಂಡಬುಕ್" ಒಂದನ್ನು ಪ್ರಕಟಿಸತಕ್ಕದ್ದಿದೆ. "ಸ್ವತಂತ್ರ ಕರ್ನಾಟಕ ಪ್ರಾಂತ"ದ ವಿಷಯವನ್ನು ಸವಿಸ್ತರ ಚರ್ಚಿಸುವ ಗ್ರಂಥವೊಂದು ಈ ಪ್ರಸಂಗದಲ್ಲಿ ಅತ್ಯಾವಶ್ಯಕವೆಂದು ತೋರಿದ್ದರಿಂದ ಬಹು ದಿವಸಗಳಿಂದ ಸಂಗ್ರಹಿಸಿಟ್ಟ ಸಂಗತಿಗಳನ್ನು ಇಂಥ ಸುಪ್ರಸಂಗದಲ್ಲಿ ಬಹಿರಂಗಪಡಿಸದಿದ್ದರೆ ಫಲವೇನೆಂದು ಬಗೆದು ಲಗುಬಗೆಯಿಂದ ಪ್ರಕಟಿಸಿರುತ್ತೇನೆ. ಹದಿನೆಂಟು ವರಗಳನ್ನು ಬೇಡುವದಕ್ಕಿಂತ ಒಂದೇ ಜಾಣತನದ ವರವನ್ನು ಬೇಡಿ ತಮ್ಮ ಧ್ಯೇಯವನ್ನು ಸಾಧಿಸಿಕೊಳ್ಳುವದು ಭೂಷಣವಾಗಿದೆ. ಇಂತಹ ಅಮೌಲ್ಯ ಸಂಧಿಕಾಲದಲ್ಲಿ ಕನ್ನಡಿಗರು ಹೇಗೆ ಹೋರಾಡುವರೆಂಬದನ್ನು ಮುಂದಿನ ಇತಿಹಾಸಕಾರರು ಬರೆದಿಡುವರಾದ್ದರಿಂದ ನನ್ನ ಕನ್ನಡ ಬಂಧುಗಳು ತಮ್ಮ ಪರಾಕಾಷ್ಟದ ಪ್ರಯತ್ನವನ್ನು ಮಾಡಲಿಕ್ಕೆ ಹಿಂಜರಿಯಬಾರದೆಂದು ನನ್ನ ಒತ್ತಾಯದ ಪ್ರಾರ್ಥನೆಯು. **ಕನ್ನಡಿಗರೇ! ಕರ್ನಾಟಕದ ಅಭ್ಯುದಯವು ನಿಮ್ಮ ಧ್ಯೇಯವಾಗಿದ್ದರೆ, ಅದಕ್ಕೆ "ಸ್ವತಂತ್ರ ಕರ್ನಾಟಕಪ್ರಾಂತವು" ಒಂದೇ ಉಪಾಯವು! ಒಂದೇ ಧ್ಯೇಯವು! ಒಂದೇ ಉಪಾಯವು!!**

**ಜಯ ಕರ್ನಾಟಕ!!!**

---

# ಎರಡನೆಯ ಪ್ರಕರಣ.

## ಕರ್ನಾಟಕ ಇತಿಹಾಸದ ಸಿಂಹಾವಲೋಕನವು.

೧ ವಾಚಕರಿಗೊಂದು ಮಾತು, ೨ ಪುರಾಣಕಾಲದ ಇತಿಹಾಸ, ೩ ಇತಿಹಾಸ ಕಾಲದಲ್ಲಿ ಪ್ರಾಚೀನ, ೪ ಮಧ್ಯಕಾಲ, ೫ ಅರ್ವಾಚೀನಕಾಲ, ೬ ಸಿಂಹಾವಲೋಕನ.

**೧ ವಾಚಕರಿಗೊಂದು ಮಾತು**:—ಪ್ರಿಯ ಕನ್ನಡ ವಾಚಕರೇ! ನಿಮ್ಮ ನಾಡಿನ ಹಾಗೂ ನಿಮ್ಮ ಪೂರ್ವಜರ ಉಜ್ವಲವಾದ ಇತಿಹಾಸವನ್ನು ಇಲ್ಲಿ ವಿವರಿಸುವದು ನನ್ನ ಉದ್ದೇಶವಾಗಿರುವದಿಲ್ಲ. ಇದು ಇತಿಹಾಸ ಗ್ರಂಥವಲ್ಲ. ಆದರೂ ಮುಂದಿನ ಚಳವಳಿಗೆ ಹಿಂದಿನ ಇತಿಹಾಸವು ಬೆಂಬಲವಾಗಿರುವದರಿಂದ ನಿಮ್ಮ ಉಜ್ವಲವಾದ ಇತಿಹಾಸದೊಳಗಿನ ಅತ್ಯಂತೋಜ್ವಲವಾದ ಸಂಗತಿಗಳನ್ನಷ್ಟೇ ಇಲ್ಲಿ ಕಾಣಿಸುವೆನು. ಇದಕ್ಕನುಗುಣವಾಗಿ ಕರ್ನಾಟಕ ಇತಿಹಾಸದಲ್ಲಿ ನಾಲ್ಕು ಭಾಗಗಳನ್ನು ಮಾಡಿದೆ. ಈ ಪದ್ಧತಿಯು ನೆನಪಿಡಲಿಕ್ಕೆ ಯೋಗ್ಯವಾದೀತೆಂದು ಭಾವಿಸಿರುವೆನು.

**೨ ಪುರಾಣಕಾಲದ ಇತಿಹಾಸ**:—ಇದರಲ್ಲಿ ೧ ರಾಮಾಯಣಕಾಲ, ೨ ಮಹಾಭಾರತದ ಕಾಲವೆಂದು ಎರಡು ಭಾಗಗಳನ್ನು ಮಾಡಬಹುದು. ರಾಮನ ಕಾಲದಲ್ಲಿ ವಿಂಧ್ಯಾದ್ರಿಯಿಂದ ರಾಮೇಶ್ವರದವರೆಗೆ ದಟ್ಟಾದ ಅಡವಿಯು ಹಬಿಕೊಂಡಿತ್ತು. ನಾಶಿಕದ ಹತ್ತರ ಜನರು ವಾಸಮಾಡಿಕೊಂಡಿದ್ದರಿಂದ ಅದಕ್ಕೆ ಜನಸ್ಥಾನವೆಂದು ಕರೆಯುತ್ತಿದ್ದರು. ಈಗಿನ ಕರ್ನಾಟಕ ಸೀಮೆಯಲ್ಲಿ 'ಮತಂಗವನ' ವೆಂಬ ವಿಶಾಲವಾದ ಅಡವಿಯು ಹಬ್ಬಿತ್ತು. ಇಲ್ಲಿ ಮತಂಗ, ಗಾಲವ, ಜಮದಗ್ನಿ ಮೊದಲಾದ ಋಷಿಗಳು ವಾಸಿಸುತ್ತಿದ್ದರು. ವಾನರರು ಕರ್ನಾಟಕ ಸೀಮೆಯ ಮೂಲ ನಿವಾಸಿಗಳಾದ ದ್ರವಿಡರು. ಇವರು ಕಪಿಗಳಲ್ಲ; ಕಪಿಧ್ವಜರೆಂದು ತಜ್ಞರು ಊಹಿಸುತ್ತಾರೆ. ಇವರ ರಾಜಧಾನಿಯಾದ ಕಿಷ್ಕಿಂಧೆಯೇ ಈಗಿನ ಹಂಪೆಯು. ಈ ರೀತಿಯಿಂದ ಹಂಪೆಯು ಸ್ಥಳವು ರಾಮಾಯಣ ಕಾಲದಿಂದಲೂ ಕನ್ನಡಿಗರಿಗೆ ವಾಸಸ್ಥಾನವಾಗಿದೆ. ಶಬರಿಯೆಂಬ ಹೆಂಗಸು ರಾಮನಿಗೆ ಬೋರೆಕಾಯಿಗಳನ್ನು ಆರಿಸಿಟ್ಟದ್ದು ಈ ಹಂಪೆಯು ಹತ್ತರವೇ! ಸುಗ್ರೀವನ ಸೇನಾಪತಿಯಾದ ಹನುಮಂತನೂ ಸಹ ಕನ್ನಡಿಗನು. ಇವನ ಮೂಲ ಊರು

ಹೊನ್ನಾವರವು. ಇವನ ಮೂಲ ಹೆಸರು ಹನುವರ (ವಿಸ್ತಾರವಾದ ಗದ್ದವುಳ್ಳ ವನು) ಇತ್ತೆಂತಲೂ ಇದರಿಂದಲೇ ಇವನ ಮೂಲ ಊರಿಗೆ ಹೊನ್ನಾವರವೆಂದು ಹೆಸರು ಬಿತ್ತೆಂತಲೂ ವಿದ್ವಾಂಸರು ತರ್ಕಿಸುತ್ತಾರೆ. ಈ ಹೊನ್ನಾವರವಾದರೂ ಕರ್ನಾಟಕದಲ್ಲಿರುತ್ತದೆ. ಗೋಕರ್ಣದ ಮಹಾಬಳೇಶ್ವರನ ಲಿಂಗವು ರಾವಣ ನಿಂದ ಸ್ಥಾಪಿತವಾಯಿತೆಂದು ಆಖ್ಯಾಯಿಕೆಯುಂಟು. ಈ ದೇವಸ್ಥಾನದ ಉಲ್ಲೇ ಖವು ರಾಮಾಯಣದಲ್ಲಿರುತ್ತದೆ. ಈ ಗೋಕರ್ಣವು ಕರ್ನಾಟಕದಲ್ಲಿಯುಂಟು. ಭಗವದ್ಭಕ್ತನಾದ ಕನಕದಾಸನು 'ರಾಮಧಾನ್ಯಚರಿತ್ರೆ' ಯೆಂಬ ಸಣ್ಣ ಕಾವ್ಯ ವನ್ನು ಬರೆದಿರುತ್ತಾನೆ. ಇದರಲ್ಲಿ ಕರ್ನಾಟಕದ ಧಾನ್ಯವಾದ ರಾಗಿಗೆ ಆ ಹೆಸರು ಬರುವ ಕಾರಣವನ್ನು ತೋರಿಸಿರುತ್ತಾನೆ. ರಾಗಿಯ ಮೂಲ ಹೆಸರು ನರೆದಲೆಗ. ರಾವಣನನ್ನು ಕೊಂದನಂತರ ರಾಮನು ಒಂದು ಋಷಿಯ ಆಶ್ರಮಕ್ಕೆ ದರ್ಶನ ವನ್ನು ಕೊಟ್ಟನು. ಅಲ್ಲಿ ಭೋಜನಸಮಯದಲ್ಲಿ "ಧಾನ್ಯಗಳಲ್ಲಿ ಅತ್ಯುತ್ತಮ ಯಾವದು?" ಎಂದು ಕೇಳಿದನು. ಅಕ್ಕಿಯು ಶ್ರೇಷ್ಠವೆಂದು ಕೆಲವರೂ ನರೆ ದಲೆಗ ಶ್ರೇಷ್ಠವೆಂದು ಕೆಲವರೂ ವಾದಿಸಿದರು. ದೇವತೆಗಳು ವಿಚಾರಿಸುವದ ಕ್ಕಾಗಿ ಬಂದರು. ಇಂದ್ರನು ಎರಡೂ ಕಡೆಯ ಪ್ರಮಾಣಗಳನ್ನು ಕೇಳಿಕೊಂಡು ನರೆದಲೆಗಿಗೆ ಅನುಕೂಲವಾಗುವಂತೆ ನ್ಯಾಯವನ್ನು ನಿರ್ಣಯಿಸಿದನು. ಇದರಿಂದ ರಾಮನು ಸಂತುಷ್ಟನಾಗಿ ತನ್ನ ಮನೆತನದ ಗೌರವದ ಹೆಸರಾದ 'ರಾಘವ' ಎಂಬ ಹೆಸರನ್ನು ಆ ಧಾನ್ಯಕ್ಕೆ ಇತ್ತನು. ಆದರ ಅಪಭ್ರಂಶವೇ ಈಗಿನ ರಾಗಿಯು. ಇದರಿಂದ ವಿಚಾರಿಸಲು ರಾಮನು ಬಹುಕಾಲ ಕರ್ನಾಟಕದಲ್ಲಿ ಕಳೆದನೆಂದೂ, ಕರ್ನಾಟಕದ ಆಹಾರವಿಹಾರಗಳು ಅವನಿಗೆ ವಿಶೇಷ ಪ್ರಿಯವಾಗಿದ್ದವೆಂದೂ ಅನುಮಾನಿಸಬಹುದು. ರಾಮನು ಕ್ರಿಸ್ತಿಶಕದ ಪೂರ್ವದಲ್ಲಿ ೧೬ನೆಯ ಶತಕದಲ್ಲಿ ದ್ದನೆಂದು ಕೆಲವರ ತರ್ಕವದೆ.

**ಮಹಾಭಾರತಕಾಲ**—ಕೌರವ-ಪಾಂಡವರ ಕಾಲದಲ್ಲಿ ಅಂದರೆ ಕ್ರಿ. ಶಕದ ಪೂರ್ವದಲ್ಲಿ ೧೪ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಹಲಕೆಲವು ರಾಜ್ಯ ಗಳು ನೆಲೆಗೊಂಡಿದ್ದವೆಂದು ಧಾರಾಳವಾಗಿ ಹೇಳಬಹುದು. ಕರವೀರಪುರದ ಶೃಗಾಲ ವಾಸುದೇವನನ್ನು ಕೃಷ್ಣನು ಕೊಂದ ಕಥೆಯು ಪ್ರಸಿದ್ಧವುಂಟು. ಮತ್ಸ್ಯಪುರದಲ್ಲಿ ವಿರಾಟನೆಂಬ ಅರಸನು ಆಳುತ್ತಿದ್ದನು. ಈಗಿನ ಹಾನಗಲ್ಲೇ ಮತ್ಸ್ಯಪುರವು. ಹಾನಗಲ್ಲಿಗೆ ವಿರಾಟನ ಕೋಟೆಯೆಂಬ ಹೆಸರು ಶಾಲಿವಾಹನ

ಶಕದ ೧೨ನೆ ಶತಕದ ವರೆಗೆ ನಡೆಯುತ್ತಿತ್ತು. ಪಾಂಡವರಿಗೆ ಅಜ್ಞಾತವಾಸಕಾಲ ದಲ್ಲಿ ಆಶ್ರಯಕೊಟ್ಟ ಅರಸು ಇವನೇ. ಇದರಿಂದ ರಾಮನಿಗೆ ಸೀತೆಯನ್ನು ದೊರೆ ಕಿಸಿಕೊಡುವಾಗ ಹಾಗೂ ಪಾಂಡವರಿಗೆ ಅಜ್ಞಾತವಾಸಪ್ರಸಂಗದಲ್ಲಿ ಆಶ್ರ ಯಕೊಡುವಾಗ ಕರ್ನಾಟಕವು ಸಹಾಯಕವಾಗಿರುತ್ತದೆಂಬದನ್ನು ತಿಳಿದರೆ ಅದಾವ ಕನ್ನಡಿಗನ ಹೃದಯವು ಉಕ್ಕಿಬರಲಿಕ್ಕಿಲ್ಲ! ವಿರಾಟನ ರಾಜ್ಯದ ದಕ್ಷಿ ಣಕ್ಕೆ ತ್ರಿಗರ್ತವೆಂಬ ದೇಶದಲ್ಲಿ ಸುಶರ್ಮನೆಂಬ ಅರಸನು ಆಳುತ್ತಿದ್ದನು. ತ್ರಿಗ ರ್ತವೇ ಈಗಿನ ಮೈಸೂರು. ಬಲರಾಮನು ತೀರ್ಥಯಾತ್ರೆಯ ಕಾಲಕ್ಕೆ ಕರ್ನಾ ಟಕಕ್ಕೆ ಬಂದು ಗೋಕರ್ಣದವರೆಗೆ ಹೋಗಿದ್ದನೆಂದು ಭಾಗವತವು ಹೇಳುತ್ತದೆ. ರಾಮನ ಕಾಲದಲ್ಲಿ ಹೇಗೆ ಹಂಪೆಯೋ ಹಾಗೆ ಪಾಂಡವರ ಕಾಲದಲ್ಲಿ ಆನೆಗುಂದಿ ಯು ಪ್ರಸಿದ್ಧವಾಗಿತ್ತು. ಇದಕ್ಕೆ ದಕ್ಷಿಣ ಹಸ್ತಿನಾವತಿಯೆಂಬ ಹೆಸರು. ಆನೆ ಗುಂದಿಯಲ್ಲಿ ಪಾಂಡವ ವಂಶದ ಅರಸರು ಬಹುಕಾಲ ಆಳಿದ ಬಗ್ಗೆ ಕೆಲವು ಶಿಲಾ ಲೇಖಗಳಲ್ಲಿ ಉಪಯೋಗಿಸಿದ ಯುಧಿಷ್ಠಿರನ ಶಕಕಾಲದ ಮೇಲಿಂದ ಅನುಮಾ ನಿಸಬೇಕಾಗಿದೆ. ಪಾಂಡವರ ಕಾಲದಿಂದ ಕ್ರಿ. ಶಕದ ಪೂರ್ವದ ೫ನೇ ಶತಮಾ ನದ ವರೆಗೆ ಕರ್ನಾಟಕದ ಇತಿಹಾಸವು ನಿಚ್ಚಳವಾಗಿ ತಿಳಿದಿಲ್ಲ. ಕುಂತಳ ದೇಶ ದಲ್ಲಿ ಆಳಿದ ಪ್ರಸಿದ್ಧ ಚಂದ್ರಹಾಸನು ಕರ್ನಾಟಕಸ್ಥನೇ! ಅಜ್ಞಾತವಾಸಕ್ಕಾಗಿ ವಿರಾಟನ ನಗರಿಗೆ (ಹಾನಗಲ್ಲ) ಹೋಗುವಾಗ ಪಾಂಡವರು ಗೋಕಾವಿಯ ತಡಿಸಲದ ಹತ್ತರ ಕೆಲವು ದಿವಸ ನಿಂತು ಹೋಗಿರಬಹುದು. ಈ ತಡಿಸಲದ ಹತ್ತರ ಪಾಂಡವರು ವಾಸವಾಗಿದ್ದ ಸ್ಥಳವನ್ನು ಜನರು ತೋರಿಸುತ್ತಾರೆ. ಇದು ದಂತಕಥೆಯೋ ಹೊರತು ಇದಕ್ಕೆ ಆಧಾರವಿಲ್ಲ. ತಾತ್ಪರ್ಯವೆಂದರೆ— ಈ ಭಾಗ ದಲ್ಲಿ ಪಾಂಡವರ ಸಂಚಾರವಾದ ಬಗ್ಗೆ ಜನರು ನಂಬುವದೇನೋ ನಿಜವು!

೩ **ಇತಿಹಾಸಕಾಲದದಲ್ಲಿ ಪ್ರಾಚೀನ:**— ಇತಿಹಾಸಕಾಲದಲ್ಲಿ ೧ ಪ್ರಾಚೀನ, ೨ ಮಧ್ಯಕಾಲ, ೩ ಅರ್ವಾಚೀನ ಹೀಗೆ ಸಾಮಾನ್ಯವಾಗಿ ೩ ಭಾಗ ಗಳನ್ನು ಮಾಡಬಹುದು. ಇತಿಹಾಸಕಾರರು ಕರ್ನಾಟಕದ ಇತಿಹಾಸವನ್ನು ಹೇಗೆಯೋ ವಿಭಾಗಿಸಿರಲಿ. ನಾವು ಮಾತ್ರ ವಾಚಕರ ಸೌಕರ್ಯಕ್ಕಾಗಿ ಕ್ರಿ. ಶ. ಪೂರ್ವದ ೪ನೆಯ ಶತಮಾನದಿಂದ ಕ್ರಿ. ಶ. ೬ ನೆಯ ಶತಮಾನದವರೆಗೆ ಸುಮಾ ರು ಸಾವಿರ ವರ್ಷದ ಕಾಲವನ್ನು ಪ್ರಾಚೀನವೆಂದು ಕರೆಯೋಣ. ಕ್ರಿ. ಶ. ೬ ನೆಯ ಶತಮಾನದಿಂದ ಅಂದರೆ ಚಲುಕ್ಯರ ಕಾಲದಿಂದ ತಾಳೀಕೋಟೆಯ

ಕಾಳಗದವರೆಗೆ ಸುಮಾರು ಸಾವಿರ ವರ್ಷದ ಈ ಕಾಲಕ್ಕೆ ಮಧ್ಯಕಾಲವೆಂದು ಅನ್ನೋಣ. ತಾಳೀಕೋಟೆಯು ಕಾಳಗದಿಂದ ಇಂದಿನವರೆಗೆ ಅರ್ವಾಚೀನ ವೆನ್ನೋಣ. ಹೀಗೆ ಸ್ಥೂಲಮಾನದಿಂದ ವಿಭಾಗಮಾಡಿದನಂತರ ಇವುಗಳನ್ನು ಕ್ರಮವಾಗಿ ಪ್ರಾತಃಕಾಲ, ಮಧ್ಯಾಹ್ನ, ಹಾಗೂ ಸಾಯಂಕಾಲಗಳಿಗೆ ಹೋಲಿಸಿ ಈ ಕರ್ನಾಟಕದ ಇತಿಹಾಸದ ವರ್ಣನೆಯನ್ನು ಒಂದೇ ವಾಕ್ಯದಲ್ಲಿ ಮುಗಿಸ ಬಹುದು ಪ್ರಾತಃಕಾಲದಲ್ಲಿ ಸೂರ್ಯನ ಕಿರಣಗಳು ಸಾವಕಾಶವಾಗಿ ಪಸರಿಸು ತ್ತಿರುವಂತೆ ಪ್ರಾಚೀನಕಾಲದಲ್ಲಿ ಸಣ್ಣ ಸಣ್ಣ ಕನ್ನಡ ರಾಜ್ಯಗಳು ಅಲ್ಲಲ್ಲಿ ತಲೆ ದೋರುತ್ತಿದ್ದವು. ಮಧ್ಯಾಹ್ನದಲ್ಲಿ ಸೂರ್ಯನ ಪ್ರಚಂಡ ಕಿರಣಗಳು ಭೂಮಿ ಯನ್ನು ಬೆಳಗುತ್ತಿರುವಂತೆ ಮಧ್ಯಕಾಲದ ಕರ್ನಾಟಕದ ಇತಿಹಾಸವು ಕರ್ನಾಟ ಕವನ್ನು ಅತಿ ವೈಭವದ ಶಿಖರಕ್ಕೆ ಮುಟ್ಟಿಸಿರುತ್ತದೆ. ಸಾಯಂಕಾಲವು ಶಾಂತ ವಾಗಿದ್ದರೂ ಕಳೆಗುಂದಿರುವಂತೆ ಅರ್ವಾಚೀನ ಕರ್ನಾಟಕದ ಇತಿಹಾಸವು ಕರ್ನಾಟಕವನ್ನು ಛಿನ್ನವಿಚ್ಛಿನ್ನವಾಗಿ ತುಂಡರಿಸಿ ಕಳೆಗುಂದಿಸಿರುತ್ತದೆ. ಇವೇ ಮೂರು ಕಾಲಗಳ ಇತಿಹಾಸವನ್ನು ಬಾಲ್ಯ, ಯೌವನ, ವೃದ್ಧಾಪ್ಯಗಳಿಗೆ ಹೋ ಲಿಸಿ ನೋಡಿದರೂ ನೋಡಲಿ. ಈ ಮೂರು ಕಾಲಗಳ ಇತಿಹಾಸದ ಟಿಪ್ಪಣೆ ಯನ್ನು ಕೆಳಗೆ ಕೊಡುವೆನು.

ಪ್ರಾಚೀನಕಾಲದಲ್ಲಿ ಕರ್ನಾಟಕಕ್ಕೆ ಕುಂತಳ, ನಾಟ, ಲಾಟ ಎಂಬ ಹೆಸ ರುಗಳು ಪ್ರಾಪ್ತವಾಗಿದ್ದವು. ಮೌರ್ಯವಂಶದ ಚಂದ್ರಗುಪ್ತನು ಮಗಧ ರಾಜ್ಯವನು ಬಿಟ್ಟು, ತನ್ನ ಗುರು ಭದ್ರಬಾಹುವಿನೊಡನೆ ಮೈಸೂರ ಪ್ರಾಂತದಲ್ಲಿ ಚಂದ್ರಗಿರಿಯ ಮೇಲೆ ತಪಶ್ಚರ್ಯ ಮಾಡಿ ಅಲ್ಲಿಂದಲೇ ನಿರ್ವಾಣಕ್ಕೆ ಹೋದ ಕಥೆಯು ಸರ್ವ ಶ್ರುತವಾಗಿದೆ. ಈ ಚಂದ್ರಗುಪ್ತನ ಮೊಮ್ಮಗನಾದ ಅಶೋಕನ ವಶಕ್ಕೆ ಕರ್ನಾ ಟಕವು ಕೆಲವು ಕಾಲದ ವರೆಗೆ ಇದ್ದಿತೆಂದು ಶಿಲಾಲೇಖಗಳಿಂದ ಗೊತ್ತಾಗಿದೆ. ಈ ಪ್ರಾಚೀನ ಇತಿಹಾಸ ಕಾಲದಲ್ಲಿ ಪ್ರಸಿದ್ಧ ಅರಸರೆಂದರೆ ಕದಂಬರು. ( ೪ನೇ ಶತ. ) ಇವರು ಬನವಾಸಿಯಲ್ಲಿಯೂ ( ಕಾರವಾರ ಜಿಲ್ಹೆ ) ಹಾಗೂ ಹಲಸಿಗೆಯ ಲ್ಲಿಯೂ ( ಬೆಳಗಾಂವ ಜಿಲ್ಹೆ ) ಆಳುತ್ತಿದ್ದರು. ತ್ರಿಪರ್ವತದಲ್ಲಿಯೂ ಇವರ ಅರ ಮನೆಗಳಿದ್ದವೆಂದು ತಿಳಿದದೆ. ಈ ತ್ರಿಪರ್ವತವೇ ಮುರಗೋಡ, ( ಬೆಳಗಾಂವ ಜಿಲ್ಹೆಯಲ್ಲಿ ) ಎಂದು ಅನುಮಾನವಿದೆ. ಈ ವಂಶದಲ್ಲಿ ಕದಂಬ ಚಕ್ರವರ್ತಿ, ತ್ರಿಲೋಚನ ಕದಂಬ ಎಂಬ ಇಬ್ಬರು ಪ್ರಸಿದ್ಧ ಅರಸರಾದರು. ಗಂಗ ಅರಸರು–

ಇವರಾದರೂ ಪ್ರಾಚೀನ ಕಾಲದಲ್ಲಿಯೇ ಪ್ರಸಿದ್ಧರಾಗಿದ್ದರು. ಇವರು ಕೊಡಗು ದೇಶದಲ್ಲಿ ಮಡಿಕೇರಿಯಲ್ಲಿ ಆಳುತ್ತಿದ್ದರು. ಇವರು ಕ್ರಿ. ಶ. ೨ನೇ ಶತಮಾನ ದಿಂದ ಆಳುತ್ತಿದ್ದರೆಂದು ತಿಳಿದದೆ.

೪ **ಮಧ್ಯಕಾಲ:**—ಈ ವೈಭವಕಾಲದ ಇತಿಹಾಸದಲ್ಲಿ ಕೆಳಗಣ ರಾಜ ವಂಶಗಳು ಸಮಾವೇಶವಾಗುತ್ತವೆ.

## ಸ್ವತಂತ್ರ ಅರಸರು.

| | | |
|---|---|---|
| ೧ | ಬಾದಾಮಿಯ ಚಲುಕ್ಯರು | (೫೫೦—೭೫೭) |
| ೨ | ರಾಷ್ಟ್ರಕೂಟರು | (೭೫೭—೯೭೩) |
| ೩ | ಕಲ್ಯಾಣಪುರದ ಚಾಲುಕ್ಯರು | (೯೭೩—೧೧೮೦) |
| ೪ | ಕಲಚೂರ್ಯರು | (೧೧೫೬—೧೧೮೩) |
| ೫ | ದೇವಗಿರಿ ಯಾದವರು | (೧೧೧೩—೧೩೧೮) |
| ೬ | ಹೊಯ್ಸಾಳ (ಬಲ್ಲಾಳ) ಅರಸರು | (೧೧೧೬—೧೩೪೬) |
| ೭ | ವಿಜಯನಗರದ ಅರಸರು | (೧೩೩೫—೧೫೬೪) |

## ಮಾಂಡಲೀಕರು.

೧ ಕೊಲ್ಹಾಪುರದ ಶಿಲಾಹಾರರು (೧೧ನೇ ಶತಮಾನದ ಮಧ್ಯದಿಂದ ೧೨ನೇ ಶತಮಾನದ ಅಂತ್ಯದವರೆಗೆ)

೨ ಸೌವದತ್ತಿಯ ರಟ್ಟರು (೧೦ನೇ ಶತಮಾನದ ಮಧ್ಯದಿಂದ ೧೩ನೇ ಶತಮಾನದ ಆದಿಯ ವರೆಗೆ)

ಬಾದಾಮಿಯ ಚಲುಕ್ಯರಲ್ಲಿ ೨ನೇ ಪುಲಿಕೇಶಿಯೇ ಅತ್ಯಂತ ಪ್ರಸಿದ್ಧನು. (೬೦೯–೬೪೨). ಇವನು ಕರ್ನಾಟಕದಲ್ಲಿಯ ಸಣ್ಣ ದೊಡ್ಡ ರಾಜ್ಯಗಳನ್ನೆಲ್ಲ ಗೆದ್ದು ಕರ್ನಾಟಕವನ್ನು ಏಕೀಕರಿಸಿದ್ದನಲ್ಲದೆ ಉತ್ತರ ಹಿಂದುಸ್ಥಾನದಲ್ಲಿ ಆಳು ತ್ತಿದ್ದ ಹರ್ಷರಾಜನನ್ನು ಸಹ ಗೆದ್ದನು. ಆದ್ದರಿಂದ ಇವನಿಗೆ ಕರ್ನಾಟಕದ ಆದ್ಯ ಸಾರ್ವಭೌಮನೆಂದೆನ್ನುತ್ತಾರೆ. ಅಜಂತಿಯ ಜಗತ್‌ಪ್ರಸಿದ್ಧವಾದ ಗುಡಿಯೊಳಗೆ ಈ ನಮ್ಮ ಸಾರ್ವಭೌಮನ ಚಿತ್ರವಿದ್ದು ಅವನು ಇರಾಣದ ರಾಯಭಾರಿಯನ್ನು ಆದರಿಸುತ್ತಿರುವಂತೆ ತೋರಿಸಿರುತ್ತಾರೆ. ಇದನ್ನು ಕರ್ನಾಟಕ ಇತಿಹಾಸಮಂಡಳ ದವರು ವಾಗ್ಭೂಷಣದ ಒಂದು ಲೇಖದಲ್ಲಿ ಪ್ರಸಿದ್ಧಿಸಿದ್ದರಿಂದ ಗೊತ್ತಾಗುತ್ತದೆ.

ಚೀನದೇಶದ ಹಿವೆನ್‌ತ್ಸಾಂಗನೆಂಬ ಪ್ರವಾಸಿಯು ೬೩೯ ರಲ್ಲಿ ಹಿಂದುಸ್ಥಾನಕ್ಕೆ ಬಂದು ಕರ್ನಾಟಕದಲ್ಲಿ ಸಂಚರಿಸಿ ಪುಲಿಕೇಶಿಯು ರಾಜ್ಯವನ್ನೂ, ಆಗಿನ ಜನರ ಸ್ಥಿತಿರೀತಿಗಳನ್ನೂ, ಸುಂದರವಾಗಿ ವರ್ಣಿಸಿರುತ್ತಾನೆ. ಇದಂತೂ ಸರ್ವಶ್ರುತವಾದ ಸಂಗತಿಯು. ಅನಂತರ ಕರ್ನಾಟಕವು ರಾಷ್ಟ್ರಕೂಟರ ವಶವಾಯಿತು. ಇವರಲ್ಲಿ ಕೃಷ್ಣರಾಜನೆಂಬವನು ವೇರೂಳದ ಪ್ರಸಿದ್ಧವಾದ ಕೈಲಾಸ ಗುಡಿಯನ್ನು ಕೊರಿಸಿದನು. ಈ ವಂಶದ ೩ನೆಯ ಗೋವಿಂದನೆಂಬ ಅರಸನ ಮಗನಾದ ನೃಪತುಂಗನನ್ನು ಕನ್ನಡಿಗರು ಎಂದೂ ಮರೆಯುವಂತಿಲ್ಲ. ಇವನು ಸ್ವತಃ ಕವಿಯಾಗಿದ್ದು ಕವಿರಾಜಮಾರ್ಗವೆಂಬ ಗ್ರಂಥವನ್ನು ಬರೆದಿರುತ್ತಾನೆ. ಇದುವರೆಗೂ ಉಪಲಬ್ಧವಾದ ಕರ್ನಾಟಕ ಗ್ರಂಥಗಳಲ್ಲಿ ಇದೇ ಪ್ರಾಚೀನವಾಗಿದೆ. ಅನಂತರ ಕರ್ನಾಟಕವು ಕಲ್ಯಾಣಪುರದ ಚಾಲುಕ್ಯರ ಕೊರಳಿಗೆ ಮಾಲೆಯನ್ನು ಹಾಕಿತು. ಈ ಕಲ್ಯಾಣಪುರದ ಚಾಲುಕ್ಯರ ಕಾಲದಲ್ಲಿ ಕರ್ನಾಟಕವು ವೈಭವದ ಶಿಖರಕ್ಕೆ ಮುಟ್ಟಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಬಾದಾಮಿಯು ಚಲುಕ್ಯರಲ್ಲಿ ಹೇಗೆ ೨ನೆಯ ಪುಲಿಕೇಶಿಯೋ, ಹಾಗೆಯೇ ಈ ಕಲ್ಯಾಣಪುರದ ಚಾಲುಕ್ಯರಲ್ಲಿ ಚಾಲುಕ್ಯವಿಕ್ರಮನು ಸುಪ್ರಸಿದ್ಧನಾದ ಕಡುಗಲಿಯು. ಇವನು ಬಹಳ ವಿದ್ಯಾಪಕ್ಷಪಾತಿಯಾದುದರಿಂದ ಇವನ ಆಸ್ಥಾನದಲ್ಲಿ ಅನೇಕ ಜನ ಪಂಡಿತರು ಆಶ್ರಯವನ್ನು ಪಡೆದಿದ್ದರು. ಬಾದಾಮಿಯ ಚಲುಕ್ಯರ ಕಾಲವು ಕರ್ನಾಟಕವನ್ನು ಏಕಛತ್ರಾಧಿಪತ್ಯದಲ್ಲಿ ತರುವದರಲ್ಲಿಯೇ ಹೋದದ್ದರಿಂದ ವಾಙ್ಮಯಕ್ಕೆ ಸಾಕಷ್ಟು ಲಕ್ಷವನ್ನು ಪೂರೈಸುವದಾಗಲಿಲ್ಲ. ಈ ಕೊರತೆಯನ್ನು ರಾಷ್ಟ್ರಕೂಟವವರು ಪೂರೈಸಿದರು. ಕಲ್ಯಾಣಪುರದ ಚಾಲುಕ್ಯರಂತೂ ವಾಙ್ಮಯಕ್ಕೆ ಬಹಳೇ ಪ್ರೋತ್ಸಾಹನ ಕೊಟ್ಟರು. ಪ್ರಸಿದ್ಧರಾದ ಕನ್ನಡ ಕವಿಗಳೂ, ಸಂಸ್ಕೃತ ಕವಿಗಳೂ ಇವರಲ್ಲಿ ಆಶ್ರಯ ಹೊಂದಿದ್ದರು. ಚಾಲುಕ್ಯವಿಕ್ರಮನ ಕಾಲದಲ್ಲಿ ಇದ್ದ ಗ್ರಂಥಕಾರರಲ್ಲಿ ಆದಿಪಂಪ, ರನ್ನ, ನಾಗವರ್ಮ II, ಶ್ರೀಧರಾಚಾರ್ಯ, ದುರ್ಗಸಿಂಹ ಮೊದಲಾದ ಪ್ರಸಿದ್ಧ ಕನ್ನಡ ಕವಿಗಳೂ, ಬಿಲ್ಲಣ, ವಿಜ್ಞಾನೇಶ್ವರ ಮತ್ತು ಭಾಸ್ಕರಾಚಾರ್ಯ ಮೊದಲಾದ ಸಂಸ್ಕೃತ ಗ್ರಂಥಕಾರರೂ ಇದ್ದರು. ಚಾಲುಕ್ಯವಿಕ್ರಮನ ತರುವಾಯ ಪ್ರಸಿದ್ಧನಾದವನೆಂದರೆ ೪ನೆಯ ಸೋಮೇಶ್ವರನು. ಮುಂದೆ ಈ ಚಾಲುಕ್ಯರ ಸಿಂಹಾಸನವನ್ನು ಕಲಚೂರ್ಯವಂಶದ ಬಿಜ್ಜಳನು ಆಕ್ರಮಿಸಿದನು. ಆದರೆ ಇವರ ವಶದಲ್ಲಿ ಕರ್ನಾಟಕವು ಬಹು ದಿವಸ ತಾಳಲಿಲ್ಲ. ಇವನ

ಕಾಲದಲ್ಲಿ ಬಸವೇಶ್ವರನು ಲಿಂಗಾಯತ ಮತವನ್ನು ಉದ್ಧರಿಸಿ, ಲಿಂಗಾಯತ ಕವಿಗಳಿಗೆ ವಿಶೇಷ ಪ್ರೋತ್ಸಾಹನ ಕೊಟ್ಟನು. ಈ ಬಸವೇಶ್ವರನು ಕರ್ನಾಟಕದಲ್ಲಿ ಧರ್ಮಸುಧಾರಕನೆಂದು ಪ್ರಸಿದ್ಧನಿರುತ್ತಾನೆ. ಕಲ್ಯಾಣಪುರದ ಚಾಲುಕ್ಯರ ಆಳಿಗಾಲದ ಕಾಲದಲ್ಲಿ ಅವರ ರಾಜ್ಯದ ದಕ್ಷಿಣ ಭಾಗವನ್ನು ಹೊಯ್ಸಾಳ (ಬಲ್ಲಾಳ) ರೂ, ಉತ್ತರಭಾಗವನ್ನು ದೇವಗಿರಿ ಯಾದವರೂ ಆಕ್ರಮಿಸಿದರು. ಹೀಗೆ ಕರ್ನಾಟಕವು ಇವರ ಕಾಲದಲ್ಲಿ ಇಬ್ಭಾಗವಾಯಿತು. ಇವರಿಗೂ ಯಾದವರಿಗೂ ಕೃಷ್ಣೆಯು ದಂಡೆಯು ಸೀಮೆಯು ಬಗ್ಗೆ ಅನೇಕ ಕಾಳಗಗಳಾದವು. ದೇವಗಿರಿ ಯಾದವರು ಮರಾಟಿಯು ಕಡೆಗೆ ಒಲವನ್ನಿಟ್ಟರು. ಹೊಯ್ಸಾಳ ಅರಸರು ಮಾತ್ರ ಕರ್ನಾಟಕ ಭಾಷೆಗೆ ವಿಶೇಷವಾಗಿ ಪ್ರೋತ್ಸಾಹನ ಕೊಟ್ಟರು. ಇವರ ಕಾಲದಲ್ಲಿ ಪ್ರಸಿದ್ಧ ಕನ್ನಡ ಕವಿಗಳನೇಕರು ಆಶ್ರಯುವನ್ನು ಪಡೆದಿದ್ದರು. ಅನಂತರ ಪ್ರಸಿದ್ಧ ಅರಸರೆಂದರೆ ವಿಜಯನಗರದವರು. ಇದು ಕರ್ನಾಟಕದ ಸಾರ್ವಭೌಮತ್ವದ ಕಡೆಯು ಮನೆತನವೆಂದರೂ ಸಲ್ಲುವದು. ಮುಸಲ್ಮಾನರೊಡನೆ ಹೋರಾಡಲಿಕ್ಕೆ ಕನ್ನಡಿಗರನ್ನು ಸಮರ್ಥ ಮಾಡುವದಕ್ಕೋಸ್ಕರ ಅವರನ್ನು ಏಕೀಕರಿಸಿ ಈ ರಾಜ್ಯವನ್ನು ಸ್ಥಾಪಿಸಿ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯನೆಂಬ ಗೌರವದ ಬಿರುದನ್ನು ಪಡೆದ ಶ್ರೀವಿದ್ಯಾರಣ್ಯರ ಸಂಗತಿಯು ಸರ್ವರಿಗೂ ವಿದಿತವಾದ ವಿಷಯುವು. ಕರ್ನಾಟಕ ರಾಜ್ಯದ ವಿಸ್ತಾರವು ಪೂರ್ವ, ಪಶ್ಚಿಮ, ದಕ್ಷಿಣ ಸಮುದ್ರದ ವರೆಗೆ ಬೆಳೆಯಿತು. ಇವರ ಕಾಲದಲ್ಲಿ ವಾಙ್ಮಯಕ್ಕೆ ಬಹಳ ಕಳೆಯೇರಿತು. ಸ್ವತಃ ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ಸಂಸ್ಕೃತ ಭಾಷೆಯಲ್ಲಿ ಸರಸವಾದ ಕಾವ್ಯವನ್ನು ರಚಿಸಿರುವದನ್ನು ನೋಡಿ ಆನಂದಪಡೆಯದಿರುವ ಸ್ವಾಭಿಮಾನ ಶೂನ್ಯನಾದ ಕನ್ನಡಿಗನು ಅದಾವನಿರುವನು! ಈ ವಂಶದಲ್ಲಿ ಕೃಷ್ಣದೇವರಾಯುನು ಅತ್ಯಂತ ಪ್ರತಾಪಶಾಲಿಯು. ಇವನ ಕಾಲದಲ್ಲಿ ವಿಜಯನಗರದ ರಾಜ್ಯವು ಪರಮಾವಧಿ ಘನತೆಗೇರಿತು. ಇವನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂಬ ಎಂಟು ಜನ ಪಂಡಿತರಿದ್ದರು. ಹೊಯ್ಸಾಳ ಅರಸರ ಕಾಲದಲ್ಲಿಯೂ, ಮತ್ತು ಈ ಅರಸರ ಕಾಲದಲ್ಲಿಯೂ, ಅದ್ವಿತೀಯುವಾದ ಎಷ್ಟೋ ಕಟ್ಟಡಗಳು ನಿರ್ಮಾಣವಾಗಿ ಬಹು ದೂರಿನ ಪಾಶ್ಚಿಮಾತ್ಯರ ಚಿತ್ತವನ್ನೂ ಕೂಡ ತಮ್ಮ ಕಡೆಗೆ ಆಕರ್ಷಿಸುವಷ್ಟು ನಯನಮನೋಹರವಾಗಿ ನಿಂತುಕೊಂಡಿವೆ. ಇವುಗಳನ್ನು ಕನ್ನಡಿಗನಾದವನು ಒಮ್ಮೆಯಾದರೂ ನೋಡಿಯೇ ತೀರಬೇಕು. ೧೭ನೆಯ ಶತಮಾನದಲ್ಲಿ

ಶಿವಾಜಿ ಹಾಗೂ ರಾಮದಾಸರು ಯಾವ ಮಹತ್ಕಾರ್ಯಗಳನ್ನು ಜರಗಿಸಿ ಪ್ರಸಿದ್ಧಿಯನ್ನು ಪಡೆದರೋ, ಅಂಥ ಮಹತ್ಕಾರ್ಯಗಳನ್ನು ಅವರಿಗಿಂತ ೩೦೦ ವರ್ಷ ಮುಂಚಿತವಾಗಿಯೇ ಹರಿಹರರಾಯನೂ ಹಾಗೂ ಶ್ರೀವಿದ್ಯಾರಣ್ಯರೂ ಜರಗಿಸಿ ಪ್ರಸಿದ್ಧಿಯನ್ನು ಪಡೆದಿರುತ್ತಾರೆ. ಇದರಿಂದ ಶ್ರೀವಿದ್ಯಾರಣ್ಯರ ಕಿತ್ತಿಯನ್ನೇ ಶಿವಾಜಿ, ರಾಮದಾಸರು ತೀಡಿರುತ್ತಾರೆಂದು ಹೇಳಿದರೆ ಆತಂಕವೇನು? ಹೀಗೆ ೨೩೦ ವರ್ಷ ಒಳ್ಳೇ ಘನತೆಯಿಂದ ಮೆರೆಯುತ್ತಿರುವ ಮತ್ತು ಪರರಾಷ್ಟ್ರದವರಿಂದ ಮಿತಿಮೀರಿ ಹೊಗಳಿಸಿಕೊಂಡಿರುವ ಈ ವಿಜಯನಗರದ ಸಾಮ್ರಾಜ್ಯವು ಅಥವಾ ಕರ್ನಾಟಕದ ಕೊನೆಯ ಸಾಮ್ರಾಜ್ಯವು ಒಮ್ಮೆಲೆ ೧೫೬೫ ರಲ್ಲಿ ಕಾಲನ ಬಾಯಿಗೆ ತುತ್ತಾಗಿ ಅಳಿದು ಹೋಯಿತೆಂದು ಬರೆಯಲಿಕ್ಕೆ ಕನ್ನಡ ಲೆಕ್ಕಣಿಕೆಗೆ ಜಡವೆನಿಸುವದು ಸ್ವಾಭಾವಿಕವಾಗಿದೆ. ಈ ದುರ್ಧರ ಪ್ರಸಂಗವನ್ನು ವರ್ಣಿಸುವದಕ್ಕಿಂತ ಶಾಂತಕವಿಗಳ ಒಂದು ಕವಿತೆಯನ್ನೇ ಇದರಡಿಯಲ್ಲಿ ಉದ್ಧರಿಸಿ ವಿಶ್ರಮಿಸುವೆನು.

ಆ ಸಾಮ್ರಾಜ್ಯದ ರಾಜಧಾನಿಯಕಟಾ ಆ ರಾಜನಾವೈಭವಂ ।
ಆ ಸಾಮಂತ ಸಚೀವರಾ ಬುಧಸಭಾಸ್ಥಾನಂಗಳಾವಿದ್ಯೆಯು ॥
ಆ ಸೋಮಾನನೆಯರ್ ಪ್ರಮತ್ತ ನೃಪಪುತ್ರರ್ ಘೋಷಿಪಾವಂದಿಗಳ್ ।
ಆ ಸರ್ವರ್ ಮರೆಯಾದರಾರವಶದಿಂದಾ ಕಾಲಗೀವಂದನಂ ॥ ೧ ॥

ಈ ಸಾಮ್ರಾಜ್ಯದ ವರ್ಣನೆಯನ್ನು ಮೇ॥ ಸಿವ್ವೆಲ್ ಸಾ॥ ಮರೆತುಹೋದ ಸಾಮ್ರಾಜ್ಯವೆಂಬ ತಮ್ಮ ಗ್ರಂಥದಲ್ಲಿ ವಿಸ್ತರಿಸಿರುವರು. ಮತ್ತೊಬ್ಬರು ಎಂದೂ ಮರೆಯದ ಸಾಮ್ರಾಜ್ಯವೆಂದು ವರ್ಣಿಸಿರುವರು.

**೫. ಅರ್ವಾಚೀನಕಾಲ:**—ತಾಳೀಕೋಟೆಯ ಕಾಳಗದಿಂದ ಮುರಿದ ಕರ್ನಾಟಕ ಸಾಮ್ರಾಜ್ಯದ ದೊಡ್ಡ ಭಾಗವು ವಿಜಾಪುರದ ಅದಿಲಶಾಹಿಗೆ ಒಳಪಟ್ಟಿತು. ಅನಂತರ ಔರಂಗಜೇಬನು ವಿಜಾಪುರ, ಗೋವಳಕೊಂಡಗಳನ್ನು ಮುರಿದದರಿಂದ ಕರ್ನಾಟಕದ ಭಾಗವು ಮೊಗಲರ ಕೈಸೇರಿತು. ೧೫೦೭ ರಲ್ಲಿ ೩೨ ಹಳ್ಳಿಗಳಿಗೆ ಮಾತ್ರ ಒಡೆಯರಾಗಿದ್ದ ಆರುಬೆರಳಿನ ಚಾಮರಾಜರ ಮನೆತನದವನಾದ ರಾಜಒಡೆಯನೆಂಬ ಅರಸು ೧೬೧೦ ರಲ್ಲಿ ಶ್ರೀರಂಗಪಟ್ಟಣವನ್ನು ಕೈವಶಮಾಡಿಕೊಂಡು ಅಲ್ಲಿ ತನ್ನ ರಾಜಧಾನಿಯನ್ನು ಸ್ಥಾಪಿಸಿದನಂತರ ಮತ್ತೊಂದು ಕನ್ನಡಅರಸುಮನೆತನವು ಕಂಗೊಳಿಸತೊಡಗಿತೆಂದು ಹೇಳ

ಬಹುದು. ಮುಂದೆ ಈ ಕನ್ನಡ ರಾಜ್ಯವನ್ನು ೧೭೬೧ ರಲ್ಲಿ ಹೈದರನೆಂಬ ದಂಡ ನಾಯಕನು ಆಕ್ರಮಿಸಿದನು. ಇದಕ್ಕೂ ಪೂರ್ವದಲ್ಲಿ (೧೭೨೪ ರಲ್ಲಿ) ನಿಜಾಮು ಉಲ್ಮುಲ್ಕನು ಹೈದರಾಬಾದದಲ್ಲಿ ಮೊಗಲರ ಮಾಂಡಲೀಕತ್ವವನ್ನು ಬಿಟ್ಟು ಸ್ವಾತಂತ್ರ್ಯವನ್ನು ಸಾರಿದ್ದರಿಂದ, ಕರ್ನಾಟಕದ ಉತ್ತರಭಾಗವು ನಿಜಾಮನ ರಾಜ್ಯಕ್ಕೆ, ದಕ್ಷಿಣಭಾಗವು ಹೈದರನ ಕಡೆಗೆ, ಹೀಗೆ ಮುಸಲ್ಮಾನರೀರ್ವರಲ್ಲಿ ಹೋದದ್ದಲ್ಲದೆ, ಪಶ್ಚಿಮಭಾಗವನ್ನು ಮಹಾರಾಷ್ಟ್ರರು ಪ್ರಬಲರಾಗಿ ವ್ಯಾಪಿಸಿದರು. ಈ ಸಂಧಿಯಲ್ಲಿ, ಸಾಧಿಸಿದರೆ ತಮ್ಮ ಕಾಲನ್ನು ಪಸರಿಸಬೇಕೆಂದು ಫ್ರೇಂಚರೂ, ಇಂಗ್ಲಿಷರೂ ನಿರೀಕ್ಷಿಸುತ್ತಿದ್ದರು. ಇಷ್ಟರಲ್ಲಿ ಕರ್ನಾಟಕದ ನಬಾಬನ ಪಟ್ಟದ ವಿಷಯವಾಗಿ ವ್ಯಾಜ್ಯವು ಉತ್ಪನ್ನವಾಗಲು, ಮಹಮ್ಮದಅಲ್ಲಿಯ ಪಕ್ಷವನ್ನು ಇಂಗ್ಲಿಷರೂ, ಚಂದಾಸಾಹೇಬನ ಪಕ್ಷವನ್ನು ಫ್ರೇಂಚರೂ ವಹಿಸಿ, ಯುದ್ಧೋನ್ಮುಖರಾದರು. ಈ ಕರ್ನಾಟಕದ ಕಾಳಗವು ಇಂಗ್ಲಿಷರ ಹಾಗು ಫ್ರೇಂಚರ ಹಣೆಯ ಬರಹವನ್ನು ಒರೆಗೆ ಹಚ್ಚಿ ಹಿಂದುಸ್ಥಾನದಲ್ಲಿ ಯಾರು ಸ್ಥಾಯಿಕರಾಗುವರೆಂಬದನ್ನು ನಿರ್ಣಯಿಸಿದ ಕಾಳಗವಿರುತ್ತದೆ. ೧೭೫೧ ರಲ್ಲಿ ಕ್ಲೈವನು ಆರ್ಕಾಡ ಮುತ್ತಿಗೆಯಲ್ಲಿ ಗೆಲವನ್ನು ಸಂಪಾದಿಸಿದ ನಂತರ "ಆರ್ಕಾಡಿನ ವೀರ"ನೆಂಬ ಬಿರುದನ್ನು ಸಂಪಾದಿಸಿದನು. ಇದರಿಂದ ಕ್ಲೈವನಿಗೆ ಕರ್ನಾಟಕದ ವೀರನೆಂದು ಆಗಿನ ಇಂಗ್ಲಿಷರು ಕರೆದಂತಾಯಿತು. ಈ ಕಾಳಗವು ಕರ್ನಾಟಕದ ಕಾಳಗವೆಂಬ ಹೆಸರಿನಿಂದ ಇತಿಹಾಸದಲ್ಲಿ ಪ್ರಸಿದ್ಧವಾಗಿರುತ್ತದೆ. ಹಾಗು ಇದು ಪ್ಲಾಸಿಯ ಕಾಳಗದ ಪೂರ್ವದಲ್ಲಿಯೇ ಇಂಗ್ಲಿಷರ ಹಣೆಯ ಬರಹವನ್ನು ಪರೀಕ್ಷಿಸಿ ಭವಿಷ್ಯವನ್ನು ಸಾರಿರುತ್ತದೆ. ಆದ್ದರಿಂದ ಇಂಗ್ಲಿಷರು ಎಲ್ಲಕ್ಕೂ ಮೊದಲು ಕರ್ನಾಟಕಕ್ಕೆ ಋಣಿಯಾಗಿರಬೇಕೆಂದು ಇತಿಹಾಸಕಾರರು ಬರೆಯದಿರಲಾರರು. ಈಗ ಆರ್ಕಾಡು ತೆಲಗು ನಾಡಿಗೆ ಸಮಾವೇಶವಾಗಿದ್ದರೂ ಅದು ಮೊದಲಿನ ಕರ್ನಾಟಕವೆಂಬದಕ್ಕೆ ಸಂದೇಹವಿಲ್ಲ. ಆರು ಕಾಡು (ಅರಣ್ಯ) ಗಳಿಂದ ಸುತ್ತುಗಟ್ಟಿದ ಊರು ಎಂಬ ಹೆಸರು ಸಾರ್ಥಕವಾಗಿದೆ. ಹಾಗು ಈ ಹೆಸರು ಅಚ್ಚಗನ್ನಡವಾಗಿದೆ. ಇನ್ನು ಇಂಗ್ಲಿಷರು ಈಗಿನ ಕನ್ನಡ ಜಿಲ್ಹೆಗಳಲ್ಲಿ ಕಾನಡಾ, ಮಂಗಳೂರುಗಳನ್ನು ಮೈಸೂರಿನ ಯುದ್ಧದಲ್ಲಿ ಟೀಪುವಿನಿಂದ ದೊರಕಿಸಿದರು. ಈ ಯುದ್ಧದಲ್ಲಿ ನಿಜಾಮನ ಪಾಲಿಗೆ ಹೋದ ಬಳ್ಳಾರಿ, ಕಡಪೆ ಜಿಲ್ಹೆಗಳನ್ನು ನಿಜಾಮನು ದಂಡಿನ ವೆಚ್ಚಕ್ಕಾಗಿ ಇಂಗ್ಲಿಷರಿಗೆ ಬಿಟ್ಟುಕೊಟ್ಟನು. (೧೮೦೦)

ಬೆಳಗಾಂವಿ, ಧಾರವಾಡ ಹಾಗು ವಿಜಾಪೂರಗಳು ಮಹಾರಾಷ್ಟ್ರದ ಕಡೆಯ ಕಾಳಗದ ನಂತರ ೧೮೧೮ ರಲ್ಲಿ ಪೇಶ್ವೆಯಿಂದ ದೊರೆತವು. ಕೋಯಿಮುತ್ತೂರ ವಾದರೂ ಮೈಸೂರ ಕಾಳಗದಲ್ಲಿ ವಶವಾಯಿತು. ಕೊಡಗು ಸಹ ವಶವಾಗಿತ್ತು. ಆದರೆ ಅದನ್ನು ಮೂಲ ಅರಸುಮನೆತನಕ್ಕೆ ಒಪ್ಪಿಸಿದರು. ೧೮೩೪ ರಲ್ಲಿ ಅವ್ಯವಸ್ಥೆಯಾಗಲು ಕೊಡಗನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡರು. ನೀಲಗಿರಿ ಜಿಲ್ಹೆಯು ಮೊದಲು ಕೋಯಿಮುತ್ತೂರ ಜಿಲ್ಹೆಯ ಭಾಗವಾಗಿತ್ತು. ಅದನ್ನು ಹಿಂದಿನಿಂದ ಬೇರ್ಪಡಿಸಿದರು. ಈ ರೀತಿಯಿಂದ ಕರ್ನಾಟಕದ ಜಿಲ್ಹೆಗಳು ಇಂಗ್ಲಿಷರ ಕೈವಶವಾಗಿವೆ.

**೬. ಸಿಂಹಾವಲೋಕನ:**—ಕರ್ನಾಟಕದ ಇತಿಹಾಸವು ಉಜ್ವಲವಾಗಿದೆಯೆಂಬದನ್ನೂ, ಸ್ಫೂರ್ತಿದಾಯಕವಾಗಿದೆಯೆಂಬದನ್ನೂ, ಎಲ್ಲರೂ ಒಡಂಬಡುವರು. ಕನ್ನಡಿಗರು ಸಾಮ್ರಾಜ್ಯಸುಖವನ್ನು ಭೋಗಿಸಿರುವರು. ಹಾಗು ಇವರ ರಾಜಕೀಯ ಶಿಕ್ಷಣವು ಮರಾಟಿಗರಿಗಿಂತ ಪ್ರಾಚೀನವಾಗಿದೆ. ಕನ್ನಡಿಗರಲ್ಲಿಯೂ ವೀರಮಾತೆಯರು ಜನಿಸಿ, ರಾಜ್ಯಾಧಿಕಾರವನ್ನೂ, ಯುದ್ಧಕಾರ್ಯಗಳನ್ನೂ, ಸಾಗಿಸಿದ ಉದಾಹರಣೆಗಳು ಒಡೆದುಕಾಣುತ್ತವೆ. ಉತ್ತರಹಿಂದುಸ್ಥಾನಕ್ಕಿಂತ ಪೂರ್ವದಲ್ಲಿಯೇ ದಕ್ಷಿಣದಲ್ಲಿ ಕರ್ನಾಟಕದ ಕಾಳಗವು ಇಂಗ್ಲಿಷರ ವಿಧಿಲಿಪಿಯನ್ನು ಸಾರಿದ್ದರಿಂದ ಕರ್ನಾಟಕವನ್ನು ಮುಂದೆತರಲು ಪ್ರಯತ್ನಿಸುವದು ಅವರಿಗೆ ಭೂಷಣವಾಗಿದೆ. ಈಗಿನ ಕರ್ನಾಟಕದ ಭಿನ್ನವಿಚ್ಛಿನ್ನತೆಗೆ ಆಗಿನ ಯುದ್ಧದ ಪರಿಸ್ಥಿತಿಯು ಕಾರಣವಾಗಿದೆ. ಟೀಪುವಿನಿಂದ ಕೆಲವು ಕನ್ನಡ ಜಿಲ್ಹೆಗಳನ್ನು ಗೆದ್ದುಕೊಂಡಾಗ ಮುಂಬೈ ಇಲಾಖೆಯು ಅವರ ವಶದಲ್ಲಿ ಇಲ್ಲದಿರಲು ಅವುಗಳನ್ನು ಮದ್ರಾಸಕ್ಕೆ ಜೋಡಿಸಿದರು. ಮುಂದೆ ಪೇಶ್ವೆಯರ ಕೂಡ ಆದ ಕಾಳಗದಿಂದ ಮುಂಬೈ ಇಲಾಖೆಯು ಕೈವಶವಾಗಿದೆ. ಇನ್ನು ಮೇಲಾದರೂ ಕರ್ನಾಟಕವನ್ನು ಏಕೀಕರಿಸಿ ಕರ್ನಾಟಕದ ಉಪಕಾರವನ್ನು ತೀರಿಸುವದಕ್ಕಾಗಿಯಾಗಲಿ, ಇಲ್ಲವೆ ಇಲ್ಲಿಯೇ ಮೊಟ್ಟಮೊದಲು ಗೆಲವನ್ನು ಸಂಪಾದಿಸಿದ್ದರಿಂದ ಆತ್ಮಪೌರುಷದ ಸ್ಮಾರಕಸ್ಥಾನವೆಂದಾಗಲಿ, ಕರ್ನಾಟಕ ಪ್ರಾಂತವನ್ನು ಸ್ವತಂತ್ರಮಾಡುವದು ನಮ್ಮ ಸರಕಾರದ ಕರ್ತವ್ಯವಾಗಿದೆ. ಅವರು ಮನಸ್ಸಿಗೆ ತಂದರೆ—**ಇದೇನು! ಶಶವಿಷಾಣದಂಥ ಅಶಕ್ಯ ಕಾರ್ಯವೇ?**

---

# ಮೂರನೆಯ ಪ್ರಕರಣ.



## ಕನ್ನಡಿಗರ ವೈಶಿಷ್ಟ್ಯ.



೧ ದೇಶ-ಜನರು, ೨ ಭಾಷಾ-ವಾಙ್ಮಯ, ೩ ಕಲಾಕೌಶಲ್ಯ, ೪ ಕಡಲಪಯಣ, ೫ ಕರ್ನಾಟಕ ಗಾಯನ, ೬ ಉಡಿಗೆತೊಡಿಗೆ, ೭ ಶಿಷ್ಟಾಚಾರಗಳು, ೮ ಸ್ವಭಾವ, ೯ ಧರ್ಮಸ್ಥಾಪಕರು, ೧೦ ಕರ್ನಾಟಕವು ಕನ್ನಡಿಗರದು.

**೧. ದೇಶ-ಜನರು:—** ಕರ್ನಾಟಕ ಪ್ರಾಂತವು ಬಹಳ ಪ್ರಾಚೀನವಾಗಿದೆ. ಮಹಾಭಾರತದ ಭೀಷ್ಮಪರ್ವದಲ್ಲಿ ಈ ಶಬ್ದದ ಉಲ್ಲೇಖವಿದೆ. ಈ ಶಬ್ದದ ವ್ಯುತ್ಪತ್ತಿಯ ಬಗ್ಗೆ ವಾದವಿದೆ. (೧) ಕರಿದು+ನಾಡು (ಕಪ್ಪು ನೆಲವುಳ್ಳದ್ದು), (೨) ಕರು+ನಾಡು (ಎತ್ತರವಾದ ತಪ್ಪಲಭೂಮಿಯುಳ್ಳದ್ದು), (೩) ಕರು+ನಾಡು (ವಿಸ್ತಾರವಾದ ನಾಡು, ದೊಡ್ಡದೇಶ) ಎಂಬಿವು ಮೂರು ಅರ್ಥಗಳನ್ನು ಬಲ್ಲವರು ಪ್ರತಿಪಾದಿಸಿರುತ್ತಾರೆ. ಈ ಪ್ರಾಂತದಲ್ಲಿ ವಾಸಿಸುವ ಜನರಿಗೆ ಕನ್ನಡಿಗರೆಂದು ಹೆಸರು. ಇವರ ಭಾಷೆಯು ಕನ್ನಡವು:—ಈ ಕರ್ನಾಟಕ ಪ್ರಾಂತವು ದಕ್ಷಿಣೋತ್ತರ ೪೫೦ ಮೈಲು ಉದ್ದವಾಗಿಯೂ, ಪೂರ್ವ-ಪಶ್ಚಿಮ ೩೨೫ ಮೈಲು ಅಗಲಾಗಿಯೂ, ಇದೆ; ಇದರ ಕ್ಷೇತ್ರ—ಸು. ೧,೧೦೦೦೦ ಚಚ್ಚೌಕ ಮೈಲು. ಜನಸಂಖ್ಯೆಯು ೧೩ ಕೋಟಿ ಸೀಮೆಗಳು ಸಂಯೋಗವಾಗುವ ಪ್ರದೇಶದಲ್ಲಿಯ ಜನರು ೨ ಭಾಷೆಗಳನ್ನು ತಿಳಿಯುವದು ಸ್ವಾಭಾವಿಕವಾಗಿರುವದರಿಂದ, ಈ ಅಲ್ಪಸಂಖ್ಯಾಕರಾದ ಜನರು ಅಜ್ಞಾನದಿಂದಾಗಲಿ, ಪರಭಾಷೆಯ ಮೋಹದಿಂದಾಗಲಿ, ಕರ್ನಾಟಕವನ್ನು ಉತ್ತರಕ್ಕೆ ಮರಾಟಿಗರ ಕೈಗಾಗಲಿ, ಪೂರ್ವಕ್ಕೆ ತೆಲಗರ ಕೈಗಾಗಲಿ ತೊಡಕಿಸ ತೊಡಗುವದು ಹಾಸ್ಯಾಸ್ಪದವಾಗಲಿಕ್ಕಿಲ್ಲವೆ?

**೨. ಭಾಷಾ-ವಾಙ್ಮಯ:—** ಕನ್ನಡಭಾಷೆಯು ದ್ರವಿಡವರ್ಗದ ೬ ಸುಸಂಸ್ಕೃತ ಭಾಷೆಗಳಲ್ಲಿ ಒಂದಾಗಿದೆ. ಕ್ರಿ. ಶಕದ ಆರಂಭದ ಕಾಲದಿಂದಲೂ ಕನ್ನಡವು ಪ್ರಸಿದ್ಧಿಯನ್ನು ಪಡೆದಿತ್ತು. ಕ್ರಿ. ಶ. ೪ನೆಯ ಶತಮಾನದಿಂದೀಚೆಯ ಶಿಲಾಲಿಪಿಗಳೇ ದೊರೆಯುತ್ತವೆ. ಪ್ರಾಚೀನ ಕನ್ನಡ ವಾಙ್ಮಯವು ಸುಸಂಪನ್ನವಾಗಿದೆ. ಪ್ರಚಲಿತ ವಾಙ್ಮಯವೂ ಈಗ ಭರದಿಂದ ಬೆಳೆಯತೊಡಗಿದೆ. ಇದು

ವರೆಗೆ ಉಪಲಬ್ಧವಾದ ಕನ್ನಡ ಗ್ರಂಥಗಳಲ್ಲಿ ನೃಪತುಂಗನ ಕವಿರಾಜಮಾರ್ಗವೇ ಪ್ರಾಚೀನವಾದುದು. ಕರ್ನಾಟಕ ವಾಙ್ಮಯದಲ್ಲಿ ವಿಶೇಷ ಸಂಗತಿಯೆಂದರೆ— ಜೈನರ ಕಾಲ, ಲಿಂಗವಂತರ ಕಾಲ, ಬ್ರಾಹ್ಮಣಕಾಲವೆಂದು ಮೂರು ಭಾಗಗಳಾಗುತ್ತವೆ. ಕನ್ನಡ ವಾಙ್ಮಯದಲ್ಲಿ ಬ್ರಾಹ್ಮಣರಿಗಿಂತ ಬ್ರಾಹ್ಮಣೇತರರ ಕಾರ್ಯವು ಹೆಚ್ಚಾಗಿದೆ. ಎಷ್ಟೋ ಕನ್ನಡ ಕವಿಗಳು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆದು ಉಭಯಕವಿಗಳೆಂದು ಪ್ರಸಿದ್ಧರಾಗಿಹೋದರು. ಕನ್ನಡವು ಸಂಸ್ಕೃತದಿಂದ ಪೋಷಿಸಲ್ಪಟ್ಟುದು ನಿಜವಾದರೂ, ಸಂಸ್ಕೃತಕ್ಕೆ ಕೆಲಮಟ್ಟಿಗೆ ಉಪಕಾರವನ್ನೂ ಮಾಡಿದೆ. ಕನ್ನಡಕವಿಗಳು ಸಂಸ್ಕೃತದಲ್ಲಿ ಗ್ರಂಥಗಳನ್ನು ಬರೆದ ಸಂಗತಿಯನ್ನು ಮೇಲೆ ಉಲ್ಲೇಖಿಸಿರುತ್ತೇನೆ. ಇಷ್ಟಲ್ಲದೆ ಎಷ್ಟೋ ಕನ್ನಡ ಶಬ್ದಗಳು ಸಂಸ್ಕೃತದಲ್ಲಿ ಸೇರಿವೆ. (ಕಂಪೇರೆಟಿವ್ಹ ಗ್ರಾಮರ). ಕನ್ನಡ ವಾಙ್ಮಯದ ಮತ್ತೊಂದು ವಿಶೇಷವೆಂದರೆ ವಿದುಷಿಯರಾದ ಸ್ತ್ರೀಯರು ಸಹ ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುತ್ತಾರೆ. ಇವರಲ್ಲಿ ಕಂತಿ, ಹೊನ್ನಮ್ಮರಂತೂ ಸರ್ವರಿಗೂ ಪರಿಚಿತರೇ! ಗಂಗ, ರಾಷ್ಟ್ರಕೂಟ, ವಿಜಯನಗರ, ಮೈಸೂರ ಅರಸರಲ್ಲಿ ಅನೇಕರು ಸ್ವತಃ ಗ್ರಂಥಕಾರರಾಗಿರುವದು ಅಭಿಮಾನಾಸ್ಪದವಾದ ಸಂಗತಿಯಲ್ಲವೆ! ಪ್ರಾಕ್ತನ ವಿಮರ್ಶ ವಿಚಕ್ಷಣ ರಾವೆಬಾ|| ಆರ್. ನರಸಿಂಹಾಚಾರ್ಯರು ಕರ್ನಾಟಕ ಕವಿಚರಿತೆಯ ೨ ಸಂಪುಟಗಳನ್ನು ಪ್ರಸಿದ್ಧಿಸಿ ಕನ್ನಡಭಾಷೆಯ ಮೇಲೆ ಮಹದುಪಕಾರವನ್ನು ಮಾಡಿರುತ್ತಾರೆ. ಇನ್ನೊಂದು ಸಂಪುಟವು ಹೊರಡುವದು. ಈಗ ಹೊರಟ ೨ ಸಂಪುಟಗಳಿಂದ ಕನ್ನಡ ಕವಿಗಳ ಸಂಖ್ಯೆಯು ಸು. ೬೦೦ ಆಗುವದು. ಯಾವ ಅರಸರ ಕಾಲದಲ್ಲಿ ಯಾವ ಮಹಾಕವಿಗಳು ಆಶ್ರಯವನ್ನು ಪಡೆದಿದ್ದರೆಂಬದನ್ನು ಇಲ್ಲಿ ಸೂಚಿಸುತ್ತೇನೆ. **೧ ಗಂಗ ಅರಸರ ಕಾಲದಲ್ಲಿ**— ದುರ್ವಿನೀತನು (ಗದ್ಯಗ್ರಂಥಕಾರನು), ಗುಣವರ್ಮ I (ಶೂದ್ರಕ, ಹರಿವಂಶ). ಚಾವುಂಡರಾಯ ಮಂತ್ರಿ (ಚಾವುಂಡರಾಯಪುರಾಣ) ನಾಗವರ್ಮ I (ಛಂದೋಂಬುಧಿ). **೨ ರಾಷ್ಟ್ರಕೂಟರು**— ನೃಪತುಂಗನು (ಕವಿರಾಜಮಾರ್ಗ) ಪೊನ್ನ (ಶಾಂತಿಪುರಾಣ). ಶ್ರೀವಿಜಯ ದಂಡನಾಥ. **೩ ಚಾಲುಕ್ಯರು**—ಆದಿಪಂಪ (ಆದಿಪುರಾಣ, ಭಾರತ) ರನ್ನ (ಗದಾಯುದ್ಧ, ಅಜಿತಪುರಾಣ) ಶ್ರೀಧರಾಚಾರ್ಯ (ಜಾತಕತಿಲಕ) ನಾಗವರ್ಮ II (ಕಾವ್ಯಾವಲೋಕನ) ದುರ್ಗಸಿಂಹ (ಪಂಚತಂತ್ರ). **೪ ಕಲಚೂರ್ಯ**—ಬಿಜ್ಜಳನು-

ಬಸವೇಶ್ವರ, ಚನ್ನಬಸವೇಶ್ವರ, ಕೊಂಡಗೂಳಿ ಕೇಶಿರಾಜ ಮುಂತಾದ ವೀರ ಶೈವರು ಗ್ರಂಥಗಳನ್ನು ಬರೆದಿರುತ್ತಾರೆ. ಗದ್ಯಗ್ರಂಥಗಳ ಕಾಲವು ಪ್ರಾರಂಭವಾಯಿತು. **೫ ಹೊಯ್ಸಾಳರು**—ಅಭಿನವಪಂಪ ( ಮಲ್ಲಿನಾಥಪುರಾಣ, ರಾಮಾಯಣ ). ಕಂತಿ ( ಸಮಸ್ಯ ). ರಾಜಾದಿತ್ಯ ( ಕ್ಷೇತ್ರಗಣಿತ ), ಸುಮನೋಬಾಣ. ಹರಿಹರ ( ಗಿರಿಜಾಕಲ್ಯಾಣ ). ನೇಮಿಚಂದ್ರ ( ಅರ್ಧನೇಮಿಪುರಾಣ ) ರುದ್ರಭಟ್ಟ ( ಜಗನ್ನಾಥವಿಜಯ ). ಮಲ್ಲಿಕಾರ್ಜುನ ( ಸೂಕ್ತಿ ಸುಧಾರ್ಣವ ) ಜನ್ನ ( ಯಶೋಧರಚರಿತೆ ). ಕೇಶಿರಾಜ ( ಶಬ್ದಮಣಿದರ್ಪಣ ). **೬ ಸವದತ್ತಿಯ ರಟ್ಟರು** - ಪಾರ್ಶ್ವಪಂಡಿತ ( ಪಾರ್ಶ್ವನಾಥಪುರಾಣ ). ಗುಣವರ್ಮ II ( ಪುಷ್ಪದಂತಪುರಾಣ ). **೭ ಶಿಲಾಹಾರರು**— ಕರ್ಣಪಾರ್ಯ ( ನೇಮಿನಾಥಪುರಾಣ). ನೇಮಿಚಂದ್ರ ( ಲೀಲಾವತಿ ). **೮ ಕೊಡಗದ ಅರಸರು**—ವೀರರಾಜೇಂದ್ರ ( ರಾಜೇಂದ್ರನಾಮೆ ). **೯ ವಿಜಯನಗರದ ಅರಸರು**—ಮಧುರ ಆಸ್ಥಾನ ಕವಿ ( ಧರ್ಮನಾಥಪುರಾಣ ). ೧ನೆಯ ಮಂಗರಾಜ ( ವಿಷಚಿಕಿತ್ಸಾ ). ಕುಮಾರವ್ಯಾಸ ( ಕನ್ನಡಭಾರತ ). ಸದಾನಂದಯೋಗಿ ( ಭಾಗವತ ). ದೇವರಾಜ ( ಸೊಬಗಿನ ಸೋನೆ ). ಬತ್ತಲೇಶ್ವರ ( ರಾಮಾಯಣ ). ಲಕ್ಕಣದಂಡೇಶ ( ಶಿವತತ್ವಚಿಂತಾಮಣಿ ). **೧೦ ಮೈಸೂರ ಅರಸರು**— ರಾಮಚಂದ್ರ ( ಅಶ್ವಶಾಸ್ತ್ರ). ಭಾಸ್ಕರ ( ಬೇಹಾರಗಣಿತ ). ಹೊನ್ನಮ್ಮ ( ಹದಿಬದೆಯ ಧರ್ಮ ). ತಿರುಮಲಾರ್ಯ ( ಅಪ್ರತಿಮವೀರ ಚರಿತ್ರ ). ಚಾಮರಾಜ ( ರಾಮಾಯಣ, ಬ್ರಹ್ಮೋತ್ತರ ಖಂಡ ). ಚಿಕ್ಕದೇವರಾಜ ( ಗೀತಗೋಪಾಲ ). ಚಿಕ್ಕುಪಧ್ಯಾಯ ( ವಿಷ್ಣುಪುರಾಣ ). ೩ನೆಯ ಕೃಷ್ಣರಾಜ. ಸಾಧಾರಣವಾಗಿ ಕನ್ನಡವಾಙ್ಮಯದ ಕಲ್ಪನೆಯು ಬರಲೆಂಬ ಉದ್ದೇಶದಿಂದ ಈ ಪಟ್ಟಿಯನ್ನು ಕೊಟ್ಟಿರುತ್ತೇನೆ. ವಿಶೇಷವನ್ನೆಲ್ಲ ತಿಳಿಯಲಪೇಕ್ಷಿಸುವವರು ಕವಿಚರಿತ್ರೆಗಳನ್ನೇ ಓದಬೇಕು. ಕೇವಲ ಧಾರ್ಮಿಕ ವಿಷಯವನ್ನಲ್ಲದೆ, ಅಶ್ವಶಾಸ್ತ್ರ, ವಿಷಚಿಕಿತ್ಸಾ, ಬೇಹಾರಗಣಿತ, ಕ್ಷೇತ್ರಗಣಿತ ಮೊದಲಾದ ಲೋಕೋಪಯುಕ್ತ ವಿಷಯಗಳ ಮೇಲೆಯೂ ಕನ್ನಡವಾಙ್ಮಯದಲ್ಲಿ ಗ್ರಂಥಗಳು ಸಿಗುತ್ತವೆ. ಕರ್ನಾಟಕದ ಅರಸರು ಇತರ ಭಾಷೆಯ ಕವಿಗಳಿಗೂ ಆಶ್ರಯವನ್ನು ಕೊಟ್ಟದ್ದರಿಂದ ಕರ್ನಾಟಕವು ಇತರ ಭಾಷೆಗಳನ್ನೂ ಪೋಷಿಸಿ ಉಪಕರಿಸಿರುತ್ತದೆಂಬದನ್ನು ಮರೆಯಲಾಗದು.

೩. **ಕಲಾಕೌಶಲ್ಯ:**—ಭಾಷಾದೃಷ್ಟಿಯಿಂದ ಕನ್ನಡಿಗರು ತಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಂಡಂತೆ ಕಲಾಕೌಶಲ್ಯದಲ್ಲಿಯೂ ತಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಂಡಿರುತ್ತಾರೆ. ಕರ್ನಾಟಕದ ಕಟ್ಟಡಗಳು ಎಷ್ಟೋ ವರ್ಷಗಳಿಂದ ಚಳಿ ಮಳೆ ಗಾಳಿಗಳಿಗೆ ಎದುರಾಗಿ ನಿಂತರೂ, ತಮ್ಮ ನಯನಮನೋಹರತ್ವದಿಂದ ದೂರದೂರಿನ ಪ್ರವಾಸಿಕರನ್ನು ಲೋಹಚುಂಬಕದಂತೆ ಆಕರ್ಷಿಸುತ್ತವೆ. ಪರಿಣತಾವಸ್ಥೆಗೆ ಮುಟ್ಟಿದ ಎಲ್ಲ ಸಾಮ್ರಾಜ್ಯಗಳು ಶಿಲ್ಪಕಲೆಗೆ ಉತ್ತೇಜನ ಕೊಟ್ಟಿರುತ್ತವೆ. ಈ ಕರ್ನಾಟಕದ ಕಟ್ಟಡಗಳಿಂದ ಪೂರ್ವದ ಕರ್ನಾಟಕದ ಸಾರ್ವಭೌಮರ ವೈಭವವು ಮನಸ್ಸಿಗೆ ಹೊಳೆಯುದಿರದು. **ಕದಂಬ ಅರಸರ** ಕಲಾಕೌಶಲ್ಯವನ್ನು ಕಾರ್ಲೆಯಲ್ಲಿಯೂ, **ರಾಷ್ಟ್ರಕೂಟರ** ಕಲಾಕೌಶಲ್ಯವನ್ನು ವೇರೂಳದಲ್ಲಿಯೂ ಕಾಣಬಹುದು. ವೇರೂಳದ ಪ್ರಸಿದ್ಧವಾದ ಕೈಲಾಸಗುಡಿಯನ್ನು ರಾಷ್ಟ್ರಕೂಟವಂಶದ ಕೃಷ್ಣರಾಜನು ಕಟ್ಟಿಸಿದನು. ( ೭೭೫ ) ಈ ವೇರೂಳವು ಈಗ ನಿಜಾಮನ ರಾಜ್ಯದಲ್ಲಿರುತ್ತದೆ. **ಬಾದಾಮಿಯ ಚಲುಕ್ಯರ** ಕಟ್ಟಡಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು, ಇಟಗಿ, ಲಕ್ಕುಂಡಿ, ಲಕ್ಷ್ಮೇಶ್ವರ, ಹಾನಗಲ್ಲ ಈ ಊರುಗಳಲ್ಲಿ ದೃಷ್ಟಿಗೆ ಬೀಳುತ್ತವೆ. **ಕಲ್ಯಾಣಪುರದ ಚಾಲುಕ್ಯರ** ಕಾಲದಲ್ಲಿ ಇಟಗಿಯ ಮಹಾದೇವರ ಗುಡಿಯು ಕಟ್ಟಲ್ಪಟ್ಟಿದೆ. **ಬಲ್ಲಾಳ ಅರಸರ** ಕಾಲದ ಕಟ್ಟಡಗಳು ಹಳೇಬೀಡು, ಬೇಲೂರ, ಸೋಮನಾಥಪುರ, ಹರಿಹರ, ಗದಗಗಳಲ್ಲಿರುತ್ತವೆ. ಈ ಬಲ್ಲಾಳ ಅರಸರ ಕಾಲವೆಂದರೆ ಶಿಲ್ಪಕಲೆಯ ಸುಗ್ಗಿಯೆಂದು ಹೇಳಬಹುದು. ಇವುಗಳಲ್ಲಿ ಬೇಲೂರಿನ ಚನ್ನಕೇಶವನ ಗುಡಿಯೂ, ಹಳೇಬೀಡಿನ ಹೊಯ್ಸಾಳೇಶ್ವರನ ಗುಡಿಯೂ ಹಿಂದುಸ್ಥಾನದ ಶಿಲ್ಪಶಾಸ್ತ್ರಕ್ಕೆ ಕಳಸವನ್ನಿಡುವವು. ಇವುಗಳನ್ನು ಕನ್ನಡಿಗನಾದವನು ಒಮ್ಮೆಯಾದರೂ ನೋಡಿಯೇ ಧನ್ಯತೆಯನ್ನು ಪಡೆಯಬೇಕಲ್ಲದೆ ಇವುಗಳನ್ನು ವರ್ಣಿಸಿ ಹೇಳುವ ಸಾಮರ್ಥ್ಯವು ಯಾರ ಲೆಕ್ಕಣಿಕೆಯಲ್ಲಿಯೂ ಇಲ್ಲ. **ವಿಜಯನಗರದ ಅರಸರ** ಕಾಲದಲ್ಲಿಯೂ ಈ ಶಿಲ್ಪಕಲೆಯ ಸುಗ್ಗಿಯು ನಡೆದಿತ್ತು. ಈ ಅರಸರ ಕಾಲದಲ್ಲಿ ಮಿತಿಮೀರಿ ಗುಡಿಗಳು ಕಟ್ಟಿಸಲ್ಪಟ್ಟವೆ. ಇವುಗಳಲ್ಲಿ ವಿಜಯವಿಠ್ಠಲನ ಗುಡಿಯೂ, ಹಂಪಿಯ ವಿರುಪಾಕ್ಷನ ಗುಡಿಯೂ ನೋಡತಕ್ಕಂಥವಿರುತ್ತವೆ. ಹರಿಹರ ಹಾಗೂ ಬುಕ್ಕರಾಯರ ಕಾಲದಲ್ಲಿ ಕಟ್ಟಿಸಿದ ಶ್ರೀಂಗೇರಿಯ ವಿದ್ಯಾಶಂಕರ ಗುಡಿಯು ವಿಶೇಷ ಪ್ರೇಕ್ಷಣೀಯವಾಗಿದೆ.

ಇದರಲ್ಲಿ ಹನ್ನೆರಡು ಕಂಬಗಳಿದ್ದು ರಾಶಿಯುಪ್ರಕಾರ ಆಯಾ ಕಂಬಗಳ ಮೇಲೆ ಆಯಾ ತಿಂಗಳಲ್ಲಿ ಬಿಸಿಲು ಬೀಳುತ್ತದೆ. ದೂರದೂರಿನ ಪ್ರವಾಸಿಗಳನೇಕರು ಈ ಕರ್ನಾಟಕದ ಕಟ್ಟಡಗಳನ್ನು ನೋಡಿ ಮನಬಂದಂತೆ ಹೊಗಳಿರುತ್ತಾರೆ. ಫರ್ಗ್ಯು ಸನ್ ಸಾಹೇಬರು ಶಿಲ್ಪಕಲೆಗಳಲ್ಲಿ ಕರ್ನಾಟಕದ ಕಟ್ಟಡಗಳು ಅಗ್ರಸ್ಥಾನವನ್ನು ಪಡೆಯುತ್ತವೆಂದು ಸ್ಪಷ್ಟವಾಗಿ ಸಾರಿ ಹೇಳಿರುತ್ತಾರೆ.

೪. **ಕಡಲಪಯಣ**:—ಕನ್ನಡಿಗರು ಜಲಪರ್ಯಟನದಲ್ಲಿ ಕುಶಲರಾಗಿದ್ದರೆಂದೂ, ದೂರದೂರಿನ ದೇಶಗಳೊಡನೆ ವ್ಯಾಪಾರವನ್ನಿಟ್ಟಿದ್ದರೆಂದೂ, ಇತಿಹಾಸಕಾರರು ಅನೇಕ ಆಧಾರಗಳನ್ನು ಕೊಟ್ಟು ಸಿದ್ಧಮಾಡಿರುತ್ತಾರೆ. ಕ್ರಿ. ಶ. ೨ನೆಯ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ ನಾಟಕದಲ್ಲಿ ಕನ್ನಡ ಶಬ್ದಗಳು ದೊರೆಯುತ್ತವೆ. ಬೈಬಲದಲ್ಲಿಯೂ ಕನ್ನಡ ಶಬ್ದಗಳು ಅಡಗಿವೆ. ಕೋಯಿಮುತ್ತೂರಲ್ಲಿ ಹಳೆಯ ರೋಮನ್ ನಾಣ್ಯಗಳು ದೊರೆಯುತ್ತದೆ. ಇಜಿಪ್ತದ ಟಾಲೇಮಿ ಎಂಬ ಪ್ರವಾಸಿಕನು ಹಿಂದುಸ್ಥಾನದ ವ್ಯಾಪಾರದ ಪ್ರಸಿದ್ಧ ಪಟ್ಟಣಗಳಲ್ಲಿ ಬಾದಾಮಿ, ಇಂಡಿ, ಪಟ್ಟದಕಲ್ಲುಗಳನ್ನು ಉಲ್ಲೇಖಿಸಿರುತ್ತಾನೆ. ವಿಜಯನಗರದ ಅರಸರಲ್ಲಿಯಂತೂ ನೂರಾರು ಹಡಗಗಳಿದ್ದವೆಂದು ಪ್ರಸಿದ್ಧಿಯುಂಟು. ಇದಲ್ಲದೆ " ಪೂರ್ವ-ಪಶ್ಚಿಮ-ದಕ್ಷಿಣ ಸಮುದ್ರಾಂಕಿತ " ಎಂಬ ಬಿರುದನ್ನು ವಿಜಯನಗರದ ಅರಸರಲ್ಲಿ ಕೆಲವರು ಅಭಿಮಾನದಿಂದ ತಾಳಿರುತ್ತಾರೆ. ಇವೆಲ್ಲ ಕಾರಣಗಳನ್ನು ವಿಚಾರಿಸಿ ನೋಡಲು, ಕಡಲಪಯಣವು ಕನ್ನಡಿಗರದೊಂದು ವೈಶಿಷ್ಟ್ಯವನ್ನು ಸೂಚಿಸುತ್ತದೆ. ಪ್ರಾಚೀನಕಾಲದಿಂದ ಈ ಕಲೆಯು ಜ್ಞಾನವು ಅವರಲ್ಲಿ ಪರಂಪರಾಗತವಾಗಿ ಬಂದಿದ್ದು ಅವರು ಅದನ್ನು ಅಭಿಮಾನಪುರಸ್ಸರವಾಗಿ ಮುಂದೆ ಸಾಗಿಸಿದ್ದು ಕಂಡುಬರುತ್ತದೆ. ಸದ್ಯಕ್ಕೆ ಮಾತ್ರ ಈ ಕಲೆಯು ಕನ್ನಡಿಗರಲ್ಲಿ ನಾಮಶೇಷವಾಗಿದ್ದರೂ ಈ ಕಲೆಗೆ ಉತ್ತೇಜನ ಕೊಡಲಿಕ್ಕೆ ಸಾಕಷ್ಟು ಅನುಕೂಲವಿದೆ. ಯಾಕಂದರೆ ಕರ್ನಾಟಕ ಪ್ರಾಂತದ ಪಶ್ಚಿಮ ದಂಡೆಗೆ ಸಮುದ್ರವು ಹೊಂದಿಕೊಂಡಿದ್ದು, ಪ್ರಸಿದ್ಧವಾದ ಬಂದರಗಳಿರುತ್ತವೆ. ಸ್ವತಂತ್ರ ಕರ್ನಾಟಕಪ್ರಾಂತವಾದರೆ ಈ ಕಲೆಯು ಕಣ್ತೆರೆಯುವ ಆಶೆಯುದೆ.

೫. **ಕರ್ನಾಟಕ ಗಾಯನ**:— ಸಂಗೀತಶಾಸ್ತ್ರದಲ್ಲಿಯೂ ಕರ್ನಾಟಕವು ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿರುತ್ತದೆ. ಕರ್ನಾಟಕೀ ರಾಗವು ಕಠಿಣವಾಗಿರುತ್ತದೆಂದು ಸಂಗೀತಕಾರರು ಅನ್ನುವ ಮಾತು ಕರ್ನಾಟಕದ ವೈಶಿ

ಷ್ಟ್ಯವನ್ನೇ ಸೂಚಿಸುತ್ತದೆ. ಕರ್ನಾಟಕಗಾಯನದಲ್ಲಿ ಪಂಡಿತರಿಗೂ ಪಾಮರರಿಗೂ ಕೂಡಿಯೇ ಅವಕಾಶವುಂಟು. ಪಾಮರರ ಲಾವಣಿಯ ಪದಗಳಿಂದ ಪಂಡಿತರ ಶಾಸ್ತ್ರೀಯ ರಾಗದವರೆಗೆ ಕರ್ನಾಟಕದ ಗಾಯನವು ವ್ಯಾಪ್ತಿಯನ್ನು ಪಡೆದಿರುತ್ತದೆ.

೬. **ಉಡಿಗೆ-ತೊಡಿಗೆ:**—ಕನ್ನಡಿಗನು ಹಿಂದುಸ್ಥಾನದ ಬೇಕಾದ ಭಾಗದಲ್ಲಿ ಪ್ರವಾಸಕ್ಕೆ ಹೋದರೂ, ಅವನ ಉಡಿಗೆ-ತೊಡಿಗೆಗಳ ಮೇಲಿಂದ ಕನ್ನಡಿಗನೆಂದು ಜನರು ಗುರ್ತಿಸುತ್ತಿರುವರು. ಇದರಿಂದ ಉಡಿಗೆ-ತೊಡಿಗೆಗಳಲ್ಲಿಯೂ ಕನ್ನಡಿಗರು ತಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಂಡಿರುವರೆಂಬುದು ವ್ಯಕ್ತವಾಗುವದಿಲ್ಲವೇ? ತಲೆಯ ಮೇಲೆ ರುಮಾಲನ್ನು ಸುತ್ತಿಕೊಂಡ, ಹಾಗೂ ಧೋತರವನ್ನು ಹೊದ್ದುಕೊಂಡ ಒಂದು ಕರ್ನಾಟಕವ್ಯಕ್ತಿಯು ಪುಣೆಯಲ್ಲಿ ಅಥವಾ ಮುಂಬೈಯಲ್ಲಿ ದೃಷ್ಟಿಗೆ ಬಿದ್ದಕೂಡಲೆ, ಅಲ್ಲಿಯ ಜನರು ತಿರಸ್ಕಾರಭಾವದಿಂದ "ಕಾನಡೀ ಅಪ್ಪಾ" ಎಂದು ಸಂಬೋಧಿಸುತ್ತಿರುವದು ಎಲ್ಲರ ಅನುಭವದ ಸಂಗತಿಯು. ಈ ಶಬ್ದವನ್ನು ಅವರು ಎಷ್ಟೇ ತಿರಸ್ಕಾರಭಾವದಿಂದ ನುಡಿದರೂ, ಇದು ನಮ್ಮ ವೈಶಿಷ್ಟ್ಯವನ್ನು ಸೂಚಿಸುವ ಶಬ್ದವಾಗಿರುತ್ತದೆಂದು ಕನ್ನಡಿಗರು ಅಭಿಮಾನವನ್ನು ತಾಳಬಹುದು. ಇದು "**ಕನ್ನಡಿಗರು ಮರಾಟಿಗರಲ್ಲ; ಶುದ್ಧ ಕನ್ನಡಿಗರಿರುತ್ತಾರೆ" ಎಂಬದನ್ನು ಒಪ್ಪಿಕೊಳ್ಳುವ ಮರಾಟಿಗರ ಕೈಫಿಯತ್ತು ಆಗಲಿಕ್ಕಿಲ್ಲವೇ?**

೭. **ಶಿಷ್ಟಾಚಾರಗಳು:**—ಧಾರ್ಮಿಕ ವಿಧಿಗಳಲ್ಲಿಯೂ, ಉಪನಯನ ಲಗ್ನ ಮೊದಲಾದವುಗಳಲ್ಲಿಯೂ, ಅತಿಥಿಸತ್ಕಾರಗಳಲ್ಲಿಯೂ, ಆಚಾರವಿಚಾರಗಳಲ್ಲಿಯೂ ಉಳಿದ ಪ್ರಾಂತದವರಿಗೂ ಕನ್ನಡಿಗರಿಗೂ ಹೆಚ್ಚುಕಡಿಮೆಯಿದ್ದು ಇವು ಕನ್ನಡಿಗರ ವೈಶಿಷ್ಟ್ಯವನ್ನೇ ಸೂಚಿಸುತ್ತವೆ.

೮. **ಸ್ವಭಾವ:**—ಕನ್ನಡಿಗರು ಬಹುತರವಾಗಿ ಸಭ್ಯರೂ, ಸುಸ್ವಭಾವದವರೂ ಇರುತ್ತಾರೆ. ಇವರು ಸ್ನೇಹಕ್ಕೆ ಯೋಗ್ಯರು. ಕಪಟಿಗಳಲ್ಲ. ಇವರು ಬಂಧುಬಳಗದವರನ್ನು ವಿಶೇಷ ಹಚ್ಚಿಕೊಳ್ಳುವರು. ದೇವರಲ್ಲಿಯೂ ತಮ್ಮ ಧರ್ಮದಲ್ಲಿಯೂ ಇವರಿಗೆ ವಿಶೇಷ ಭಕ್ತಿಯುಂಟು. ಇವರು ದೀರ್ಘ ದ್ವೇಷಿಗಳಲ್ಲ. ಔದಾರ್ಯವು ಇವರಲ್ಲಿ ಒಡೆದುಕಾಣುತ್ತದೆ. ಇವರಲ್ಲಿ ಬಹುಶಃ ಜನರು ಜಮೀನದಾರರಿದ್ದು ದೊಡ್ಡ ಮನಸ್ಸಿನವರಿರುತ್ತಾರೆ.

೯. **ಧರ್ಮಸ್ಥಾಪಕರು:**—ಧರ್ಮ ಹಾಗೂ ತತ್ವಜ್ಞಾನದಂಥ ಗಹನವಾದ ವಿಷಯವನ್ನು ಜಗತ್ತಿಗೆ ಬೋಧಿಸಿ ಕರ್ನಾಟಕವು ಈ ವಿಷಯದಲ್ಲಿ ಜಗತ್ತನ್ನು ಋಣಿಯಾಗಿಮಾಡಿರುತ್ತದೆ. ದ್ವೈತ ಮತವನ್ನು ಬೋಧಿಸಿದ ಮಧ್ವಾಚಾರ್ಯರಿಗೆ ಕರ್ನಾಟಕವು ತವರಮನೆಯಾಗಿರುತ್ತದೆ ಅದ್ವೈತ ಮತವನ್ನು ಬೋಧಿಸಿದ ಶಂಕರಾಚಾರ್ಯರಿಗೂ ವಿಶಿಷ್ಟಾದ್ವೈತಮತವನ್ನು ಬೋಧಿಸಿದ ರಾಮಾನುಜಾಚಾರ್ಯರಿಗೂ ಕರ್ನಾಟಕವು ರಂಗಭೂಮಿಯಾಗಿರುತ್ತದೆ. ಸಮಂತಭದ್ರ ಮೊದಲಾದ ಜೈನ ಗುರುಗಳು ಜೈನಧರ್ಮವನ್ನು ಕರ್ನಾಟಕದಲ್ಲಿ ಬೋಧಿಸಿರುತ್ತಾರೆ. ೧೨ನೆಯ ಶತಮಾನದಲ್ಲಿ ಬಸವೇಶ್ವರನು ವೀರಶೈವ ಮತವನ್ನುದ್ಧರಿಸಿ, ಒಳ್ಳೇ ಧರ್ಮಸುಧಾರಕನೆಂದು ಪ್ರಸಿದ್ಧಿಯನ್ನು ಹೊಂದಿದನು. ಇವರೆಲ್ಲರ ಮತಗಳು ಕರ್ನಾಟಕದಲ್ಲಿರುವದರಿಂದ, ಈ ಮತಗಳ ಅನುಯಾಯಿಗಳು ಬೇಕಾದ ಪ್ರದೇಶದಲ್ಲಿಯೇ ಇರಲಿ, ಅವರೆಲ್ಲರಿಗೆ ಕರ್ನಾಟಕವು ಕ್ಷೇತ್ರಸ್ಥಳದಂತೆ ತೋರುತ್ತದೆ. ಇವರು ಬೋಧಿಸಿದ ತತ್ವಜ್ಞಾನದ ಗ್ರಂಥಗಳು, ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ಭಾಷಾಂತರಹೊಂದಿ ಹೋಗಿರುವದರಿಂದ ಕರ್ನಾಟಕಕ್ಕೆ ಜಗತ್ತು ಕೃತಜ್ಞವಾಗಿರಬೇಡವೆ?

೧೦. **ಕರ್ನಾಟಕವು ಕನ್ನಡಿಗರದು:**—ಇವೆಲ್ಲ ವೈಶಿಷ್ಟ್ಯಗಳನ್ನು ಲಕ್ಷದಲ್ಲಿ ತಂದು ಕನ್ನಡಿಗರು ಏಕಕಾಲಕ್ಕೆ ಏಕಸ್ವರದಿಂದ ಕರ್ನಾಟಕವು ಕನ್ನಡಿಗರದೆಂದು ಕೂಗಬೇಕೆಂದು ಸೂಚಿಸುತ್ತೇನೆ. ನಮ್ಮ ಪೂರ್ವಜರ ಅಭಿಮಾನವನ್ನು ನೋಡಿರಿ! ಸುಂದರವಾದ ಹಾಗೂ ಇಷ್ಟವಾದ ವಸ್ತುಗಳಿಗೆ ಕನ್ನಡ ಶಬ್ದವನ್ನು ಜೋಡಿಸುವ ಪರಿಪಾಠವನ್ನಿಟ್ಟಂತೆ ಕಂಡುಬರುತ್ತದೆ. ಉದಾ—ಗಿಳಿಗೆ ಕನ್ನಡವಕ್ಕಿಯೆಂಬ ಹೆಸರದೆ. ಈಶ್ವರನಿಗೆ ಕನ್ನಡಿಗನೆಂದು ಹೆಸರದೆ (ವ್ಯುತ್ಪತ್ತಿಯು ಹೇಗೆಯೇ ಇರಲಿ) ಕಣ್ಣಿಗೆಹಾಕುವ ಚಾಳೀಸಿಗೆ ಕನ್ನಡಕವೆಂದು ಹೆಸರದೆ. ಕನ್ನಡಿಕ ಶಬ್ದದ ಬದಲು ಕನ್ನಡಕವೆಂದು ಹೇಳಿದ್ದರಿಂದ ಕನ್ನಡಭಾಷೆಯು ಕಾಜಿನಷ್ಟು ನಿಚ್ಚಳವಾದದ್ದೆಂದು ಹೇಳುವ ಉದ್ದೇಶವಿತ್ತೋ ಏನೋ! ಇವೆಲ್ಲವುಗಳನ್ನು ನೋಡಿಯಾದರೂ ಕನ್ನಡಿಗರಲ್ಲಿ ಸ್ವಾಭಿಮಾನವೂ ಸ್ಫೂರ್ತಿಯೂ ಹೆಚ್ಚಲೆಂದು ಕೋರುತ್ತೇನೆ.

**ಕೂಗಿರಿ— ಕರ್ನಾಟಕವು ಕನ್ನಡಿಗರದು!**

---

# ನಾಲ್ಕನೆಯ ಪ್ರಕರಣ.

## ಕರ್ನಾಟಕದ ಈಗಿನ ಸ್ವರೂಪವು.

೧ ಮೇರೆಗಳು, ೨ ಛಿನ್ನವಿಚ್ಛಿನ್ನತೆ ಹಾಗೂ ಆದರ ಪರಿಣಾಮ, ೩ ಸದ್ಯಸ್ಥಿತಿ, ೪ ಒತ್ತಾಯದ ಪ್ರಾಥಮಿಕ ಶಿಕ್ಷಣ, ೫ ರಾಮಬಾಣೋಪಾಯ, ೬ ಕನ್ನಡಿಗರಲ್ಲಿ ಒಕ್ಕಟ್ಟು.

**೧ ಮೇರೆಗಳು:**—ಒಂದಾನೊಂದು ಕಾಲದಲ್ಲಿ ಪುಷ್ಟವಾದ ಹಾಗು ಸಶಕ್ತವಾದ ಕರ್ನಾಟಕವು ಈಗ ಕ್ಷಯರೋಗದಿಂದ ಕ್ಷೀಣವಾಗಿರುತ್ತದೆಂಬದನ್ನು ಅರಿತುಕೊಳ್ಳಬೇಕಾದರೆ, ಪ್ರಾಚೀನ ಹಾಗು ಅರ್ವಾಚೀನ ಗಡಿಗಳನ್ನು ಪರೀಕ್ಷಿಸಿದರೆ ಸಾಕು. ೯ನೆಯ ಶತಮಾನದ ಮಧ್ಯದಲ್ಲಿ ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ಕನ್ನಡ ನಾಡಿನ ವ್ಯಾಪ್ತಿಯನ್ನು ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೆ ಹೇಳಿರುವನು. ೧೨ನೆಯ ಶತಮಾನದಲ್ಲಿದ್ದ ನಂಜುಂಡಕವಿಯು ಈ ಅಭಿಪ್ರಾಯವನ್ನು ಪುಷ್ಟೀಕರಿಸಿರುತ್ತಾನೆ. ಬಲುಚಿಸ್ಥಾನದಲ್ಲಿ ನಡೆಯುವ ಭಾಷೆಯು ದ್ರವಿಡವರ್ಗಕ್ಕೆ ಹೋಲುತ್ತಿರುವದರಿಂದ ಕನ್ನಡ ನಾಡಿನ ವ್ಯಾಪ್ತಿಯು ಇದಕ್ಕೂ ಹೆಚ್ಚಿಗಿರಬೇಕೆಂದು ಕೆಲವು ಯುರೋಪಿಯನ್ ವಿದ್ವಾಂಸರು ತರ್ಕಿಸುತ್ತಾರೆ. ಗತಿಸಿಹೋದ ವಾಸುದೇವಾಚಾರ್ಯ ಕೆರೂರ ಇವರು ಹಿಂದಕ್ಕೆ ಸಚಿತ್ರಭಾರತದ ಒಂದು ಸಂಚಿಕೆಯಲ್ಲಿ ಬೃಹತ್ ಕರ್ನಾಟಕದ ಉತ್ತರ ಮೇರೆಯನ್ನು ಸಪ್ರಮಾಣವಾಗಿ ನರ್ಮದೆಯ ಆಚೆಗೆ ಮುಟ್ಟಿಸಿರುತ್ತಾರೆ. ಪೂರ್ವ, ಪಶ್ಚಿಮ, ದಕ್ಷಿಣ ಗಡಿಗಳಂತೂ ಸಮುದ್ರಾಂಕಿತವಾಗಿದ್ದವು. ಇಂಥ ಬೃಹತ್ ಕರ್ನಾಟಕವು ಈಗ ಬಡಕ ಕರ್ನಾಟಕವಾಗಿದೆ. ದುರ್ದೈವದಿಂದಲೋ ಅಥವಾ ಕಾಲವಶದಿಂದಲೋ ಅತ್ತಿತ್ತ ಸಿಡಿದುಬಿದ್ದ ಇದರ ಅವಯವಗಳನ್ನು ಅಚ್ಚುಕಟ್ಟಾಗಿ ಹೊಂದಿಸಿ ಅದರಲ್ಲಿ ಅಭಿಮಾನವೆಂಬ ಜೀವಕಳೆಯು ತುಂಬುವಂತೆ ಸ್ವತಂತ್ರಪ್ರಾಂತವನ್ನಾಗ ಮಾಡಿ ಈ ಭಾವೀ ಕರ್ನಾಟಕವನ್ನು ಬಳಿಕೆಗೆ ತರುವದಕ್ಕೋಸ್ಕರ ಶಕ್ಯವಿದ್ದ ರೀತಿಯಿಂದೆಲ್ಲ ಪ್ರಯತ್ನಿಸುವದು ಪ್ರತಿಯೊಬ ಕನ್ನಡಿಗನ ಕರ್ತವ್ಯವಾಗಿದೆ. ಈಗಿನ ಬಡಕ ಕರ್ನಾಟಕದ ಮೇರೆಯನ್ನು ನಕಾಶದಲ್ಲಿ ನೋಡಬಹುದು. ಉತ್ತರದಲ್ಲಿ ಮರಾಟಿಗರೂ, ಪೂರ್ವದಲ್ಲಿ ತೆಲ

ಗರೂ, ದಕ್ಷಿಣದಲ್ಲಿ ತಮಿಳರೂ, ಪಶ್ಚಿಮದಲ್ಲಿ ತುಳು, ಮಲಿಯಾಳಿಗಳೂ ಒಳ ನುಗ್ಗುತ್ತ ಬಂದು ಬಡಕ ಮಾಡಿರುತ್ತಾರೆ.

೨. **ಭಿನ್ನವಿಚ್ಛಿನ್ನತೆ ಹಾಗೂ ಅದರ ಪರಿಣಾಮ:**—ಸ್ಥೂಲ ಮಾನದಿಂದ ನಿರೀಕ್ಷಿಸುವವರಿಗೆ ಬ್ರಿಟೀಶ್ ಕರ್ನಾಟಕ ಹಾಗೂ ಸಂಸ್ಥಾನಗಳ ಕರ್ನಾಟಕವೆಂದು ಎರಡೇ ಭಾಗಗಳು ಕಂಡುಬಂದರೂ, ಇವುಗಳಲ್ಲಿ ಅನೇಕ ಒಳಭೇದಗಳಿವೆ. ಮೊದಲು ಬ್ರಿಟೀಶ್ ಕರ್ನಾಟಕವನ್ನು ಕುರಿತು ವಿಚಾರಿಸುವಾ. ಈ ಬ್ರಿಟೀಶ್ ಕರ್ನಾಟಕವಾದರೂ, ಒಂದೇ ಇಲಾಖೆಗೆ ಸೇರಿರುವದಿಲ್ಲ. ಇದ ರಲ್ಲಿ ೧ ಮುಂಬಯಿ ಕರ್ನಾಟಕ, ೨ ಮದ್ರಾಸ ಕರ್ನಾಟಕ, ೩ ಕೊಡಗು ಎಂದು ೩ ಭಾಗಗಳಿರುತ್ತವೆ. ಮುಂಬಯಿ ಕರ್ನಾಟಕದಲ್ಲಿ ಬೆಳಗಾಂವಿ, ಧಾರವಾಡ, ವಿಜಾಪೂರ, ಕಾರವಾರವೆಂಬ ನಾಲ್ಕು ಜಿಲ್ಹೆಗಳೂ, ಸೊಲ್ಲಾಪೂರ ಜಿಲ್ಹೆಯ ಕೆಲವು ಭಾಗವೂ ಬರುತ್ತವೆ. ಇವುಗಳ ಆಢಳಿತೆಯು ಮುಂಬಯಿ ಸರಕಾರಕ್ಕೆ ಒಳಪಟ್ಟಿರುತ್ತದೆ. ಮದ್ರಾಸ ಕರ್ನಾಟಕದಲ್ಲಿ ಬಳ್ಳಾರಿ, ಮಂಗ ಳೂರು, ನೀಲಗಿರಿಯೆಂಬ ಮೂರು ಪೂರ್ಣ ಜಿಲ್ಹೆಗಳೂ ಹಾಗೂ ಅನಂತಪೂರ ಜಿಲ್ಹೆಯ ಕ್ಷಿ ಭಾಗ, ಸೇಲಮ್ ಜಿಲ್ಹೆಯ ಮೂರನೆಯ ಪಾಲು, ಕೋಯಿಮು ತ್ತೂರ ಜಿಲ್ಹೆಯ ಮೂರನೆಯ ಪಾಲು, ಚಿತ್ತೂರ, ಉತ್ತರ ಅರ್ಕಾಡು, ಕರ್ನೂಲ, ಮಲಿಯಾಳ ಜಿಲ್ಹೆಗಳ ಕೆಲವು ತಾಲೂಕಗಳೂ, ತಾಲೂಕಿನ ಭಾಗಗಳೂ, ಇಷ್ಟೆಲ್ಲ ಸಮಾವೇಶವಾಗುತ್ತವೆ. ಒಟ್ಟಿಗೆ ಮದ್ರಾಸ ಇಲಾಖೆಯಲ್ಲಿ ಕರ್ನಾಟಕವು ತೀರ ಭಿನ್ನವಿಚ್ಛಿನ್ನವಾಗಿದೆಯೆಂದು ಹೇಳಬಹುದು. ಈ ಭಿನ್ನವಿಚ್ಛಿನ್ನವಾದ ಭಾಗಗ ಳಲ್ಲಿ ತೆಲಗರೂ ತಮಿಳರೂ ಬಹುಸಂಖ್ಯಾಕರಾಗಿರುವದರಿಂದ ಕನ್ನಡಿಗರು ಹೇಳ ಹೆಸರಿಲ್ಲದಂತೆ ಕುಳಿತುಬಿಟ್ಟಿದ್ದಾರೆ. ಮುಂಬಯಿ ಇಲಾಖೆಯಲ್ಲಿ ಸೊಲ್ಲಾಪೂರ ಜಿಲ್ಹೆ ಯಲ್ಲಿ ಸೇರಿದ ಕನ್ನಡಿಗರು ಕರ್ನಾಟಕವನ್ನು ತೀರ ಮರೆತುಬಿಟ್ಟಿರುತ್ತಾರೆ. ಇನ್ನು ಕೊಡಗವು ಒಂದೇ ಬೇರೆಯಾಗಿದ್ದು, ಒಬ್ಬ ಚೀಫ್ ಕಮೀಶನರರ ವಶದಲ್ಲಿರು ತ್ತದೆ. ಮೈಸೂರಿನ ರೆಸಿಡೆಂಟರೇ ಕೊಡಗದ ಚೀಫ್ ಕಮೀಶನರರಾಗಿರುತ್ತಾರೆ. ಇದು ಬ್ರಿಟೀಶ್‌ಕರ್ನಾಟಕದ ಸ್ಥಿತಿಯಾಯಿತು. ಇನ್ನು ಸಂಸ್ಥಾನಗಳ ಕರ್ನಾಟ ಕವನ್ನು ಕುರಿತು ವಿಚಾರಿಸಿದರೆ, ಮೈಸೂರಿನ ಹೊರ್ತು ಉಳಿದ ಸಂಸ್ಥಾನಗಳ ಕರ್ನಾಟಕದ ಸ್ಥಿತಿಯು ಶೋಚನೀಯವೆಂದು ಹೇಳಬೇಕಾಗುತ್ತದೆ. ಇವುಗಳಲ್ಲಿ ೧ ಮೈಸೂರು, ೨ ನಿಜಾಮನ ಕರ್ನಾಟಕ, ಇವೆರಡು ಕರ್ನಾಟಕದ ದೊಡ್ಡ

ಭಾಗವನ್ನು ವ್ಯಾಪಿಸಿರುತ್ತವೆ. ಉಳಿದ ಕರ್ನಾಟಕವು ೧ ಕೊಲ್ಹಾಪುರದ ಸ್ವಲ್ಪ ಭಾಗ, ಸಾಂಗಲಿ ಸಂಸ್ಥಾನದ ಭಾಗ, ೩ ಮಿರಜಿ, ೪ ಜಮಖಂಡಿ, ೫ ರಾಮದುರ್ಗ, ೬ ಮುಧೋಳ, ೭ ಅಕ್ಕಲಕೋಟ, ೮ ಕುರುಂದವಾಡ, ೯ ಔಂಧದ ಭಾಗ, ೧೦ ಸವಣೂರ, ೧೧ ಸೊಂಡೂರ (ಮದ್ರಾಸ ಇಲಾಖೆ) ಈ ಸಣ್ಣ ದೊಡ್ಡ ಸಂಸ್ಥಾನಗಳಲ್ಲಿ ಹಂಚಲ್ಪಟ್ಟಿದೆ. ಇವುಗಳ ವಿಸ್ತಾರ ಹಾಗೂ ಜನಸಂಖ್ಯೆಯನ್ನು ೬ನೆಯ ಪ್ರಕರಣದಲ್ಲಿ ನೋಡಿರಿ. ಮೈಸೂರಲ್ಲಿ ಮಾತ್ರ ರಾಜಪ್ರಜೆಗಳ ಭಾಷೆಯು ಒಂದೇಯಾಗಿರುವದರಿಂದ ಕನ್ನಡವು ಅಲ್ಲಿ ದೇದೀಪ್ಯಮಾನವಾಗಿ ಕಂಗೊಳಿಸುತ್ತದೆ. ಉಳಿದ ಸಂಸ್ಥಾನಗಳು (ಸೊಂಡೂರದ ಹೊರ್ತು) ಪರಭಾಷೆಯುವರ ವಶದಲ್ಲಿದ್ದದರಿಂದ ಕನ್ನಡ ಭಾಷೆಗೂ ಮತ್ತು ಕನ್ನಡ ಜನರಿಗೂ ಕಳೆಯಿಲ್ಲದಿರುವದು ಸ್ವಾಭಾವಿಕವಾಗಿದೆ. ಮರಾಟಿಗರ ವಶದಲ್ಲಿದ್ದ ಸಂಸ್ಥಾನಗಳಲ್ಲಿ ಕೆಲವು, ಕನ್ನಡಕ್ಕೆ ಯಾವ ತರದ ಆಸ್ಪದವನ್ನು ಕೊಟ್ಟಿಲ್ಲಾದ್ದರಿಂದ ಗತ್ಯಂತರವಿಲ್ಲದೆ ಕನ್ನಡಿಗರು ಮರಾಟಿಯನ್ನು ಕಲೆಯಬೇಕಾಗಿದೆ. ಇದಂತೂ ಶೋಚನೀಯವೇ ಸರಿ.

೩. **ಸದ್ಯಸ್ಥಿತಿ:**—ಕರ್ನಾಟಕದ ನಿಸ್ತೇಜವಾದ ಸದ್ಯದ ಸ್ಥಿತಿಗೆ ಸ್ವತಂತ್ರವಾದ ಕರ್ನಾಟಕಪ್ರಾಂತವಿಲ್ಲದಿರುವದು ಕಾರಣವಾಗಿದೆ. ಸ್ವತಂತ್ರವಾದ ಕರ್ನಾಟಕಪ್ರಾಂತವು ಇದುವರೆಗೆ ಪ್ರಾಪ್ತವಾಗದಿರುವದಕ್ಕೆ ನಮ್ಮ ಅಭಿಮಾನಶೂನ್ಯತೆಯು ಕಾರಣವಾಗಿದೆ. “ ನ ಭೂತೋ ನ ಭವಿಷ್ಯತಿ ” ಎನಿಸುವಂತೆ ಪ್ರಚಂಡವಾದ ಚಳವಳಿಯನ್ನು ಎಬ್ಬಿಸಿ ಸ್ವತಂತ್ರ ಪ್ರಾಂತವನ್ನು ಪಡೆದವರ ಸಾಹಸಕ್ಕೂ ಕನ್ನಡಿಗರ ಸಾಹಸಕ್ಕೂ ಅಭ್ಯಂತರವಿದೆ. ಕರ್ನಾಟಕಪ್ರಾಂತದ ಚಳವಳಿಯನ್ನು ಎಬ್ಬಿಸಲಿಕ್ಕೆ ಕರ್ನಾಟಕ ಪ್ರಾಂತಿಕ ಕಾಂಗ್ರೇಸ್‌ಕಮಿಟಿಗೆ ದುಸ್ತರವಾಗಿದೆ. ಕರ್ನಾಟಕದ ಚಳವಳಿಯೆಂದರೆ ತಲೆಶೂಲಿಯೇಳುವ ಮರಾಟಿಗರ ಪ್ರಾಬಲ್ಯವು ಎಲ್ಲಿ ಹೆಚ್ಚಿದೆಯೋ ಅಲ್ಲಿ ಕರ್ನಾಟಕಪ್ರಾಂತವು ತಲೆಯತ್ತುವ ಬಗೆ ಹೇಗೆ? ಈಗ ಕೆಲವರು ಕನ್ನಡಿಗರಿದ್ದು ಅಸಹಕಾರಿಗಳಿದ್ದದರಿಂದ ಈ ಪ್ರಶ್ನದ ಬಗ್ಗೆ ಸರಕಾರದ ಕೂಡ ಹೋರಾಡಲಿಕ್ಕೆ ಇಚ್ಛಿಸುವದಿಲ್ಲ. ಇನ್ನು ಸ್ವರಾಜ್ಯಪಕ್ಷದವರಿಂದ ಈ ಕಾರ್ಯವನ್ನು ಸಾಧಿಸಬೇಕೆಂದರೆ ಅವರು ಪುಣೆಯ ಮರಾಟಿಗರ ದಾಕ್ಷಿಣ್ಯಕ್ಕೆ ಏನುಮಾಡುವರೆಂಬ ಸಂದೇಹವಿದೆ. ಅಂತರಂಗದಲ್ಲಿ ಸಹಾನುಭೂತಿಯಿದ್ದರೂ ಪುಣೆಯುವರ ದಾಕ್ಷಿಣ್ಯಕ್ಕೆ ಒಳಗಾಗಿ ಬಹಿರಂಗದಲ್ಲಿ ಕಾರ್ಯತತ್ಪರ

ಶಾಗುವಂತಿಲ್ಲ. ಇನ್ನುಳಿದ ಪಕ್ಷವೆಂದರೆ ಬ್ರಾಹ್ಮಣೇತರಪಕ್ಷವು. ಈ ಪಕ್ಷವು ಈ ಪ್ರಶ್ನದ ಬಗ್ಗೆ ಸಹಾನುಭೂತಿಯನ್ನು ತೋರಿಸುತ್ತದೆ. ಆದರೆ ಇದಕ್ಕೆ ಸಾಕಷ್ಟು ಬೆಂಬಲವಿಲ್ಲದ್ದರಿಂದ ನಿರುಪಾಯವಾಗಿದೆ. ಒಟ್ಟಿಗೆ ಕಾಂಗ್ರೆಸ್‌ಕಮಿಟಿಯು ಅಸಹಕಾರದ ತತ್ವದ ಮೂಲಕ ಈ ಪ್ರಶ್ನವನ್ನು ಎತ್ತಲಿಚ್ಛಿಸುವದಿಲ್ಲ ಸ್ವರಾಜ್ಯಪಕ್ಷವು ಮರಾಟಿಗರ ದಾಕ್ಷಿಣ್ಯಕ್ಕೊಳಗಾಗಿ ಈ ಪ್ರಶ್ನವನ್ನೆತ್ತುವದು ಸಂದೇಹ. ಬ್ರಾಹ್ಮಣೇತರ ಪಕ್ಷಕ್ಕೆ ಬೆಂಬಲವಿಲ್ಲ. ಹೀಗೆ ೩ ಪಕ್ಷಗಳು ಇದುವರೆಗೆ ಕೈಜಾಡಿಸಿವೆ. ಈ ಪ್ರಸಂಗದಲ್ಲಿ ಒಂದು ಮಾತನ್ನು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಅದೇನಂದರೆ ಈಪ್ರಾಂತಿಕ ಪ್ರಶ್ನವು ಯಾವ ಪಕ್ಷದ ಪ್ರಶ್ನವಾಗಿಲ್ಲ. ಎಲ್ಲ ಪಕ್ಷದ ಮುಂದಾಳುಗಳು ಇದಕ್ಕೆ ಶಕ್ಯವಿದ್ದ ರೀತಿಯಿಂದ ಕೈಹಚ್ಚಲು ಸಿದ್ಧರಾದರೆ ಇಂದಿಲ್ಲ ನಾಳೆ ನಾವು ಕರ್ನಾಟಕ ಪ್ರಾಂತವನ್ನು ಪಡೆಯಬಹುದು. ತೆಲಗರ ಹಾಗು ಉರಿಯಾ ಜನರನ್ನು ನೋಡಿರಿ! ಇದುವರೆಗೆ ಆದದ್ದು ಆಗಿಹೋಯಿತು. ಇನ್ನು ಮುಂದೆ ಐಕ್ಯದ ಸುಳಿಗಾಳಿಯು ಸುಳಿಯತೊಡಗಿದೆ. ಈ ಎಲ್ಲ ಪಕ್ಷದವರಿಗೂ ಐಕ್ಯವು ಬೇಕಾಗಿದೆ. ಹೀಗೆ ಐಕ್ಯವಾಗಿ ಯಾವದೊಂದು ಸರ್ವಸಮ್ಮತವಾದ ಕಾರ್ಯಕ್ರಮವು ಗೊತ್ತಾದಾಗ, ಕನ್ನಡಿಗರು ಈ ಮಹತ್ವದ ಪ್ರಶ್ನವನ್ನು ಮುಂದಾಳುಗಳ ಕೊರಳಿಗೆ ಹಾಕದಿರುವದು ಆತ್ಮಘಾತಕತನದ ಲಕ್ಷಣವಾಗಲಿಕ್ಕಿಲ್ಲವೇ! ಇಲ್ಲಿ ಮತ್ತೊಂದು ಮಾತಿನ ಸ್ಪಷ್ಟೀಕರಣ ಮಾಡುವದು ಅವಶ್ಯವಾಗಿದೆ. ನಾವು ಹಗಲೆಲ್ಲ ಮರಾಟಿಗರೆಂದು ಉಪಯೋಗಿಸುವ ಶಬ್ದವು ನಾಳೆ ಭಾಷೆಯಂತೆ ಪ್ರಾಂತವಿಭಾಗವಾದಾಗ ಯಾರ ಪ್ರವೇಶವು ಮಹಾರಾಷ್ಟ್ರದಲ್ಲಿಯಾಗುತ್ತದೋ ಅವರಿಗೆ ಮಾತ್ರ ಸಂಬಂಧಿಸುತ್ತದೆ. ಬೆಳಗಾಂವಿಯೊಳಗಿನ ಮರಾಟಿಗರು ಎಷ್ಟೇ ಮರಾಟಿಯ ಭಕ್ತರಿದ್ದರೂ ಅವರನ್ನು ನಾವು ಕನ್ನಡಿಗರೆಂದೇ ಕರೆಯತಕ್ಕವರು. ಯಾಕಂದರೆ ಅವರ ಆಸ್ತಿಯೆಲ್ಲ ಕರ್ನಾಟಕದಲ್ಲಿದ್ದು, ನಾಳೆ ಕರ್ನಾಟಕ ಪ್ರಾಂತವು ಬೇರೆಯಾದ ಕೂಡಲೆ ಇವರು ತಮ್ಮ ಹೊಲಮನೆಗಳನ್ನು ಬಿಟ್ಟುಕೊಟ್ಟು ಮಹಾರಾಷ್ಟ್ರವನ್ನು ಸೇರುತ್ತಾರೆಯೋ? ಇಲ್ಲ. ಇವರ ಹೊಲಮನೆಗಳೆಲ್ಲ ಕರ್ನಾಟಕದಲ್ಲಿ; ಇವರ ಆಹಾರವಿಹಾರಗಳೆಲ್ಲ ಕರ್ನಾಟಕದಲ್ಲಿ; ಇವರ ಸಂಗಡಿಗರೆಲ್ಲ ಕರ್ನಾಟಕದಲ್ಲಿ; ಹೀಗಿರಲು ಇವರು ಕರ್ನಾಟಕವನ್ನು ತಿರಸ್ಕರಿಸುವದು ಸರಿಯಲ್ಲ. ಸಾಯುವವರೆಗೆ ಇವರಿಗೂ ಕರ್ನಾಟಕದವರಿಗೂ ವ್ಯವಹಾರವು ತಪ್ಪುವದಿಲ್ಲಾದ್ದರಿಂದ ಕರ್ನಾಟಕದುನ್ನತಿಯ ವಿಷಯದಲ್ಲಿ

ಅಡ್ಡ ಬರದೆ ತಟಸ್ಥರಾಗಿರುವದು ಲೇಸು. ಇದೇ ಅಭಿಪ್ರಾಯವನ್ನು ಪೂರ್ವಭಾಗದಲ್ಲಿ ವ್ಯಾಪಿಸಿರುವ ತೆಲಗರಿಗೂ, ದಕ್ಷಿಣದ ತಮಿಳರಿಗೂ, ಪಶ್ಚಿಮದ ಮಲಿಯಾಳರಿಗೂ ವಿನಯಪೂರ್ವಕವಾಗಿ ತಿಳಿಸುತ್ತೇನೆ. ಇಲ್ಲಿಯವರೆಗೆ ಕರ್ನಾಟಕದ ಔದಾಸೀನ್ಯವನ್ನೂ, ಅದರ ಕಾರಣಗಳನ್ನೂ, ದಿಶಂಬರದಲ್ಲಿ ಉತ್ಪನ್ನವಾಗುವ ಐಕ್ಯದ ಆಶಾಂಕುರವನ್ನೂ, ಸಂಕ್ಷೇಪವಾಗಿ ಚಿತ್ರಿಸಿದಂತಾಯಿತು. ನಮ್ಮ ಆಶಾಂಕುರವು ನಿಜವಾಗಿ ಬೆಳೆದು ಹೆಮ್ಮರವಾಗಿ ಕನ್ನಡಿಗರಿಗೆ ಇನಿವಣ್ಣಗಳನ್ನು ಉಣ್ಣಿಸಲೆಂದು ಹಂಬಲಿಸುವೆನು.

**೪. ಒತ್ತಾಯದ ಪ್ರಾಥಮಿಕಶಿಕ್ಷಣ:**— ಸ್ವತಂತ್ರ ಕರ್ನಾಟಕ ಪ್ರಾಂತವು ಇಲ್ಲದಿರುವಾಗ ಸರಕಾರದವರು ಕೊಡುವ ಅಲ್ಪ ಸ್ವಲ್ಪ ಲಾಭಗಳಾದರೂ ಹೇಗೆ ವಿಷಮವಾಗಿ ಪರಿಣಮಿಸುತ್ತವೆಂಬದನ್ನು ಪರೀಕ್ಷಿಸಬೇಕಾದರೆ ಒತ್ತಾಯದ ಪ್ರಾಥಮಿಕಶಿಕ್ಷಣವನ್ನು ನೋಡಬೇಕು. ಒತ್ತಾಯದ ಪ್ರಾಥಮಿಕ ಶಿಕ್ಷಣವು ಅವಶ್ಯವಾಗಿ ಬೇಕೆಂಬದನ್ನು ಎಲ್ಲರೂ ಬಲ್ಲರು. ಕರ್ನಾಟಕ ಪ್ರಾಂತವನ್ನು ಸ್ವತಂತ್ರಪಡಿಸಿ ಒತ್ತಾಯದ ಶಿಕ್ಷಣವನ್ನು ಪ್ರಾರಂಭಿಸುವದು ಲೇಸಾದೀತೋ, ಅಥವಾ ಈಗಿನ ಸ್ಥಿತಿಯಲ್ಲಿಯೇ ಒತ್ತಾಯದ ಶಿಕ್ಷಣವನ್ನು ಪ್ರಾರಂಭಿಸುವದು ಲೇಸಾದೀತೋ, ಎಂಬದನ್ನು ಬಹುಜನರು ವಿಚಾರಿಸುವದಿಲ್ಲ. ಕರ್ನಾಟಕ ಪ್ರಾಂತವಾದನಂತರ ಒತ್ತಾಯದ ಶಿಕ್ಷಣವು ಪ್ರಾರಂಭವಾದರೆ ಒಳ್ಳೆಯದಾಗುವದೆಂದು ನಮ್ಮ ಅಭಿಪ್ರಾಯವು. ಯಾಕಂದರೆ ಕರ್ನಾಟಕಪ್ರಾಂತವೂ, ಕರ್ನಾಟಕ ವಿಶ್ವವಿದ್ಯಾಲಯವೂ, ದೊರೆತಾಗ ಸ್ವಾಭಿಮಾನಿಯಾದ ಕನ್ನಡಿಗನಂತೂ ಇರಲಿ, ಎಂಥ ನಿರಭಿಮಾನಿಯೂ ಸಹ ಚೇತರಿಸಬಹುದು. ಪರಭಾಷೆಯ ಮೋಹದಲ್ಲಿ ಸಿಕ್ಕಿಕೊಂಡಿರುವ ಕನ್ನಡಿಗರು ಕನ್ನಡವನ್ನು ತಿರಸ್ಕರಿಸದೆ ಕಲಿಯಲಿಚ್ಛಿಸುವರು; ಪ್ರಾಂತದ ಭಾಷೆಯಾದ ಕನ್ನಡವನ್ನು ಕಲಿಯುವದು ಅವಶ್ಯವೆಂದು ತಿಳಿದು ಬಂದಾಗ ಕನ್ನಡಭಾಷೆಯನ್ನು ಒತ್ತಾಯಪಡಿಸಿದರೆ, ಮರಾಟಿಯಕಡೆಗೂ ತೆಲಗಿನ ಕಡೆಗೂ ಮುಖತಿರುವಿದ ನಮ್ಮ ಬಾಂಧವರಿಗೆ ಮಾತೃಭಾಷಾಮೃತವನ್ನು ಪಾನ ಮಾಡಿಸಿದ ಶ್ರೇಯಸ್ಸು ಬರುವದು. ಈಗಿನ ಸ್ಥಿತಿಯಲ್ಲಿ ಒತ್ತಾಯದ ಶಿಕ್ಷಣವು ಪ್ರಾರಂಭವಾದರೆ ಮರಾಟಿಯ ಅಥವಾ ತೆಲಗಿನ ಮಬ್ಬಿಗೆ ಬಿದ್ದ ನಮ್ಮ ಬಾಂಧವರು ಮಾತೃಭಾಷೆಯನ್ನು ಮರೆತುಬಿಟ್ಟು, ತಮ್ಮಲ್ಲಿ ಮರಾಟಿ ಅಥವಾ ತೆಲಗು

ಶಾಲೆಯನ್ನೇ ಬೇಡುವರು. ಇದು ಅವರ ಮಬ್ಬಿನ ಪರಿಣಾಮವು. ಈ ಮಬ್ಬಿನ ಸ್ಥಿತಿಯಲ್ಲಿ ಒತ್ತಾಯವೆಂದರೆ ನಮ್ಮ ಬಾಂಧವರಲ್ಲಿ ಕೆಲವರಿಗೆ ಒತ್ತಾಯದ ಪರ ಭಾಷಾಶಿಕ್ಷಣವನ್ನು ಕೊಟ್ಟ ಪಾಪಕ್ಕೆ ಗುರಿಯಾಗಬೇಕಾಗುವದು. ಇದರಿಂದ ಕಂಡುಬರುವದೇನಂದರೆ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಪಡೆಯುವದರ ಮೊದಲು ಕರ್ನಾಟಕಪ್ರಾಂತವನ್ನು ಪಡೆಯಲೇಬೇಕು. ಒತ್ತಾಯದ ಪ್ರಾಥಮಿಕ ಶಿಕ್ಷಣದ ಪಕ್ಷಪಾತಿಗಳು ಇತ್ತಕಡೆಗೆ ಗಮನಕೊಡಬೇಕೆಂದು ಸೂಚಿಸುವೆನು.

೫. **ರಾಮಬಾಣೋಪಾಯ**:—ಹೀಗೆ ಎಲ್ಲ ಬಗೆಯಿಂದ ವಿಚಾರಿಸಲು ಕರ್ನಾಟಕದ ಉನ್ನತಿಗೆ ಕರ್ನಾಟಕಪ್ರಾಂತವನ್ನು ಪಡೆಯುವದು ಅವಶ್ಯವಾದುದೆಂಬ ಮಾತು ವಾಚಕರಿಗೆ ಮನವರಿಕೆಯಾಗಬಹುದು. ಇದು ಒಂದು ಪಕ್ಷಕ್ಕೆ ಅಥವಾ ಜಾತಿಗೆ ಸಂಬಂಧಿಸಿದ ಪ್ರಶ್ನವಲ್ಲ. ಎಲ್ಲ ಪಂಗಡಗಳಿಗೂ ಇದು ಇಷ್ಟವಾದ ಸಂಗತಿಯು. ಹೀಗಿರಲು ಎಲ್ಲ ಪಂಗಡಗಳ ಮುಂದಾಳುಗಳು ಈ ಪ್ರಶ್ನವನ್ನು ವಹಿಸಿಕೊಂಡು ತನುಮನಧನಗಳಿಂದ ಪ್ರಯತ್ನಿಸದಿದ್ದರೆ ಸಾಮಾನ್ಯ ಜನರಾದ ನಾವು ಏನುಮಾಡೋಣ.? ಎಂದು ಜನಸಮೂಹವು ನಮ್ಮನ್ನು ಕೇಳಬಹುದು. ಇದಕ್ಕೊಂದು ಉತ್ತರವುಂಟು. ಅದೇ ಈ ಪ್ರಶ್ನಕ್ಕೆ ತಕ್ಕಚಾಲನೆಯನ್ನು ಕೊಡುವ ರಾಮಬಾಣೋಪಾಯವು. ಅದೇನಂದರೆ ಹಿಂದಾಳುಗಳ ಬೆಂಬಲವಿಲ್ಲದೆ ಮುಂದಾಳುಗಳ ಆಟವು ಸಾಗುವದಿಲ್ಲ. ಈ ಹಿಂದಾಳುಗಳಾದ ಸಾಮಾನ್ಯಜನರ ಕಡೆಗೆ ಮುಂದಾಳುಗಳು ಲೋಕಲ್‌ಬೋರ್ಡ, ಮ್ಯುನಸಿಪಾಲ್ಟಿ, ಕಾಯಿದೆಕೌನ್ಸಿಲ್‌ಗಳಿಗಾಗಿ ಮತಗಳನ್ನು ಬೇಡಲಿಕ್ಕೆ ಬರುವರು. ಇಲ್ಲವೆ ಯಾವದೊಂದು ರಾಷ್ಟ್ರಕಾರ್ಯಕ್ಕಾಗಲಿ, ಅಥವಾ ಸಾಮಾಜಿಕ ಕಾರ್ಯಕ್ಕಾಗಲಿ, ವರ್ಗಣಿಯನ್ನು ಕೂಡಿಸಲಿಕ್ಕೆ ಬರಬಹುದು. ಈ ವೇಳೆಯಲ್ಲಿ ಪ್ರತಿಯೊಬ್ಬ ಕನ್ನಡಿಗನು "ಕರ್ನಾಟಕ ಪ್ರಾಂತಿಕ ಪ್ರಶ್ನವನ್ನು ವಹಿಸಿಕೊಂಡು ಅದಕ್ಕೆ ತಕ್ಕ ಚಾಲನೆಯನ್ನು ಕೊಡಲಿಕ್ಕೆ ನೀವು ಪರಾಕಾಷ್ಟದ ಪ್ರಯತ್ನ ಮಾಡತಕ್ಕದ್ದು. ಇಲ್ಲದಿದ್ದರೆ ನಿಮಗೆ ಯಾವ ಸಹಾಯವೂ ನಮ್ಮಿಂದ ಸಿಗಲಾರದು." ಎಂದು ಖಂಡಿತವಾಗಿ ಉತ್ತರ ಕೊಡಲಿಕ್ಕೆ ಕಲಿತರೆ ಸಾಕು! ಮುಂದಾಳುಗಳ ಕಣ್ಣುಗಳು ತೆರೆದವೆಂದೇ ತಿಳಿಯತಕ್ಕದ್ದು. ಲೋಕಸಂಗ್ರಹಕ್ಕಾಗಿ ಪ್ರತಿಯೊಬ್ಬ ಮುಂದಾಳು ಪ್ರಯತ್ನಮಾಡುತ್ತಾನೆ. ಆದ್ದರಿಂದ ಲೋಕಮತವನ್ನು ಮೀರುವದು

ಮುಂದಾಳುಗಳಿಂದಾಗದೆ ಅವರು ಈ ಪಶ್ನವನ್ನು ಕೈಕೊಳ್ಳುವರು. ಈ ಪ್ರಕಾರ ಮುಂದಾಳುಗಳ ಒತ್ತಾಯವು ಒಮ್ಮೆ ಪ್ರಾರಂಭವಾದರೆ ಸರಕಾರವು ಉದಾಸೀನ ವಾಗಿ ಸುಮ್ಮನೆ ಕೂಡ್ರಲಾರದು. ಆದ್ದರಿಂದ ಬಿಕ್ಕಟ್ಟಾದ ಕರ್ನಾಟಕ ಪ್ರಾಂತಿಕ ಪ್ರಶ್ನವನ್ನು ಬಿಡಿಸುವ ರಾಮಬಾಣೋಪಾಯವು ಕನ್ನಡದಜನಸಮೂಹದ ಕೈಯ್ಯಲ್ಲಿಯೇ ಇರುತ್ತದೆಂದು ನಿರ್ವಿವಾದವಾಗಿ ಹೇಳಬಹುದು. ಇನ್ನು ಮೇಲೆ ಯಾವನೊಬ್ಬ ಮುಂದಾಳು ನಿಮ್ಮ ಕಡೆಗೆ ಬಂದಾಗ, ಮೇಲೆ ಕಾಣಿಸಿದ ಒಂದೇ ಒಂದು ಪ್ರಶ್ನವನ್ನು ಕೇಳಲಿಕ್ಕೆ ತಪ್ಪಬೇಡಿರಿ.

೬. **ಕನ್ನಡಿಗರಲ್ಲಿ ಒಕ್ಕಟ್ಟು**:—ಮೇಲೆ ಕಾಣಿಸಿದ ಪ್ರಯೋಗವನ್ನು ಆಚರಿಸುವಾಗ ಕನ್ನಡಿಗರಲ್ಲಿ ಒಕ್ಕಟ್ಟು ಆವಶ್ಯವಾಗಿಬೇಕು. ಮತಭೇದದಿಂದಾ ಗಲಿ, ಪಂಗಡದಿಂದಾಗಲಿ, ಯಾವ ಕಾರ್ಯವಾಗದು. ಈ ವಿಷಯದಲ್ಲಿ ಎಲ್ಲ ಕನ್ನಡಿಗರದೊಂದೇ ಪಂಗಡವಾಗತಕ್ಕದ್ದು. ಅವರ ಧ್ಯೇಯವು ಒಂದೇ! ಅದಕ್ಕೆ ಉಪಾಯವು ಒಂದೇ!! ಎಂದು ಒಮ್ಮೆ ನೀವು ನಿಶ್ಚಯಿಸಿದರೆ, ನಿಮ್ಮ ನಿಶ್ಚಿತಮತ ವನ್ನುಲ್ಲಂಘಿಸುವ ಸಾಮರ್ಥ್ಯವು ಆದಾರಲ್ಲಿದೆ? ಶ್ರೀ. ವಿದ್ಯಾರಣ್ಯ ಸ್ವಾಮಿಗಳು ವಿಜಯನಗರ ರಾಜ್ಯದ ಸ್ಥಾಪನೆಯನ್ನು ಮಾಡುವ ಕಾಲದಲ್ಲಿ ಕನ್ನಡಿಗರಿಗೆ ಮಾಡಿದ ಉಪದೇಶವನ್ನು ಇದರಡಿಯಲ್ಲಿ ಉದ್ಧರಿಸುವೆನು. “ ನಮ್ಮೊಳಗೆ ಎಷ್ಟೋ ಒಳಜಗಳಗಳಿದ್ದರೂ, ಹೊರಜಗಳಕ್ಕೆ ಸಿದ್ಧರಾದಾಗ ಒಳಜಗಳನ್ನು ಮರೆಯು ತಕ್ಕದ್ದು. ” ದುರ್ಯೋಧನನು ಗಂಧರ್ವನ ಕೈಯ್ಯಲ್ಲಿ ಸಿಕ್ಕಾಗ ಆತನನ್ನು ಬಿಡಿಸಿ ಕೊಂಡು ಬರಲಿಕ್ಕೆ ಅರ್ಜುನನು ಒಲ್ಲೆನ್ನುತ್ತಿರಲು, ಧರ್ಮರಾಜನು ಮಾಡಿದ ಉಪದೇಶದ ಇಂಗಿತವಾದರೂ ಇದೇ ಇರುತ್ತದೆ. ಆದ್ದರಿಂದ ಕನ್ನಡಿಗರೇ, ಒಕ್ಕಟ್ಟು! ಒಕ್ಕಟ್ಟು!! ಒಕ್ಕಟ್ಟು!!!

---

# ಐದನೆಯ ಪ್ರಕರಣ.

## ಸದ್ಯಸ್ಥಿತಿಯ ದುಷ್ಪರಿಣಾಮಗಳು.

೧ ರಾಷ್ಟ್ರೀಯತ್ವದ ಲೋಪವು, ೨ ಕೇಂದ್ರಸ್ಥಳದ ಅಭಾವ, ೩ ಕರ್ನಾಟಕದ ತುಂಡಗಳ ತುಟ್ಟತುದಿಗೆ, ೪ ಸಹಕಾರತ್ವಕ್ಕೆ ಸಾಧನಗಳಿಲ್ಲ, ೫ ಎಲ್ಲಿಯೂ ಕರ್ನಾಟಕಕ್ಕೆ ಬಹುಮತವಿಲ್ಲ, ೬ ಭಾಷಾವಿಷಯಕ ಹಾನಿ, ೭ ಪರಭಾಷೆಯ ಅಧಿಕಾರಿಗಳು, ೮ ವಿಶ್ವವಿದ್ಯಾಲಯದ ಸ್ಥಿತಿ, ೯ ಅಜಾಗ್ರತೆಯ ಅವಶೇಷಗಳು, ೧೦ ಸಾಂಪತ್ತಿಕ ದುರ್ದೆಶೆ

**೧. ರಾಷ್ಟ್ರೀಯತ್ವದ ಲೋಪವು:**—ಕುರಿಗಳ ಹಿಂಡಿನಲ್ಲಿ ಬೆಳೆದ ಸಿಂಹದ ಮರಿಯು, ಸ್ವತಃ ತಾನು ಸಿಂಹವೆಂಬುವದನ್ನು ಅರಿಯದಂತೆ, ಅಭಿಮಾನವಿಲ್ಲದ ಮನುಷ್ಯನು ಜನರ ತಿರಸ್ಕಾರಗಳನ್ನೆಲ್ಲ ನಂಬಿ, ಸ್ವತಃ ತನ್ನ ಯೋಗ್ಯತೆಯನ್ನು ತಿಳಿಯದವನಾಗುತ್ತಾನೆ. ಆದ್ದರಿಂದ ರಾಷ್ಟ್ರೀಯ ಭಾವನೆಗಳಿಗೆ ಅಭಿಮಾನವೇ ಮೂಲವಾಗಿರುತ್ತದೆ. ತಾನು ಯಾರು? ತನ್ನ ನಾಡು ಯಾವುದು? ತನ್ನ ಬಾಂಧವರಾರು? ತನ್ನ ನಾಡಿನ ಹಾಗೂ ನುಡಿಯ ಬಗ್ಗೆ ತನ್ನ ಕರ್ತವ್ಯವೇನು? ಜೀವವು ಕ್ಷಣಭಂಗುರವಾಗಿರುವದರಿಂದ ಆಚಂದ್ರಾರ್ಕ ಕೀರ್ತಿಶೇಷನಾಗಬೇಕಾದರೆ ಯಾವ ಅಸದೃಶವಾದ ಕಾರ್ಯವನ್ನು ಜರಗಿಸತಕ್ಕದ್ದು? ಕರ್ನಾಟಕದ ಈ ದುರ್ದೆಶೆಯ ಕಾಲದಲ್ಲಿ ಭೂಮಿಯ ಮೇಲೆ ಅವತರಿಸಿಬಂದ ನಮಗೆ ಏನಾದರೂ ವಿಶಿಷ್ಟವಾದ ಕರ್ತವ್ಯವು ಇರುವದೋ ಹೇಗೆ? ಇವೇ ಮೊದಲಾದ ಪ್ರಶ್ನಗಳನ್ನು ಹಗಲಿರಳು ತನ್ನ ಮನಸ್ಸಿಗೆ ವಿಚಾರಿಸುತ್ತಹೋದರೆ ಒಮ್ಮಿಲ್ಲೊಮ್ಮೆ ಸ್ವಾರ್ಥವನ್ನು ತ್ಯಜಿಸಿ, ದೇಶಕ್ಕಾಗಿ ಆತ್ಮವನ್ನು ಆಹುತಿಗೆಯ್ಯಲು ಪ್ರವೃತ್ತನಾಗುವನು. ಈ ಭಾವನೆಯೇ ರಾಷ್ಟ್ರೀಯ ಭಾವನೆಯು. ಕರ್ನಾಟಕ ಪ್ರಾಂತವು ತುಂಡುತುಂಡಾಗಿ ಹೋಗಿರುವದರಿಂದ, ಯಾವ ಪ್ರಾಂತದಿಂದ ನಮ್ಮ ರಾಷ್ಟ್ರೀಯ ಭಾವನೆಯು ಜಾಗೃತವಾಗತಕ್ಕದ್ದೋ, ಅದೇ ಇಲ್ಲದ್ದರಿಂದ, ಹೊಡೆದತ್ತಹೋಗುವ ಕುರಿಗಳಂತೆ ಕನ್ನಡಿಗರ ಸ್ಥಿತಿಯಾಗಿದೆ. ಸಂಯುಕ್ತ ಕರ್ನಾಟಕಪ್ರಾಂತವು ಅಸ್ತಿತ್ವದಲ್ಲಿ ಬಾರದಿದ್ದರೆ ಈ ಹಾನಿಯು ತುಂಬಿಬರುವ ಆಶೆಯಿಲ್ಲ.

೨. **ಕೇಂದ್ರಸ್ಥಳದ ಅಭಾವ:**—ಕರ್ನಾಟಕಪ್ರಾಂತವೇ ಇಲ್ಲದಿರುವ ದರಿಂದ ಕರ್ನಾಟಕಕ್ಕೆ ಕೇಂದ್ರಸ್ಥಳವಂತೂ ಇಲ್ಲವೇ ಇಲ್ಲ. ಮುಂಬಯಿಕರ್ನಾಟಕಸ್ಥರಿಗೆ ಮುಂಬಯಿಯೂ, ಮದ್ರಾಸಕರ್ನಾಟಕಸ್ಥರಿಗೆ ಮದ್ರಾಸವೂ, ಕೇಂದ್ರಸ್ಥಳಗಳಾಗಿಲ್ಲವೇ? ಎಂದು ಕೆಲವರು ಆಕ್ಷೇಪಿಸಬಹುದು. ಆದರೆ ಇವು ಕನ್ನಡಿಗರ ಕೇಂದ್ರಸ್ಥಳಗಳಾಗುವ ಆಶೆಯಿಲ್ಲ. ಮುಂಬಯಿಯಲ್ಲಿ ಗುಜರಾಥಿ ಹಾಗೂ ಮರಾಟಿಗರ ಪ್ರಾಬಲ್ಯವು ಹೆಚ್ಚಿದ್ದು, ವ್ಯಾಪಾರೋದ್ಯೋಗಗಳು ಅವರ ವಶದಲ್ಲಿಯೇ! ಲೇಖಕರೂ ವಕ್ತಾರರೂ ಅವರೇ!! ಮುಂದಾಳುಗಳೂ ಅವರೇ!!! ಅಲ್ಲಿ ಕನ್ನಡಿಗನಿಗೆ ಸ್ನೇಹಿತನೊಬ್ಬನು ಸಿಗುವದು ದುರ್ಲಭ! ಇದೇ ರೀತಿ ಮದ್ರಾಸದಲ್ಲಿ ತಮಿಳ ತೆಲಗರ ಪ್ರಾಬಲ್ಯವು ಹೆಚ್ಚಿದ್ದರಿಂದ, ಕನ್ನಡಿಗರನ್ನು ಯಾರೂ ಕೇಳುವಂತಿಲ್ಲ. ಇವು ಇಲಾಖೆಯ ಸ್ಥಳಗಳಾಗಿದ್ದರೂ, ದೊಡ್ಡ ಪಟ್ಟಣಗಳಾಗಿದ್ದರೂ, ಕರ್ನಾಟಕದ ಕೇಂದ್ರಸ್ಥಳಗಳಾಗಿಲ್ಲ. ಕೇಂದ್ರಸ್ಥಳವೆಂದರೆ ಅಲ್ಲಿ ಹುಟ್ಟುವ ಹೊಸ ವಿಚಾರ, ಹೊಸ ಸುಧಾರಣೆ, ಹೊಸ ಶೋಧಗಳು ಆ ನಾಡಿಗೆ ಪೋಷಕವಾಗಿದ್ದು ಕ್ಷಿಪ್ರದಲ್ಲಿಯೇ ಅವುಗಳನ್ನು ಆ ನಾಡಿನ ಪ್ರತಿಯೊಂದು ಮೂಲಿಗೆ ಮುಟ್ಟಿಸುವಂತೆ ಎಲ್ಲ ಸೂತ್ರಗಳನ್ನು ಹಿಡಿದ ಮಧ್ಯಸ್ಥಳವಾಗಿರಬೇಕು. ಇಂಥ ಕೇಂದ್ರಸ್ಥಳದ ಕಡೆಗೆ "ಇಂದಿನ ಕಲ್ಯಾಣವಾರ್ತೆ ಯಾವುದು? ನಾಳಿನ ಹಿತದ ಸಂಗತಿ ಯಾವುದು?" ಎಂದು ಜನರು ಟಕ್ಕುಹಚ್ಚಿ ಕುಳಿತಿರುವರು. ಕನ್ನಡಿಗರು ಯಾವ ಕೇಂದ್ರಸ್ಥಳದ ಕಡೆಗೆ ಟಕ್ಕುಹಚ್ಚಿ ಕೂಡ್ರಬೇಕೋ, ಅಂತಹದೊಂದು ಕೇಂದ್ರಸ್ಥಳವು ಅವರಿಗಿಲ್ಲ. ಸ್ವತಂತ್ರ ಕರ್ನಾಟಕ ಪ್ರಾಂತವಾದ ಹೊರತು, ಕರ್ನಾಟಕದ ಯಾವ ಪಟ್ಟಣಕ್ಕೂ ಈ ಕೇಂದ್ರಸ್ಥಳದ ಸ್ವರೂಪವು ಬರುವಂತಿಲ್ಲ. ಈ ಕೇಂದ್ರಸ್ಥಳದ ಅಭಾವದಿಂದ ಕನ್ನಡಿಗರ ಉನ್ನತಿಯ ಝರಿಯೂ ಅಭಾವವಾಗಿದೆ.

೩. **ಕರ್ನಾಟಕದ ತುಂಡಗಳು ತುಟ್ಟತುದಿಗೆ:**— ಸ್ವತಂತ್ರ ಕರ್ನಾಟಕಪ್ರಾಂತವೂ ಕರ್ನಾಟಕದ ಕೇಂದ್ರಸ್ಥಳವೂ ದೊರೆಯುವವರೆಗೆ ಮುಂಬಯಿ, ಮದ್ರಾಸ ಕೇಂದ್ರಸ್ಥಳಗಳಿಂದ ಕಾರ್ಯವು ಸಾಗುವದಿಲ್ಲವೇ? ಇದಕ್ಕೆ ಇಷ್ಟೊಂದು ಆತುರವೇಕೆ? ಎಂದು ಕೇಳಿದರೆ ದುರ್ದೈವದಿಂದ ಕರ್ನಾಟಕದ ತುಂಡುಗಳು ಪ್ರತಿಯೊಂದು ಇಲಾಖೆಯಲ್ಲಿ ತುಟ್ಟತುದಿಗೆ ಬಿದ್ದಿರುತ್ತವೆಂದು ಹೇಳಬೇಕಾಗುತ್ತದೆ. ಮುಂಬಯಿ ಇಲಾಖೆಯಲ್ಲಿ ಕರ್ನಾಟಕವು ತೀರ ದಕ್ಷಿಣಕ್ಕೆ

ಅದೆ! ಮದ್ರಾಸಕರ್ನಾಟಕವು ಮದ್ರಾಸ ಇಲಾಖೆಯಲ್ಲಿ ತೀರ ಪಶ್ಚಿಮತುದಿಗೆ! ನಿಜಾಮನ ರಾಜ್ಯದ ಕರ್ನಾಟಕವು ಆ ರಾಜ್ಯದಲ್ಲಿ ತೀರ ನೈಋತ್ಯತುದಿಗೆ! ಹೀಗಾಗಿ ಕರ್ನಾಟಕದ ತುಂಡುಗಳು ಈಗಿನ ಕೇಂದ್ರಸ್ಥಳಗಳಿಂದ ಬಹಳ ದೂರದಲ್ಲಿ ಸಿಡಿದುಬಿದ್ದಿವೆ. ಇದಲ್ಲದೆ ಈಗಿನ ಕೇಂದ್ರಸ್ಥಳಗಳಲ್ಲಿ ಕರ್ನಾಟಕದ ಮುಂದಾಳುಗಳಾಗಲಿ, ಕರ್ನಾಟಕದ ಹಿತವನ್ನು ಚರ್ಚಿಸುವ ವೃತ್ತಪತ್ರಗಳಾಗಲಿ ಇರುವದಿಲ್ಲ. ಅದರಿಂದ ಹೊಸ ವಿಚಾರದ ಹಾಗೂ ಹೊಸ ಸಂಸ್ಕೃತಿಯ ಗಾಳಿಯು ಬಹಳ ತಡವಾಗಿಯಷ್ಟೇ ಅಲ್ಲದೆ, ಮರಾಟಿಯ ಮುಖದಿಂದಾಗಲಿ ತೆಲಗಿನ ಮುಖದಿಂದಾಗಲಿ ಕರ್ನಾಟಕವನ್ನು ಪ್ರವೇಶಿಸುತ್ತದೆ. ಇಲಾಖೆಯ ಸ್ಥಳದ ವರ್ತಮಾನಪತ್ರಗಳಿಗೆ ಸ್ವಾಭಾವಿಕವಾಗಿ ಮಹತ್ವವು ಬರುವದರಿಂದ, ಕನ್ನಡ ವೃತ್ತಪತ್ರಗಳೂ ಮಾಸಪತ್ರಿಕೆಗಳೂ ಅಗ್ಗವಾಗಿ ಸಿಗುತ್ತಿದ್ದರೂ ಅವಕ್ಕೆ ಮಹತ್ವವು ಬಾರದಾಗಿದೆ. ಈ ಹಾನಿಯು ಅಷ್ಟಿಷ್ಟೆಂದು ಹೇಳಲಾಸಲ್ಲ.

**೪. ಸಹಕಾರತ್ವಕ್ಕೆ ಸಾಧನಗಳಿಲ್ಲ:**—ಒಂದೇ ರಾಜ್ಯದಾಢಳತೆಯಲ್ಲಿರುವ ಜನರು ಒಮ್ಮಿಲ್ಲೊಮ್ಮೆ ಕೂಡುವ ಆಶೆಯಿರುತ್ತದೆ. ವರಿಷ್ಠ ಸರಕಾರದ ನೆವದಿಂದಾಗಲಿ, ವಿಶ್ವವಿದ್ಯಾಲಯದ ನೆವದಿಂದಾಗಲಿ, ಹಾಯ್‌ಕೋರ್ಟಿನ ನೆವದಿಂದಾಗಲಿ ಇಲಾಖೆಯ ಸ್ಥಳದ ಕಡೆಗೆ ಪ್ರತಿಯೊಬ್ಬನ ಲಕ್ಷವಿರುವದಲ್ಲದೆ, ಒಮ್ಮಿಲ್ಲೊಮ್ಮೆ ಅಲ್ಲಿಗೆ ಹೋಗುವ ಪ್ರಸಂಗವೂ ಬರುತ್ತದೆ. ವಸ್ತುಸ್ಥಿತಿಯು ಹೀಗಿರುವದರಿಂದ ಮುಂಬಯಿ ಕರ್ನಾಟಕದವರು ಮುಂಬಯಿ ಮಾರ್ಗವನ್ನು ಹಿಡಿದರೆ ಮದ್ರಾಸ ಕರ್ನಾಟಕದವರು ಮದ್ರಾಸಿನ ದಾರಿಯನ್ನು ಹಿಡಿಯುವರು. ಇದರಿಂದ ಇವರೀರ್ವರ ಬಳಿಕೆಗೆ ಆಸ್ಪದವಿಲ್ಲದಂತಾಗಿದೆ. ಮಂಗಳೂರಿನ ಒಬ್ಬ ಗೃಹಸ್ಥನು ಬೆಳಗಾಂವಿಯೆಂದರೆ ಪಂಜಾಬದ ಹತ್ತರ ಇರಬಹುದೆಂತಲೂ, ಬೆಳಗಾಂವಿಯ ಗೃಹಸ್ಥನು ಮಂಗಳೂರೆಂದರೆ ರಾಮೇಶ್ವರಕ್ಕೆ ಸಮೀಪವಾಗಿ ಇರಬಹುದೆಂತಲೂ ತಿಳಿಯುವಷ್ಟು ಸದ್ಯದ ಸ್ಥಿತಿಯು ಅಸಹ್ಯವಾಗಿದೆ. ಮೈಸೂರ ಹೊರತು ಉಳಿದ ಸಂಸ್ಥಾನಗಳ ಸ್ಥಿತಿಯಂತೂ ತೀರ ಶೋಚನೀಯವೇ ಸರಿ. ಅವರಿಗೂ ಉಳಿದ ಕನ್ನಡಿಗರಿಗೂ ದರ್ಶನವಾಗುವ ಪ್ರಸಂಗವೇ ಬರುವಂತಿಲ್ಲ. ಮೈಸೂರ ಸ್ಥಿತಿಯು ಮಾತ್ರ ಹಾಗಿಲ್ಲ. ಅದು ಮಧ್ಯದಲ್ಲಿರುವದರಿಂದ, ಹಾಗೂ ಭಾಷಾವಿಷಯಕ ಚಳವಳಿಗೆ ಕೇಂದ್ರಸ್ಥಾನವಾಗಿರುವದರಿಂದ, ಉಳಿದ ಭಾಗದ ಕನ್ನಡಿಗರ ಲಕ್ಷವು ಮೈಸೂರ ಕಡೆಗೆ ಹತ್ತುವದು ಸ್ವಾಭಾವಿಕವಾಗಿದೆ. ಇನ್ನು ಅತ್ತಿತ್ತ

ಸಿಡಿದುಬಿದ್ದ ಸಣ್ಣ ಸಣ್ಣ ಸಂಸ್ಥಾನಗಳ ಗೊಡವೆಗೆ ಯಾರೂ ಹೋಗುವಂತಿಲ್ಲ. ಅವರೂ ನಮ್ಮನ್ನು ನೆನಿಸುವಂತಿಲ್ಲ. ಕರ್ನಾಟಕಪ್ರಾಂತವು ಸ್ವತಂತ್ರವಾಗಿದ್ದರೆ ಇವರೆಲ್ಲರ ಲಕ್ಷವು ಒಂದಿಲ್ಲೊಂದು ಕಾರಣದಿಂದ ಕರ್ನಾಟಕದ ಕಡೆಗೆ ಹತ್ತುತ್ತಿತ್ತು. ಮಕ್ಕಳು ಬೇನೆಬಿದ್ದರೆ ತಾಯಿಗೆ ಕಳವಳವು ಹೆಚ್ಚಾಗಿ ಅತ್ತಕಡೆಗೇ ಲಕ್ಷವಿರುತ್ತದೆ. ತಾಯಿಯೇ ಬೇನೆಬಿದ್ದಾಗ ಅವಳ ಅವಸ್ಥೆಯೇನೆಂಬದನ್ನು ವಿಚಾರಿಸುವವರು ವಿರಳ!

**೫. ಎಲ್ಲಿಯೂ ಕರ್ನಾಟಕಕ್ಕೆ ಬಹುಮತವಿಲ್ಲ:**—ಇದುವರೆಗೆ ಮ್ಯುನಸಿಪಾಲ್ಟಿ, ಲೋಕಲ್‌ಬೋರ್ಡ ಹಾಗೂ ಕಾಯಿದೆಕೌನ್ಸಿಲ್‌ಗಳಲ್ಲಿ ಕರ್ನಾಟಕದ ವತಿಯಿಂದ ಪರಭಾಷೆಯ ಜನರು ಆರಿಸಿಬಂದು ತಮ್ಮ ತಮ್ಮ ಕಾರ್ಯಗಳನ್ನು ಸಾಧಿಸಿಕೊಂಡುಹೋದ ಉದಾಹರಣೆಗಳು ಹೇರಳವಾಗಿ ದೊರೆಯುತ್ತವೆ. ಈಗೀಗ ಕನ್ನಡಿಗರೇನೋ ಎಚ್ಚರಾಗಿರುವದು ನಿಜವು. ಅವರು ಪ್ರಯತ್ನಪಟ್ಟರೆ ಮ್ಯುನಸಿಪಾಲ್ಟಿ, ಲೋಕಲ್‌ಬೋರ್ಡಗಳಲ್ಲಿ ಅವರ ಬಹುಮತವಾಗಬಹುದು. ಆದರೆ ಕಾಯಿದೆಕೌನ್ಸಿಲ್‌ವು ಇವೆಲ್ಲವುಗಳಿಗಿಂತ ಹೆಚ್ಚಿಗೆ ಮಹತ್ವದ್ದಾಗಿರುತ್ತದೆ. ಮುಂಬಯಿ ಇಲಾಖೆಗೆ ಇರುವ ಒಟ್ಟು ೧೧೧ ಸ್ಥಳಗಳಲ್ಲಿ ಕರ್ನಾಟಕದ ಜಿಲ್ಹೆಗಳಿಗೆ ೬ ಜನರನ್ನು ಮಾತ್ರ ಆರಿಸುವ ಅಧಿಕಾರವುಂಟು. ಮದ್ರಾಸ ಕೌನ್ಸಿಲ್‌ದಲ್ಲಿರುವ ೧೧೮ ಸ್ಥಳಗಳಲ್ಲಿ ಕನ್ನಡಜಿಲ್ಹೆಗಳಿಂದ ೪ ಜನರು ಆರಿಸಿಹೋಗುವ ಸಂಭವವುಂಟು. ಮುಂಬಯಿಕರ್ನಾಟಕದ ೬ ಜನರಿಂದ ಹಾಗೂ ಮದ್ರಾಸಕರ್ನಾಟಕದ ೪ ಜನರಿಂದ ಆಯಾ ಕೌನ್ಸಿಲ್‌ಗಳಲ್ಲಿ ಬಹುಮತವು ಹೇಗೆ ಆದೀತು? ಮತ್ತು ಕರ್ನಾಟಕದ ಹಿತವು ಹೇಗೆ ತಾನೇ ಸಾಧಿಸೀತು? ಇದರ ಹೊರ್ತು ಕನ್ನಡಜಿಲ್ಹೆಗಳಿಂದ ಮರಾಟಿಗರಾಗಲಿ, ತೆಲಗರಾಗಲಿ ಆರಿಸಿಹೋಗುವ ಸಂಭವವಿದೆ. ಮತ್ತು ಹಾಗೆ ಆರಿಸಿಹೋದ ಉದಾಹರಣೆಗಳೂ ಸಿಗುತ್ತವೆ. ಆದರೆ ಮರಾಟಿಜಿಲ್ಹೆಯಿಂದ ಅಥವಾ ತೆಲಗುಜಿಲ್ಹೆಯಿಂದ ಒಬ್ಬನಾದರೂ ಕನ್ನಡಿಗನು ಆರಿಸಿಹೋಗಬಹುದೋ? ಇದಕ್ಕೇನೆನ್ನಬೇಕು? ವಾಚಕರೇ ಹೇಳಲಿ. ಈಗಿನ ಕೌನ್ಸಿಲ್‌ಗಳಲ್ಲಿ ಕರ್ನಾಟಕಕ್ಕೆ ಬಹುಮತವಿಲ್ಲ. ಮುಂದಾದರೂ ಬಹುಮತವು ದೊರೆಯುವ ಆಶೆಯಿಲ್ಲ. ಆದ್ದರಿಂದ ಕರ್ನಾಟಕದ ಉನ್ನತಿಗೆ ಸ್ವತಂತ್ರ ಕರ್ನಾಟಕಪ್ರಾಂತವನ್ನು ಪಡೆಯುವದರ ಹೊರತು ಗತ್ಯಂತರವೇನು?

**೬. ಭಾಷಾವಿಷಯಕ ಹಾನಿ:**— ಲೋಕನಿಯುಕ್ತ ಸಂಸ್ಥೆಗಳಲ್ಲಿ ಕರ್ನಾಟಕವು ದುರ್ಬಲವಾಗಿದ್ದು ಅದನ್ನು ಪ್ರಬಲರೊಡನೆ ಕುಶಲತೆಯಿಂದ ಸರಕಾರವು ಸಾಗಿಸಿಕೊಂಡು ನಡೆದದೆ. ದುರ್ಬಲ ಎತ್ತನ್ನು ಪ್ರಬಲ ಎತ್ತಿನ ಕೂಡ ಕೊರಳ ಕಟ್ಟಿದಾಗ ಬಂಡಿಯವನು ಕುಶಲತೆಯಿಂದ ಬಂಡಿಯನ್ನು ಸಾಗಿಸಿದರೂ ದುರ್ಬಲ ಎತ್ತಿನ ಗೋಳಾಟವನ್ನು ದೇವರೇ ಬಲ್ಲನು. ಲೋಕನಿಯುಕ್ತ ಸಂಸ್ಥೆಗಳಲ್ಲಿ ಕರ್ನಾಟಕದ ಸ್ಥಿತಿಯು ಹೀಗಾದ ಮೇಲೆ ಕರ್ನಾಟಕದಲ್ಲಿ ವಿದ್ಯಾಪ್ರಸಾರಕ್ಕೂ, ವಾಙ್ಮಯಾಭಿವೃದ್ಧಿಗೂ, ಬಹಳ ತೊಂದರೆಗಳುಂಟಾಗಿವೆ. ಒಂದೇ ಉದಾಹರಣೆಯನ್ನು ನೋಡಿರಿ. ಮುಂಬಯಿ ವಿಶ್ವವಿದ್ಯಾಲಯವು ಸ್ಥಾಪಿತವಾಗಿ ಕರ್ನಾಟಕಕ್ಕೆ ಒಂದು ಕಾಲೇಜವು ದೊರೆಯಬೇಕಾದರೆ ಎಷ್ಟು ವರ್ಷಗಳು ಕಳೆದು ಹೋದವು? ಇದಿರಲಿ. ಮುಂಬಯಿ ವಿಶ್ವವಿದ್ಯಾಲಯದಲ್ಲಿ ಸಿನೇಟ ಅಥವಾ ಸಿಂಡಿಕೇಟದಲ್ಲಿ ಎಷ್ಟು ಕನ್ನಡ ಜನರಿರುವರು? ಇದು ವರೆಗೆ ಕನ್ನಡ ಫೆಲೋಗಳು ಎಷ್ಟು ಜನರು ಆರಿಸಲ್ಪಟ್ಟಿರುತ್ತಾರೆ? ಮುಂಬಯಿ ಇಲಾಖೆಯೊಳಗಿನ ಕಾಲೇಜಗಳಲ್ಲಿ ಕನ್ನಡವು ಮಾತೃಭಾಷೆಯುಳ್ಳ ಪ್ರೊಫೇಸರರು ಎಷ್ಟು ಜನರಿರುವರು? ಇವೆಲ್ಲ ಪ್ರಶ್ನಗಳ ಉತ್ತರಗಳನ್ನು ಶೋಧಿಸಿದರೆ ಯಾವ ಕರ್ನಾಟಕಸ್ಥನಿಗೂ ಖೇದವೆನಿಸದಿರದು. ಬಹಳವೇಕೆ ಬಿ. ಏ. ಪರೀಕ್ಷೆಗೆ ಕನ್ನಡವನ್ನು ಗೊತ್ತುಮಾಡಿದ್ದಾದರೂ ಈಗ ೨ ವರ್ಷದ ಹಿಂದೆಯೇ! ಇವೆಲ್ಲವುಗಳ ಮೇಲೆ ಕಳಸವನ್ನಿಡುವದೆಂದರೆ ಎಷ್ಟೋ ಕಡೆಗೆ ಕನ್ನಡ ಜನರು ಗತ್ಯಂತರವಿಲ್ಲದೆ ಪರಭಾಷೆಯಲ್ಲಿ ಶಿಕ್ಷಣವನ್ನು ಹೊಂದಬೇಕಾಗುತ್ತದೆ. ಕಾಟಕಸರಿನ ಕಾಟವು ಕರ್ನಾಟಕವನ್ನು ಕಾಡಿ ಧಾರವಾಡ ಟ್ರೇನಿಂಗಕಾಲೇಜನ್ನು ನುಂಗಿತು. ಇಂತಹ ಉದಾ:––ಮತ್ತೊಂದಿರುವದೇನು? ಇದಕ್ಕೆ ಕಕಾರ ಸಾಮ್ಯವೇ ಕಾರಣವೇನು? ಇನ್ನು ಸಂಸ್ಥಾನಗಳಲ್ಲಿ ಸಂಸ್ಥಾನಿಕರು ಮರಾಟಿಗರಿದ್ದರಂತೂ ತೀರಿಯೇ ಹೋಯಿತು. ಕನ್ನಡಕ್ಕೆ ಉತ್ತೇಜನ ಸಿಗುವದಂತೂ ಇರಲಿ, ಅದು ಜೀವದಿಂದುಳಿಯುವದು ದುರ್ಲಭವಾಗುವದು. ಕರ್ನಾಟಕದ ಪ್ರಸಿದ್ಧ ಕವಿಯಾದ ರನ್ನನ ಜನ್ಮಸ್ಥಾನವಾದ ಮುಧೋಳದಲ್ಲಿ ಜನರು ಈಗ ಕನ್ನಡವೆಂದರೆ ಏನೆಂದು ಕೇಳಬಹುದು? ಇನ್ನು ಕೆಲವು ಸಂಸ್ಥಾನಿಕರು ಮರಾಟಿಗರಿದ್ದರೂ, ಕನ್ನಡ ಪ್ರಜೆಗಳಿಗಾಗಿ ಕನ್ನಡ ಶಾಲೆಗಳನ್ನು ಸ್ಥಾಪಿಸಿದ್ದರಿಂದ ಅವರ ಉಪಕಾರವನ್ನು ನಾವು ಮನ್ನಿಸಲೇ ಬೇಕಾಗುತ್ತದೆ. ಈ ಭಾಷಾವಿಷಯಕ ದುರ್ದಶೆಯು ದೂರವಾಗಬೇಕಾದರೆ

ಕರ್ನಾಟಕ ಪ್ರಾಂತವನ್ನು ಸ್ವತಂತ್ರಪಡಿಸಿ, ಕರ್ನಾಟಕಕ್ಕೆ ಸ್ವತಂತ್ರವಾದ ವಿಶ್ವ ವಿದ್ಯಾಲಯುವನ್ನು ಪಡೆಯಬೇಕು. ಇವಿಲ್ಲದಿದ್ದರೆ ಗತಿಯೇನು ?

**೭. ಪರಭಾಷೆಯ ಅಧಿಕಾರಿಗಳು:**—ಮರಾಟೆಯ ಮುಷ್ಟಿನಲ್ಲಿ ಸಿಕ್ಕಿಕೊಂಡ ಕರ್ನಾಟಕವನ್ನು ಜಾಗೃತಗೊಳಿಸಲಿಕ್ಕೆ ಡೆವೂಟಿ ಚೆನ್ನಬಸಪ್ಪನವರು ಎಷ್ಟು ಪ್ರಯತ್ನಮಾಡಿರುವರೆಂಬದನ್ನು ಅವರ ಚರಿತ್ರವನ್ನು ಓದಿ ತಿಳಿಯಬಹುದು. ಇವರ ತರುವಾಯ ವೆಂಕಟ ರಂಗೋ ಕಟ್ಟಿ, ಹಾಗೂ ತುರಮರಿ ಮೊದ ಲಾದವರು ಕನ್ನಡದ ಬಗ್ಗೆ ಬಹಳ ಪ್ರಯತ್ನ ಮಾಡಿರುತ್ತಾರೆ. ಮಧ್ಯದಲ್ಲಿ ಮಾತ್ರ ಕರ್ನಾಟಕಕ್ಕೆ ವಿದ್ಯಾಖಾತೆಯಲ್ಲಿ ಪರಭಾಷೆಯ ಅಧಿಕಾರಿಗಳೇ ದೊರೆತದ್ದರಿಂದ ಕನ್ನಡಕ್ಕೆ ಎಷ್ಟು ಉತ್ತೇಜನವು ದೊರೆಯಬೇಕೋ, ಅಷ್ಟು ದೊರೆಯಲಿಲ್ಲ. ಇದು ಎಲ್ಲರಿಗೂ ಪರಿಚಿತ ವಿಷಯವು. ಆದ್ದರಿಂದ ಕನ್ನಡ ನುಡಿಯ ಏಳ್ಗೆಯನ್ನು ಸಾಧಿ ಸುವದಾದರೆ, ವಿದ್ಯಾಖಾತೆಯ ಸೂತ್ರಗಳನ್ನು ಮರಾಟಿಗರ ಕೈಯಲ್ಲಾಗಲಿ, ತೆಲಗರ ಕೈಯಲ್ಲಾಗಲಿ ಕೊಟ್ಟರೆ ಸಾಗೀತೇ ?

**೮. ವಿಶ್ವವಿದ್ಯಾಲಯದ ಸ್ಥಿತಿ:**—ಮುಂಬಯಿ ವಿಶ್ವವಿದ್ಯಾಲಯದ ಸ್ಥಿತಿಯನ್ನು ಕುರಿತು ಮೇಲೆ ತುಸು ವಿವರಿಸಿದಂತಾಗಿದೆ. ಕರ್ನಾಟಕಕ್ಕೆ ವಿಶ್ವ ವಿದ್ಯಾಲಯದ ಅವಶ್ಯಕತೆಯ ಬಗ್ಗೆ ಮುಂದೆ ಒಂದು ಪ್ರಕರಣದಲ್ಲಿ ಚರ್ಚಿಸತಕ್ಕ ವರಿದ್ದೇವೆ. ಆದ್ದರಿಂದ ಇಲ್ಲಿ ಚರ್ವಿತ-ಚರ್ವಣವು ಬೇಡ. ಕನ್ನಡ ಭಾಷೆಯ ಅಭಿವೃದ್ಧಿಗೆ ಕರ್ನಾಟಕ ವಿಶ್ವವಿದ್ಯಾಲಯವು ಅವಶ್ಯವಾಗಿದೆಯೆಂಬದನ್ನು ಇಲ್ಲಿ ಸೂಚಿಸುತ್ತೇವೆ. ಈಗ ಮುಂಬಯಿ ವಿಶ್ವವಿದ್ಯಾಲಯದ ಸುಧಾರಣೆಗಾಗಿ ಒಂದು ಕಮಿಟಿಯು ನಿಯಮಿಸಲ್ಪಟ್ಟಿದೆ. ಪುಣೆಗೆ ಸ್ವತಂತ್ರವಾದ ವಿಶ್ವವಿದ್ಯಾಲಯವು ಇರಬೇಕೆಂದು ಮರಾಟಿಗರು ಪ್ರಯತ್ನ ನಡೆಯಿಸಿರುವರು. ಕನ್ನಡಿಗರೇ! ನೀವು ಏನುಮಾಡುವಿರಿ?

**೯. ಅಜಾಗ್ರತೆಯ ಅವಶೇಷಗಳು:**—ಇಬ್ಭಾಗವಾದ ಬಂಗಾಲವು ಪುನಃ ಏಕವಾಗಲಿಕ್ಕೆ ಕಾರಣವೇನೆಂದು ಕೇಳಿದರೆ, ಬಂಗಾಲದ ವಿಷಯವಾಗಿ ಬಂಗಾಲಿಗಳಲ್ಲಿರತಕ್ಕ ಅಭಿಮಾನವೇ ಎಂದು ಹೇಳಬಹುದು. ಕನ್ನಡ ಜನರು ಒಳ್ಳೇ ಅಭಿಮಾನಿಗಳೂ, ತಮ್ಮ ನಾಡಿನ ಹಾಗೂ ನುಡಿಯ ಮೇಲೆ ಅತ್ಯಂತ

ಪ್ರೀತಿಯುಳ್ಳವರೂ, ಎಂದು ಈ ಮೊದಲೇ ನಾವು ಸರಕಾರವನ್ನು ಮನಗಾಣಿ ಸಿದ್ದರೆ ಈ ದಿನ ನಾವು ಸ್ವತಂತ್ರ ಕರ್ನಾಟಕಪ್ರಾಂತದಲ್ಲಿ ವಿಹರಿಸುತ್ತಿದ್ದೆವು. ನಮ್ಮ ಅಭಿಮಾನವನ್ನು ಸರಕಾರವು ಸೂಕ್ಷ್ಮರೀತಿಯಿಂದ ಪರೀಕ್ಷಿಸುತ್ತಿರುತ್ತ ದೆಂಬದನ್ನು ಮರೆಯಲಾಗದು. ನೋಡಿರಿ! ವಿದ್ಯ ಕಲಿತ ಪದವೀಧರರಿಗೆ ಕನ್ನಡ ದಲ್ಲಿ ಪತ್ರವ್ಯವಹಾರ ಮಾಡಲಿಕ್ಕೆ ನಾಚಿಕೆ! ಕನ್ನಡ ವೃತ್ತಪತ್ರ ಹಾಗೂ ಮಾಸ ಪತ್ರಿಕೆಗಳಿಗೆ ಚಂದಾದಾರರಾಗುವದೆಂದರೆ ಕ್ಷುಲ್ಲಕತನದ ಭಾವನೆ! ಮಾತೃಭಾಷೆ ಯಾದ ಕನ್ನಡವನ್ನು ಬಿಟ್ಟು ಮರಾಟಿಯಲ್ಲಿಯೇ ಎಲ್ಲ ವ್ಯಾಪಾರಸ್ಥರು ಜಮಾ ಖರ್ಚನ್ನಿಡುತ್ತಿರುವ ರೀತಿ! ಕನ್ನಡದಲ್ಲಿಟ್ಟರೆ ಗಂಟು ಮುಳುಗೀತೆಂಬ ಬೆದರಿಕೆ ಯುಂಟೋ ಏನೋ! ಇನ್ನು ಕೆಲವರು ತಾವು ಒಳ್ಳೇ ಕನ್ನಡ ಅಭಿಮಾನಿಗ ಳೆಂದು ತೋರಿಸುವದಕ್ಕಾಗಿ ಪತ್ರವನ್ನು ಅಚ್ಚ ಕನ್ನಡದಲ್ಲಿ ಬರೆಯುವ ಹವ್ಯಾ ಸಕ್ಕೆ ಬೀಳುತ್ತಾರೆ. ಇಂಥವರು ಚಟದಿಂದಲೋ ಅಜ್ಞಾನದಿಂದಲೋ ಮರಾ ಟಿಯ ಸಹಿಯನ್ನು ಹಾಕಲಿಕ್ಕೆ ತಪ್ಪುವದಿಲ್ಲ. ಕರ್ನಾಟಕದೊಳಗಿನ ಪೋಸ್ಟ ಆಫೀಸುಗಳಲ್ಲಿ ಮನಿಯಾರ್ಡರ ನಮೂನೆಗಳು ಕನ್ನಡವಿದ್ದರೆ ಹೆಚ್ಚು ಉಪಯೋ ಗವಾಗುತ್ತಿತ್ತೆಂಬದನ್ನು, ಇನ್ನೂ ಯಾವ ಕನ್ನಡಿಗನೂ ಒತ್ತಾಯಪಡಿಸಲಿಲ್ಲ. ಕನ್ನಡದಲ್ಲಿ ಓದಲಿಕ್ಕೂ ಬರೆಯಲಿಕ್ಕೂ ಬರುತ್ತಿದ್ದು, ಮರಾಟಿಯ ಅಥವಾ ಇಂಗ್ಲಿಷ ನಮೂನೆಯನ್ನು ತುಂಬಿಸಿಕೊಂಡು ಬರಲಿಕ್ಕೆ ಎರಡನೆಯವರ ಕಡೆಗೆ ಹೋಗಬೇಕಾಗುತ್ತದೆ. ಲೈನದಾರಿಯ ಮೇಲೆನಿಲ್ಲಿಸುವ ಕೈಗಂಬಗಳ ಮೇಲಾ ಗಲಿ, ಮೈಲಗಲ್ಲುಗಳ ಮೇಲಾಗಲಿ ಬರೆಯುವ ಲಿಪಿಯು ಕರ್ನಾಟಕದಲ್ಲಿ ಕನ್ನಡವಿದ್ದರೆ ನೆಟ್ಟಗಾಗುವದೆಂಬದು ಎಂಜಿನಿಯರ್ ಖಾತೆಯವರಿಗೆ ಇನ್ನೂ ತಿಳಿಯಬಾರದೇ? ಒಂದುವೇಳೆ ಅವರಿಗೆ ತಿಳಿಯದಿದ್ದರೂ ತಿಳಿಸುವ ಕೆಲಸ ವನ್ನು ಕನ್ನಡಿಗರು ಮಾಡಬಾರದೇ? ಇವೇ ಮೊದಲಾದ ಅಜಾಗ್ರತೆಯ ಅವಶೇಷಗಳು ಇನ್ನೂ ಕರ್ನಾಟಕದಲ್ಲಿ ದೊರೆಯುತ್ತಿರುವಾಗ, ಕರ್ನಾಟಕ ಪ್ರಾಂತವು ಹೇಗೆ ತಾನೇ ಸ್ವತಂತ್ರವಾಗಬೇಕು? ಮನಿಯಾರ್ಡರ ನಮೂನೆಗಳು ಮರಾಟಿಯಿದ್ದರೇನು? ಮುಸಲ್ಮಾನಿಯಿದ್ದರೇನು? ಕನ್ನಡಿಗರೇನೂ ಕೇಳುವದಿ ಲ್ಲೆಂದ ಬಳಿಕ ಸರಕಾರವು ತಾನಾಗಿಯೇ ಕನ್ನಡದಲ್ಲಿ ಏಕೆ ಮುದ್ರಿಸಬೇಕು! ಇವೆಲ್ಲ ಅಜಾಗ್ರತೆಯ ಅವಶೇಷಗಳನ್ನು ಹೊಡೆದಟ್ಟಿ ಕನ್ನಡಿಗರು ತಮ್ಮ ಅಭಿ

ಮಾನವನ್ನು ಒರೆಗಲ್ಲಿಗೆ ತಿಕ್ಕಿ ಸರಕಾರಕ್ಕೆ ತೋರಿಸಿದರೆ, ಕರ್ನಾಟಕಪ್ರಾಂತವು ಕಟ್ಟಿಟ್ಟ ಮಾತೇ ಸರಿ.

**೧೦. ಸಾಂಪತ್ತಿಕ ದುರ್ದೆಶೆ:—** ಕರ್ನಾಟಕದಲ್ಲಿ ಕಚ್ಚಾಮಾಲು ಸಾಕಷ್ಟು ಹೊರಡುತ್ತಿದ್ದರೂ ಕರ್ನಾಟಕದ ಬಡತನಸ್ಥಿತಿಯು ದೂರಾಗಲೊಲ್ಲದು. ಇದಕ್ಕೆ ಮುಖ್ಯ ಕಾರಣವೇನಂದರೆ ಉದ್ಯೋಗ ವ್ಯವಸಾಯಗಳನ್ನು ಬೆಳಿಸಲಿಕ್ಕೆ ಸಾಮುದಾಯಿಕ ಬಂಡವಲವೂ, ಪರಸ್ಪರ ಸಹಕಾರವೂ ಅವಶ್ಯವಾಗಿ ಬೇಕು. ಒಬ್ಬನ ಬಂಡವಲದಿಂದ ಕಾರಖಾನೆಗಳು ಹೊರಡುವಂತಿಲ್ಲ. ಉದ್ಯೋಗಾಭಿವೃದ್ಧಿಯಾಗಲಿಕ್ಕೆ ಕರ್ನಾಟಕದಲ್ಲಿ ಅನೇಕ ಅನುಕೂಲತೆಗಳಿದ್ದರೂ, ಕೇವಲ ಕರ್ನಾಟಕದ ಏಕೀಕರಣವಿಲ್ಲದ್ದರಿಂದಲೇ ಕರ್ನಾಟಕವು ಈ ವಿಷಯದಲ್ಲಿ ಹಿಂದೆಬಿದ್ದದೆ. ಕರ್ನಾಟಕದ ಏಕೀಕರಣವಾಗಿ ಸ್ವತಂತ್ರಪ್ರಾಂತವಾದರೆ ಈ ಪ್ರಾಂತವು ಧನಧಾನ್ಯಸಂಪನ್ನವಾಗಿಯೂ ಉದ್ಯೋಗಗಳಿಗೆ, ಉದ್ಯಾನವಾಗಿಯೂ ಪರಿಣಮಿಸಲಿಕ್ಕೆ ಯಾವ ಕೊರತೆಯೂ ಇರುವದಿಲ್ಲ. ಆದ್ದರಿಂದ ಕರ್ನಾಟಕದ ಸಾಂಪತ್ತಿಕ ದುರ್ದೆಶೆಗೆ ಮುಖ್ಯಾಂಶದಿಂದ "ಅದರ ಏಕೀಕರಣವಿಲ್ಲದಿರುವದು ಅಂದರೆ ಅದರ ಛಿನ್ನವಿಚ್ಛಿನ್ನತೆಯು ಕಾರಣವಾಗಿದೆ." ಎಂದು ಹೇಳಿದರೆ ತಪ್ಪಾಗದು. ಏಕೀಕರಣದಿಂದ ಸಹಕಾರವು ಬೆಳೆಯುತ್ತದೆ. ಸಹಕಾರದಿಂದ ಉದ್ಯೋಗಾಭಿಲಾಷೆಯುಂಟಾಗುತ್ತದೆ. ಉದ್ಯೋಗಾಭಿಲಾಷೆಯಿಂದ ಸಾಹಸವು ಹುಟ್ಟುತ್ತದೆ. ಸಾಹಸದಿಂದ ಮನುಷ್ಯನು ಕೀರ್ತಿವಂತನಾಗುತ್ತಾನೆ.

---

# ಆರನೆಯ ಪ್ರಕರಣ.

## ಭಾವೀ ಕರ್ನಾಟಕದ ರೂಪರೇಷೆ.

೧ ಬೃಹತ್‌ಕರ್ನಾಟಕವೋ, ಬೃಹನ್ಮಹಾರಾಷ್ಟ್ರವೋ? ೨ ಸಾಮಾನ್ಯನಿಯಮಗಳು, ೩ ಕರ್ನಾಟಕವನ್ನು ನೆನಪಿಡುವ ರೀತಿ, ೪ ಕರ್ನಾಟಕದ ತುಂಡುಗಳ ಸಂಕ್ಷಿಪ್ತವರ್ಣನೆ, ೫ ಸಂಸ್ಥಾನಗಳಲ್ಲಿ ಸೇರಿದ ಕರ್ನಾಟಕ, ೬ ಅಚ್ಚುಕಟ್ಟಾದ ಹೊಂದಿಕೆ, ೭ ಕರ್ನಾಟಕದ ಕೇಂದ್ರಸ್ಥಾನ, ೮ ಹಂಪಿ, ಮಡಿಕೇರಿ, ಉದಕಮಂಡಲ? ೯ ಭಾವೀ ಕರ್ನಾಟಕದ ಜಿಲ್ಹೆಗಳ ವಿವರ, ೧೦ ಉಪಸಂಹಾರ.

**೧. ಬೃಹತ್‌ಕರ್ನಾಟಕವೋ, ಬೃಹನ್ಮಹಾರಾಷ್ಟ್ರವೋ?**—ಮರಾಟಿ, ಕನ್ನಡಿಗರ ನಡುವಿನ ಈ ವಾದವು ಬಹು ದಿವಸದಿಂದ ನಡೆದು ಬಂದ ಮಾತಾಗಿದೆ. ಉತ್ತರ ಕರ್ನಾಟಕವನ್ನು ದಕ್ಷಿಣ ಮಹಾರಾಷ್ಟ್ರವೆಂದು ಕರೆದು ತೃಪ್ತಿಹೊಂದದೆ, ತಂಜಾವರದ ವರೆಗೆ ಕರ್ನಾಟಕವನ್ನು ಮಹಾರಾಷ್ಟ್ರದಲ್ಲಿ ಸೆಳೆದುಕೊಂಡು ಬೃಹನ್ಮಹಾರಾಷ್ಟ್ರವೆಂದು ಕರೆಯುವ ಮೋಹವು, ಇನ್ನೂ ಮರಾಟಿಗರನ್ನು ಬಿಡದಿರುವದು ಆಶ್ಚರ್ಯದ ಮಾತು. ಒಂದು ಕಾಲದಲ್ಲಿ ಕರ್ನಾಟಕವು ನರ್ಮದೆಯ ವರೆಗೆ ವ್ಯಾಪಿಸಿದ್ದರಿಂದ ಈಗಿನ ಮಹಾರಾಷ್ಟ್ರವು ಕರ್ನಾಟಕದಲ್ಲಿ ಸಮಾವೇಶವಾಗುವದರಿಂದ ಬೃಹತ್‌ಕರ್ನಾಟಕದ ವಾದವನ್ನು ಕನ್ನಡಿಗರು ಹೂಡುವದು ಸ್ವಭಾವಿಕವಾಗಿದೆ. ಲೊ. ಮಾ. ಟಿಳಕರೂ ಇದಕ್ಕೆ ಒಪ್ಪಿದ್ದರು. ಈಗ ಈ ವಾದದಿಂದ ಏನೂ ನಿಷ್ಪತ್ತಿಯಾಗುವಂತಿಲ್ಲ. ಮಹಾರಾಷ್ಟ್ರವು ಮಹಾರಾಷ್ಟ್ರವೇ! ಕರ್ನಾಟಕವು ಕರ್ನಾಟಕವೇ!! ಈ ಪ್ರಾಂತಗಳ ಗಡಿಗಳನ್ನು ಗೊತ್ತುಮಾಡಲಿಕ್ಕೆ ಸರಕಾರವು ಒಂದು ಕಮಿಟಿಯನ್ನು ಗೊತ್ತುಮಾಡಿದ ಬಳಿಕ ಈರ್ವರಿಗೂ ಅನ್ಯಾಯವಾಗದಂತೆಯೂ, ಯಾವ ಜನರ ಮೇಲೂ ಪರಭಾಷೆಯು ಬಲಾತ್ಕಾರವಾಗದಂತೆಯೂ, ಜಾಗರೂಕರಾದರೆ ಸಾಕು. ಬೃಹನ್ಮಹಾರಾಷ್ಟ್ರವೆಂದು ಮಹಾರಾಷ್ಟ್ರದವರು ಕೂಗಿದರೆ, ಅದಕ್ಕೆ ಬೃಹತ್‌ಕರ್ನಾಟಕವೆಂಬ ಪ್ರತಿಧ್ವನಿಯು ಬಂದೇ ಬರುತ್ತದೆಂಬದನ್ನು ಮರಾಟಿಗರು ಮರೆಯಲಾಗದು.

**೨. ಸಾಮಾನ್ಯ ನಿಯಮಗಳು:**—ಈಗಿನ ಕರ್ನಾಟಕದ ಮೇರೆಯು ಸಂಕುಚಿತವಾಗಿದೆ. ಅದಕ್ಕೆ ಬೇರೆ ಬೇರೆ ಜಿಲ್ಹೆಗಳಲ್ಲಿ ಸೇರಿಕೊಂಡ ಕರ್ನಾಟ

ಕದ ಭಾಗಗಳನ್ನು ಜೋಡಿಸಬೇಕಾಗುತ್ತದೆ. ಉತ್ತರ ಕಡೆಗೆ ಎಲ್ಲಿಯ ವರೆಗೆ ಕನ್ನಡ ಶಿಲಾಲಿಪಿಗಳು ದೊರೆಯುತ್ತವೆಯೋ ಅಲ್ಲಿಯ ವರೆಗಿನ, ಹಾಗೂ ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಾಂಕಿತವಾದ ಬೃಹತ್‌ಕರ್ನಾಟಕವನ್ನು ಸ್ವತಂತ್ರ ಪ್ರಾಂತವನ್ನಾಗಿ ಮಾಡಬೇಕೆಂದು ಹೇಳುವದು ನಮ್ಮ ಉದ್ದೇಶವಿಲ್ಲ. ಎಲ್ಲಿ ಕನ್ನಡ ಮಾತಾಡುವ ಜನರು ಪರಭಾಷೆಯವರೊಡನೆ ಸೇರಿ ಹೋಗಿರುತ್ತಾರೆಯೋ, ಅದನ್ನು ಸದ್ಯದ ಕರ್ನಾಟಕಕ್ಕೆ ಜೋಡಿಸಬೇಕೆಂದು ನಮ್ಮ ಅಭಿಪ್ರಾಯವು. ಇದು ನ್ಯಾಯವಾಗಿದೆಯೆಂದು ಯಾರಾದರೂ ಹೇಳಬಹುದು. ಇದಕ್ಕೂ ಕೆಲವು ಸಾಮಾನ್ಯ ನಿಯಮಗಳನ್ನು ಮಾಡುವದು ಅವಶ್ಯವಾಗಿದೆ, ಒಂದೊಂದೇ ಊರನ್ನು ಆರಿಸುತ್ತ ಹೋದರೆ ಬಹಳ ವ್ಯತ್ಯಯವಾಗುತ್ತದೆ. ಉದಾಹರಣಾರ್ಥವಾಗಿ ಕರ್ನಾಟಕದ ಕೆಲವು ಊರುಗಳು ಸಾತಾರೆ ಜಿಲ್ಹೆಯಲ್ಲಿರುತ್ತವೆ. ಇವುಗಳನ್ನು ಕರ್ನಾಟಕಕ್ಕೆ ಜೋಡಿಸುವದು ಯೋಗ್ಯವಾಗಿದ್ದರೂ ವ್ಯತ್ಯಾಸದ ಮೂಲಕ ಬಿಡಬೇಕಾಗುತ್ತದೆ. ಬೆಳಗಾಂವಿ ಜಿಲ್ಹೆಗೆ ಜೋಡಿಸಬೇಕೆಂದರೆ ನಡುವೆ ಸಂಸ್ಥಾನದ ಭಾಗವು ಅಡ್ಡಬರುತ್ತದೆ. ಆದ್ದರಿಂದ ಎರಡು ಸಾಮಾನ್ಯ ನಿಯಮಗಳನ್ನು ಇಲ್ಲಿ ಹೇಳುವೆನು. ಮೊದಲನೆಯದು-- ಕನಿಷ್ಟ ಪಕ್ಷಕ್ಕೆ ಒಂದು ತಾಲೂಕಿನಷ್ಟು ಅಥವಾ ಅದರ ಅರ್ಧ ಭಾಗವನ್ನು ಎತ್ತತಕ್ಕದ್ದು. ಎರಡನೆಯದು-ಈ ಎತ್ತಿದ ಭಾಗವು ಯಾವದೊಂದು ಸಮೀಪದ ಜಿಲ್ಹೆಗೆ ಹೊಂದಿಕೆಯಾಗತಕ್ಕದ್ದು. ಪ್ರತಿಯೊಂದು ಊರಿನ ವ್ಯವಸ್ಥೆಮಾಡುವದು ಇಷ್ಟವೂ ಯೋಗ್ಯವೂ ಆಗಿದ್ದರೂ, ತೊಂದರೆದಾಯಕವಾಗಿರುವದೆಂದು ಈ ಸುಲಭವಾದ ಮಧ್ಯಮ ಯೋಜನೆಯನ್ನು ಸೂಚಿಸಿರುತ್ತೇನೆ.

೩. **ಕರ್ನಾಟಕವನ್ನು ನೆನಪಿಡುವ ರೀತಿ**:—೧ ಮೈಸೂರ ಸಂಸ್ಥಾನವನ್ನು ಮಧ್ಯದಲ್ಲಿಟ್ಟು ಕರ್ನಾಟಕ ಪ್ರದೇಶಗಳು (ತುಂಡುಗಳು) ಸುತ್ತಲೂ ಮಾಲೆಯನ್ನು ಹಾಕಿದಂತೆ ವ್ಯಾಪಿಸಿರುತ್ತವೆ. ಉತ್ತರಕ್ಕೆ ಕಾರವಾರ ಬಳ್ಳಾರಿ ಜಿಲ್ಹೆಗಳು, ಅದರಾಚೆಗೆ ಬೆಳಗಾಂವಿ, ಧಾರವಾಡ, ವಿಜಾಪೂರ ಜಿಲ್ಹೆಗಳು ಹಾಗೂ ನಿಜಾಮನ ಕರ್ನಾಟಕವು. ಪೂರ್ವಕ್ಕೆ ಅನಂತಪೂರ ಜಿಲ್ಹೆಯ ಭಾಗ, ಆಗ್ನೇಯಕ್ಕೆ ಸೇಲಮ್, ಕೊಯಿಮುತ್ತೂರ ಜಿಲ್ಹೆಗಳ ಕನ್ನಡ ಭಾಗ, ದಕ್ಷಿಣಕ್ಕೆ ನೀಲಗಿರಿ ಜಿಲ್ಹೆ, ನೈಋತ್ಯದಲ್ಲಿ ಕೊಡಗು, ಪಶ್ಚಿಮದ ಸಮುದ್ರದ ದಂಡೆಗುಂಟ ಕಾರವಾರ ಹಾಗೂ ಮಂಗಳೂರ ಜಿಲ್ಹೆಗಳು. (೨) ಪ್ರತಿಯೊಬ್ಬನು ತನ್ನ

ಎಡಗಾಲನ್ನು ಮುಂದಿಟ್ಟು ಕರ್ನಾಟಕವನ್ನು ಅರಿಯಬಹುದು. ಹೆಬ್ಬೆರಳಿನ ತುದಿಗೆ ಬೀದರ, ಕಿರಿಬೆರಳಿನ ತುದಿಗೆ ಕೊಲ್ಹಾಪುರವನ್ನು ಕಲ್ಪಿಸಿ ಉತ್ತರದ ಗಡಿಯನ್ನು ಕೂಡಿಸಬಹುದು. ಮಧ್ಯದ ಡುಬರಿಯ ಮೇಲೆ ಮೈಸೂರು. ಅದರ ದಕ್ಷಿಣಕ್ಕೆ ಹಿಮ್ಮಡದ ಸುತ್ತಲು ಕೋಯಿಮತ್ತೂರ, ನೀಲಿಗಿರಿ, ಕೊಡಗು. ಕಿರಿಬೆರಳನಿಂದ ಹಿಮ್ಮಡದ ವರೆಗಿನ ಗೆರೆಯು ಕಾರವಾರ, ಮಂಗಳೂರ ಜಿಲ್ಹೆಗಳ ಸಮುದ್ರತೀರದ ಮೇರೆಯನ್ನು ಸೂಚಿಸುತ್ತದೆ. ಬಲಗಡೆಯ ಮಗ್ಗಲಿಗೆ ( ಹೆಬ್ಬೆರಳಿನ ಮಗ್ಗಲು ) ಅನಂತಪೂರ ಹಾಗೂ ಚಿತ್ತೂರ ಜಿಲ್ಹೆಯ ಭಾಗ. ಮೈಸೂರಿಂದ ಉತ್ತರ ಗಡಿಯವರೆಗೆ ವ್ಯಾಪಿಸಿದ ಪ್ರದೇಶದಲ್ಲಿ ಕಾರವಾರ, ಬಳ್ಳಾರಿ, ಬೆಳಗಾಂವಿ, ಧಾರವಾಡ, ವಿಜಾಪೂರ, ಹಾಗೂ ನಿಜಾಮನ ಕರ್ನಾಟಕವು. (ಹೆಬ್ಬೆರಳೇ ನಿಜಾಮನ ಕರ್ನಾಟವು. ) ಹೀಗೆ ಎಂದೂ ಮರೆಯದಂತೆ ಕರ್ನಾಟಕದ ಸ್ವರೂಪವನ್ನು ಅರಿಯಬಹುದು.

**೪. ಕರ್ನಾಟಕದ ತುಂಡುಗಳ ಸಂಕ್ಷಿಪ್ತ ವರ್ಣನೆ**-:ಕರ್ನಾಟಕದಲ್ಲಿ ಈಗ ಇರುವ ಹಾಗು ಮುಂದೆ ಸೇರತಕ್ಕ ಭಾಗಗಳನ್ನೆಲ್ಲ ಒಮ್ಮೆ ಒಟ್ಟುಗೂಡಿಸಿ ಕನ್ನಡಿಗರ ಮುಂದೆ ಇಡುತ್ತೇನೆ.

**೧ನೆಯ ಭಾಗ-ಮುಂಬಯಿ ಕರ್ನಾಟಕ**:—ಇದರಲ್ಲಿ ಬೆಳಗಾಂವಿ, ಧಾರವಾಡ, ವಿಜಾಪೂರ, ಕಾರವಾರ ಎಂಬ ನಾಲ್ಕು ಜಿಲ್ಹೆಗಳೂ, ಸೊಲ್ಲಾಪೂರ ಜಿಲ್ಹೆಯ ಕನ್ನಡ ಭಾಗ ( ಪೂರ್ವದ ಹಾಗೂ ದಕ್ಷಿಣದ ಭಾಗ ) ವೂ, ಸಮಾವೇಶವಾಗುತ್ತವೆ. ಈ ಸೊಲ್ಲಾಪೂರ ಜಿಲ್ಹೆಯ ಭಾಗವನ್ನು ಭಾವೀ ಕರ್ನಾಟಕದಲ್ಲಿ ಸೇರಿಸಬೇಕೆಂದು ಸೂಚಿಸಿರುತ್ತೇನೆ.

೧. ಬೆಳಗಾಂವಿ ಜಿಲ್ಹೆ:—ಇದು ೧೮೧೮ ರಲ್ಲಿ ಪೇಶ್ವೆಯ ಕೂಡ ಆದ ಒಪ್ಪಂದದಿಂದ ಈಸ್ಟಇಂಡಿಯಾ ಕಂಪನಿಯ ವಶಕ್ಕೆ ಬಂದಿತು. ಇದಕ್ಕೂ ಮೊದಲು ಅನೇಕ ರಾಜಮನೆತನಗಳ ವಶದಲ್ಲಿ ಈ ಜಿಲ್ಹೆಯು ಇತ್ತು. ಒಬ್ಬರಿಂದೊಬ್ಬರಿಗೆ ಹೋಗುತ್ತ ಕಡೆಗೆ ಪೇಶ್ವೆಯ ವಶವಾಗಿ ಅವರಿಂದ ಇಂಗ್ಲಿಷರ ಕೈವಶವಾಯಿತು. ಇಷ್ಟೇ ಸಂಕ್ಷೇಪವಾಗಿ ನಾವು ಸೂಚಿಸುತ್ತ ಹೋಗುತ್ತೇವೆ. ಹಿಂದಿನ ಇತಿಹಾಸವನ್ನೆಲ್ಲ ಕೊಡಲು ಈ ಚಿಕ್ಕ ಪುಸ್ತಕದಲ್ಲಿ ಸಾಧ್ಯವಿಲ್ಲ. ಅದಕ್ಕಾಗಿ ಸುಮಾರು ೫೦೦ ಪುಟದ ಪುಸ್ತಕವನ್ನು ಬರೆಯಬೇಕಾದೀತು. ಇರಲಿ. ಈ ಜಿಲ್ಹೆಯ ಕ್ಷೇತ್ರಫಲವು ೪೬೧೧ ಚ. ಮೈ. ಜನಸಂಖ್ಯೆ ೯೫೨೯೯೬ ಇದರಲ್ಲಿ ಈಗ ೮ ತಾಲೂ

ಕಗಳೂ ೨ ಮಹಾಲಗಳೂ ಇರುತ್ತವೆ. ತಾಲೂಕಿನ ಹೆಸರುಗಳು-೧ ಬೆಳಗಾಂವಿ, ೨ ಅಥಣಿ, ೩ ಚಿಕ್ಕೋಡಿ, ೪ ಗೋಕಾಕ, ೫ ಬೈಲಹೊಂಗಲ, ೬ ಸವದತ್ತಿ, ೭ ಖಾನಾಪೂರ, ೮ ಹುಕ್ಕೇರಿ. ಮಹಾಲ-೧ ಚಂದಗಡ ೨ ಮುರಗೋಡ ಈ ಜಿಲ್ಹೆಯು ಸವದತ್ತಿಯ ರಟ್ಟ ಅರಸರ ವಶದಲ್ಲಿ ಕೆಲಕಾಲವಿದ್ದಿರಬೇಕೆಂದು ಈಗಿನ ಕಿಲ್ಲೆಯೊಳಗಿನ ಬಸ್ತಿಗಳಿಂದ ತಿಳಿಯಬರುತ್ತದೆ. ಇಲ್ಲಿ ೨ ಕನ್ನಡ ಶಿಲಾ ಲಿಪಿಗಳಿದ್ದವು. ಸರಕಾರದವರು ಅವನ್ನು ತಕ್ಕೊಂಡು ಹೋಗಿರುವರು !

೨. ಧಾರವಾಡ ಜಿಲ್ಹೆ—ಈ ಜಿಲ್ಹೆಯು ಮೊದಲು ವಿಜಯನಗರದ ಅರಸರ ಕಡೆಗೆ ಇತ್ತು. ಅನಂತರ ವಿಜಾಪುರ ಆದೀಲಶಾಹಿಗೆ ಒಳಗಾಯಿತು. ೧೭೭೬ ರಲ್ಲಿ ಹೈದರನು ತಕ್ಕೊಂಡನು. ೧೭೭೮ ರಲ್ಲಿ ಹೈದರನಿಂದ ಪೇಶ್ವೆಯವರು ತಕ್ಕೊಂಡರು. ೧೮೧೮ ರಲ್ಲಿ ಪೇಶ್ವೆಯಿಂದ ಇಂಗ್ಲಿಷರ ವಶಕ್ಕೆ ಬಂದಿತು. ಇದರ ಕ್ಷೇತ್ರಫಲ ೪೬೦೬ ಚ. ಮೈ. ಜನಸಂಖ್ಯೆ ೧೦೩೬೯೨೪ ಇದರಲ್ಲಿ ೧೧ ತಾಲೂಕಗಳೂ ಹಾಗೂ ೨ ಪೇಠೆಗಳೂ ಇರುತ್ತವೆ. ತಾಲುಕಗಳು ೧ ಧಾರವಾಡ ೨ ನವಲಗುಂದ, ೩ ರೋಣ, ೪ ಗದಗ, ೫ ಹುಬ್ಬಳ್ಳಿ, ೬ ಕಲಘಟಗಿ, ೭ ಬಂಕಾಪೂರ ( ಶಿಗ್ಗಾವಿ ), ೮ ಹಾವೇರಿ, ೯ ಹಾನಗಲ್ಲ, ೧೦ ರಾಣೆಬಿನ್ನೂರ, ೧೧ ಹಿರೇಕೆರೂರ ಪೇಠೆ- ೧ ನರಗುಂದ ( ನವಲಗುಂದ ತಾಲೂಕ ), ೨ ಮುಂಡರಗಿ ( ಗದಗ ತಾಲೂಕ ).

೩. ವಿಜಾಪುರ ಜಿಲ್ಹೆ— ಇದು ಮೊದಲು ಬಾಮನೀರಾಜ್ಯದ ಭಾಗವಾಗಿತ್ತು. ಅದು ಮುರಿದನಂತರ ಅದೀಲಶಾಹಿಯ ವಶವಾಯಿತು. ಅನಂತರ ಔರಂಗಜೇಬನು ವಿಜಾಪುರವನ್ನು ಗೆದ್ದುಕೊಂಡನು. ಬಳಿಕ ನಿಜಾಮನ ವಶವಾಯಿತು. ೧೭೬೦ ರಲ್ಲಿ ನಿಜಾಮನಿಂದ ಪೇಶ್ವೆಯವರು ಗೆದ್ದುಕೊಂಡರು. ೧೮೧೮ ರಲ್ಲಿ ಪೇಶ್ವೆಯವರಿಂದ ಇಂಗ್ಲಿಷರು ತಕ್ಕೊಂಡರು. ಇದರ ಕ್ಷೇಲಫಲ ೫೭೦೭ ಚ. ಮೈ. ಜನಸಂಖ್ಯೆ ೭೯೬೮೭೬. ಇದರಲ್ಲಿ ೮ ತಾಲೂಕಗಳೂ ೧ ಮಹಾಲೂ ಇರುತ್ತವೆ. ತಾಲೂಕಗಳು—೧ ವಿಜಾಪೂರ, ೨ ಇಂಡಿ, ೩ ಶಿಂದಿಗಿ, ೪ ಬಾಗೇವಾಡಿ, ೫ ಮುದ್ದೇಬಿಹಾಳ, ೬ ಬಾಗಲಕೋಟೆ, ೭ ಹುನಗುಂದ, ೮ ಬಾದಾಮಿ. ಮಹಾಲು-- ಬೀಳಿಗಿ.

೪. ಕಾರವಾರ ಜಿಲ್ಹೆ—ಇದು ಮೈಸೂರಿನ ೪ನೇ ಕಾಳಗದಲ್ಲಿ ( ೧೭೯೯ ) ಟೀಪುವಿನ ಮರಣದನಂತರ ಇಂಗ್ಲಿಷರ ವಶವಾಗಿದೆ. ಈ ಜಿಲ್ಹೆಯು ಮೊದಲು

ಮಂಗಳೂರಿನ ಕಲೆಕ್ಟರನ ವಶದಲ್ಲಿತ್ತು. ಆದ್ದರಿಂದ ೧೮೬೧ ರ ವರೆಗೆ ಈ ಜಿಲ್ಹೆಯು ಮದ್ರಾಸ ಇಲಾಖೆಯಲ್ಲಿ ಸಮಾವೇಶವಾಗುತ್ತಿತ್ತು. ೧೮೬೨ ರಲ್ಲಿ ಇದನ್ನು ಮುಂಬಯಿ ಇಲಾಖೆಗೆ ಜೋಡಿಸಿರುತ್ತಾರೆ. ಇದರ ಕ್ಷೇತ್ರಫಲ ೩೯೪೬ ಚ. ಮೈ. ಜನಸಂಖ್ಯೆ ೪೦೧೭೨೭. ಇದರಲ್ಲಿ ೮ ತಾಲೂಕಗಳೂ ೩ ಮಹಾಲುಗಳೂ ಇರುತ್ತವೆ. ತಾಲೂಕಗಳು—( ಘಟ್ಟದ ಕೆಳಗೆ ) ೧ ಕಾರವಾರ, ೨ ಅಂಕೋಲಾ, ೩ ಕುಮಠಾ, ೪ ಹೊನ್ನಾವರ, ( ಘಟ್ಟದ ಮೇಲೆ ) ೫ ಸಿರಸಿ, ೬ ಶಿದ್ದಾಪೂರ, ೭ ಯಲ್ಲಾಪೂರ, ೮ ಹಲ್ಲಿಯಾಳ. ಮಹಾಲುಗಳು–೧ ಭಟ್ಟಕಳ ( ಹೊನ್ನಾವರ ತಾಲೂಕ ) ೨ ಮುಂಡಗೋಡ ( ಯಲ್ಲಾಪೂರ ತಾಲೂಕ ) ೩ ಸುಪೆ ( ಹಲ್ಲಿಯಾಳ ತಾಲೂಕ )

೫. ಸೊಲ್ಲಾಪುರ ಜಿಲ್ಹೆಯ ಕನ್ನಡಭಾಗ–ಕರ್ನಾಟಕದ ಕೆಲವು ತಾಲೂಕಗಳನ್ನು ಆಗಿನ ಕಾಲದ ರಾಜ್ಯದಾಢಳಿತೆಯು ಅನುಕೂಲತೆಗಾಗಿ ಸೊಲ್ಲಾಪುರಕ್ಕೆ ಸೇರಿಸಿ ಸೊಲ್ಲಾಪುರ ಜಿಲ್ಹೆಯನ್ನು ಬೇರೆ ಮಾಡಿರುತ್ತಾರೆ. ಮುಂದೆ ಕೆಲವು ತಾಲೂಕುಗಳನ್ನು ವಿಜಾಪುರ ಜಿಲ್ಹೆಗೆ ಸೇರಿಸಿದರೂ, ಕೆಲವು ಕರ್ನಾಟಕಭಾಗವು ಸೊಲ್ಲಾಪುರಕ್ಕೆ ಉಳಿದೇ ಉಳಿಯಿತು. ಇದರ ವಿವರವನ್ನು ೬ನೆಯ ಪ್ರಕರಣದಲ್ಲಿ ಕಾಣಬಹುದು. ಈ ರೀತಿಯಾಗಿ ಕರ್ನಾಟಕಕ್ಕೂ ಸೊಲ್ಲಾಪುರಕ್ಕೂ ಸಂಬಂಧವಿದ್ದದರಿಂದ ಭಾವೀ ಕರ್ನಾಟಕ ಪ್ರಾಂತದಲ್ಲಿ ಆ ಜಿಲ್ಹೆಯ ಕನ್ನಡ ಭಾಗವನ್ನು ಸಮಾವೇಶಮಾಡಿಕೊಳ್ಳುವದು ನ್ಯಾಯವಾದದ್ದು. ಈ ಕನ್ನಡ ಭಾಗದ ಕ್ಷೇತ್ರಫಲ ೮೦೦ ಚ. ಮೈ. ಜನಸಂಖ್ಯೆ ೧ ೧/೪ ಲಕ್ಷ.

**೨ನೆಯ ಭಾಗ—ಮದ್ರಾಸಕರ್ನಾಟಕ:—** ಇದರಲ್ಲಿ ೧ ಬಳ್ಳಾರಿ ಜಿಲ್ಹೆ—ಇದು ಮೊದಲು ವಿಜಯನಗರ ರಾಜ್ಯದ ಭಾಗವಾಗಿತ್ತು. ಅನಂತರ ಆದಿಲಶಾಹಿಗೆ ಸೇರಿತು. ಬಳಿಕ ನಿಜಾಮನ ಕಡೆಗೆ, ನಿಜಾಮನಿಂದ ಹೈದರನ ಕಡೆಗೆ ಹೋಯಿತು. ಮುಂದೆ ಮೈಸೂರಿನ ೩ ನೆಯ ಯುದ್ಧದಲ್ಲಿ ಟೀಪೂವಿನಿಂದ ಬಂದ ಅರ್ಧ ರಾಜ್ಯವನ್ನು ಹಂಚಿಕೊಳ್ಳಲು, ಪುನಃ ಇದು ನಿಜಾಮನ ಪಾಲಿಗೆ ಬಂದಿತು. ೧೮೦೦ ರಲ್ಲಿ ನಿಜಾಮನು ದಂಡಿನ ವೆಚ್ಚಕ್ಕಾಗಿ ಇಂಗ್ಲಿಷರ ಕಡೆಗೆ ಬಿಟ್ಟುಬಿಟ್ಟನು. ಈ ನಿಜಾಮನಿಂದ ಬಿಟ್ಟುಕೊಟ್ಟ ನಾಡಿನಲ್ಲಿ ಈಗಿನ ಬಳ್ಳಾರಿ, ಅನಂತಪೂರ, ಕಡಪೆ ೩ ಜಿಲ್ಹೆಗಳೂ ಸಮಾವೇಶವಾಗುತ್ತಿದ್ದವು. ಮುಂದೆ ಅವುಗಳನ್ನು ಬೇರೆ ಮಾಡಿರುತ್ತಾರೆ. ಇದರ ಕ್ಷೇತ್ರಫಲ **೫೬೧೪** ಚ. ಮೈ. ಜನ

ಸಂಖ್ಯೆ ೯೬೯೪೩೬. ಇದರಲ್ಲಿ ೮ ತಾಲೂಕಗಳಿರುತ್ತವೆ. ೧ ಅದವಾನಿ, ೨ ಆಲೂರ, ೩ ಬಳ್ಳಾರಿ, ೪ ಶಿರಗುಪ್ಪಿ, ೫ ಹೊಸಪೇಟೆ, ೬ ಹರಪನಹಳ್ಳಿ, ೭ ಹೂವಿನಹಡಗಲಿ, ೮ ಕೂಡಲಗಿ.

೨ ಅನಂತಪುರ ಜಿಲ್ಹೆಯ ಕನ್ನಡಭಾಗ—( ರಾಯದುರ್ಗ, ಕಲ್ಯಾಣದುರ್ಗ. ಮಡಕಶಿರ, ಈ ಮೂರು ಪೂರ್ಣ ತಾಲೂಕಗಳು. ಹಾಗೂ ಗುತ್ತಿ, ಅನಂತಪುರ, ಧರ್ಮವರ, ಪೆನುಗೊಂಡ, ಹಿಂದುಪುರಗಳ ಪಶ್ಚಿಮದ ಷೆ ಭಾಗ. ) ಕ್ಷೇತ್ರ ಸು. ೪೪೧೨ ಚ. ಮೈ. ಜನಸಂಖ್ಯೆ ಸು. ೬೫೦೦೦೦. ಈ ಜಿಲ್ಹೆಯು ಮೊದಲು ಬಳ್ಳಾರಿಯ ಭಾಗವಿತ್ತು. ೧೮೮೨ ಸಂಯ ಜನೆವರಿ ತಿಂಗಳಲ್ಲಿ ಈ ಜಿಲ್ಹೆಯುನ್ನು ಬೇರೆ ಪಡಿಸಿರುತ್ತಾರೆ. ಈ ಜಿಲ್ಹೆಯ ಪಶ್ಚಿಮದ ಷೆ ಭಾಗವು ಸಂಪೂರ್ಣ ಕನ್ನಡವಿರುತ್ತದೆ. ಆದರೆ ತೆಲಗರ ಪ್ರಾಬಲ್ಯದಿಂದ ಇಲ್ಲಿ ಕನ್ನಡ ಭಾಷೆಯು ಕಳೆಗುಂದಿರುತ್ತದೆ. ಖಾನೇಸುಮಾರಿಯಲ್ಲಿ ಆಗುವ ಸ್ವಾಭಾವಿಕ ತಪ್ಪುಗಳ ಮೂಲಕ ಈ ಜಿಲ್ಹೆಯಲ್ಲಿ ಕನ್ನಡಿಗರ ಸಂಖ್ಯೆಯನ್ನು ೧೦೦೦೦೦ಕ್ಕಿಂತ ಕಡಿಮೆ ತೋರಿಸಿರುತ್ತಾರೆ. ಈ ವಿವರವನ್ನು ಪುರವಣಿಯಲ್ಲಿ ನೋಡಿರಿ. ಮೇಲ್ಕಾಣಿಸಿದ ಪಶ್ಚಿಮದ ಅರ್ಧಭಾಗವನ್ನು ಕರ್ನಾಟಕಕ್ಕೆ ಜೋಡಿಸಿದರೆ ಭಾವೀಕರ್ನಾಟಕದಲ್ಲಿ ಇದು ಊರ್ಜಿತ ಸ್ಥಿತಿಯನ್ನು ಹೊಂದುವದರಲ್ಲಿ ಸಂಶಯವಿಲ್ಲ. ಈಗ ಇಲ್ಲಿಯ ಕನ್ನಡಿಗರಲ್ಲಿ ಜಾಗ್ರತೆಯುಂಟಾಗಿದ್ದು, ಅನಂತಪುರದಲ್ಲಿ ಸರಸ್ವತಿ ನಿಕೇತನವೆಂಬದೊಂದು ಕರ್ನಾಟಕ ಸಂಘವು ಸ್ಥಾಪಿತವಾಗಿ ಕರ್ನಾಟಕದ ಚಳವಳಿಯನ್ನು ಆರಂಭಿಸಿರುತ್ತದೆ. ಈ ಭಾಗದಲ್ಲಿ ಇಂಥ ಅನೇಕ ಸಂಘಗಳು ಬೇಕಾಗಿವೆ. ಕನ್ನಡಿಗರು ಇತ್ತ ಕಡೆಗೆ ಲಕ್ಷವನ್ನು ಕೊಡಬೇಕು. ಭಾವೀ ಕರ್ನಾಟಕದಲ್ಲಿ ತಮ್ಮ ಸಮಾವೇಶವಾಗುವದಕ್ಕಾಗಿ ಇಲ್ಲಿಯ ಜನರು ತಾವಾಗಿಯೇ ಒತ್ತಾಯಪಡಿಸುವಂತೆ ಈ ಭಾಗದಲ್ಲಿ ಚಳವಳಿಯಾಗುವದು ಅವಶ್ಯವಾಗಿದೆ.

೩ ಕರ್ನೂಲ ಜಿಲ್ಹೆಯ ( ಪತ್ತಿಕೊಂಡ ತಾಲೂಕ ) ಕ್ಷೇತ್ರಫಲ ೯೦೦ ಚ. ಮೈ. ಜನಸಂಖ್ಯೆ ೧೧೫೦೦೦. ಕನ್ನಡನಾಡಿಗೆ ಸೇರಲೇಬೇಕು.

೪ ಚಿತ್ತೂರ ಹಾಗೂ ಉತ್ತರ ಆರ್ಕಾಡು—ಮೈಸೂರ ಸೀಮೆಗೆ ಹೊಂದಿಕೊಂಡಿರುವ ಈ ಜಿಲ್ಹೆಗಳ ಪಶ್ಚಿಮ ಭಾಗವು ಕನ್ನಡವಾಗಿದ್ದು, ಅದರಲ್ಲಿ ಮದನಪಲ್ಲಿ, ಪುಂಗನೂರ, ಕಂಗುಂದಿಗಳಲ್ಲಿ ಎರಡೂ ಭಾಷೆಗಳು ನುಡಿಯುವದೇನೋ ನಿಜ.

ಆದರೆ ಇದು ತೆಲಗರ ಪ್ರಾಬಲ್ಯದ ಪ್ರತಾಪವು. ನಿಜವಾಗಿ ನೋಡಿದರೆ ಕರ್ನೂಲದಿಂದ ಗುತ್ತಿ, ಅನಂತಪುರ, ಮದನಪಲ್ಲಿ, ಚಿತ್ತೂರ, ಜೋಲಾರಪೇಠ, ಕೊಯಿಮುತ್ತೂರಗಳ ಮೇಲೆ ಹಾಯ್ದಿರುವ ಉಗಿಬಂಡಿಯ ದಾರಿಯೇ ಕರ್ನಾಟಕದ ಪೂರ್ವದ ಗಡಿಯಾಗಿರುತ್ತದೆಂದು, ಪ್ರತ್ಯಕ್ಷವಾಗಿ ಪ್ರವಾಸ ಮಾಡಿ ಬಂದ ನಮ್ಮ ಸ್ನೇಹಿತರೊಬ್ಬರು ಹೇಳುತ್ತಾರೆ. ಇಷ್ಟೆಲ್ಲ ಭಾಗವನ್ನು ಸೇರಿಸಿದರೆ ಯಾವ ಕನ್ನಡಿಗನೂ ಬೇಡೆನ್ನಲಿಕ್ಕಿಲ್ಲವೆಂಬುವದು ನಿಜ. ಆದರೆ ನಾನು ಈ ಪ್ರದೇಶದ ಅರ್ಧವನ್ನು ಕರ್ನಾಟಕಕ್ಕೆ ಜೋಡಿಸಿ, ಪೂರ್ವದ ಅರ್ಧವನ್ನು ತೆಲಗು ನಾಡಿಗೆ ಬಿಟ್ಟಿರುತ್ತೇನೆ. ಇರಲಿ. ನನಗಿಂತಲೂ ಹೆಚ್ಚಿನ ಆಕಾಂಕ್ಷೆಯ ಜನರು ಇರುತ್ತಾರೆಂಬದು ಸಂತೋಷಕಾರಕವೇ ಸರಿ! ಕ್ಷೇತ್ರ ಸು. ೧೧೦೦ ಚ. ಮೈ. ಜನಸಂಖ್ಯೆ ಸು. ೩೦೦೦೦೦.

೫ ಸೇಲಮ್'ಜಿಲ್ಹೆ--( ಹೊಸೂರ, ಕೃಷ್ಣಗಿರಿ ಈ ಎರಡು ತಾಲೂಕ ಪೂರ್ಣ ಮತ್ತು ಧರ್ಮಪುರಿ ತಾಲೂಕಿನ ಉತ್ತರದ ಅರ್ಧಭಾಗ ) ಕ್ಷೇತ್ರ ಸು. ೨೧೦೦ ಚ. ಮೈ. ಜನಸಂಖ್ಯೆಯು ಸು. ೫೦೦೦೦೦. ಮೈಸೂರಕ್ಕೆ ಹೊಂದಿಕೊಂಡಿರುವ ಈ ಜಿಲ್ಹೆಯ ಬಾಲಘಾಟ ಭಾಗವು ಕನ್ನಡಮಯವಾಗಿದ್ದು, ಇದರೊಳಗಿರುವ ಹೊಸೂರೆಂಬ ತಾಲೂಕಿನ ಹೆಸರನ್ನು ನೋಡಿದರೆ ಪ್ರತಿಯೊಬ್ಬನಿಗೂ ಮನವರಿಕೆಯಾಗುವದು. ಈ ಜಿಲ್ಹೆಯ ಸು. ೩/೪ ಭಾಗವು ಕನ್ನಡವಾಗಿದ್ದು ಸು. ೪೫೦೦೦೦ ಕನ್ನಡ ಜನಸಂಖ್ಯೆಯು ಇರಬೇಕಾಗುತ್ತದೆ. ಖಾನೇಸುಮಾರಿಯ ತಪ್ಪಿನ ಮೂಲಕ ಈ ಜಿಲ್ಹೆಯಲ್ಲಿ ೧೩೪೦೮೩ ಕನ್ನಡ ಜನರನ್ನು ಕಾಣಿಸಿರುವದು ಬೆದರುವ ಮಾತೇ ಸರಿ. ತಮಿಳ ಹಾಗೂ ತೆಲಗರ ಪ್ರಾಬಲ್ಯದಿಂದ ಈ ಭಾಗದಲ್ಲಿ ಕನ್ನಡವು ಕಳೆಗುಂದುತ್ತ ನಡೆದದೆ. ಅನಂತಪುರದಂತೆ ಇಲ್ಲಿಯಾದರೂ ಬಲುಮೆಯ ಚಳವಳಿಯಾಗುವದು ಅವಶ್ಯವಾಗಿದೆ. ಕರ್ನಾಟಕ ಸಂಘಗಳನ್ನು ಸ್ಥಾಪಿಸಿ ಜಾಗ್ರತೆಯ ಕಾರ್ಯವನ್ನು ಈಗಿನಿಂದಲೇ ಪ್ರಾರಂಭಿಸತಕ್ಕದ್ದು.

೬ ಕೊಯಿಮುತ್ತೂರ--( ಕೊಳ್ಳೆಗಾಲ ತಾಲೂಕಪೂರ್ಣ ಮತ್ತು ಗೋಪಿಶೆಟ್ಟಿಪಾಳ್ಯ, ಭವಾನಿ ಈ ಎರಡು ತಾಲೂಕಗಳ ಉತ್ತರದ ಅರ್ಧಭಾಗ ) ಕ್ಷೇತ್ರ ಸು. ೨೩೯೮ ಚ. ಮೈ. ಜನಸಂಖ್ಯೆ ಸು. ೬೦೦೦೦೦ ಈ ಜಿಲ್ಹೆಯ ೩/೪ ಭಾಗವು ಕನ್ನಡವಾಗಿದ್ದು, ಕೇವಲ ಖಾನೇಸುಮಾರಿಯ ತಪ್ಪುಗಳ ಮೂಲಕ ಹಾಗೂ ತಮಿಳರ ಪ್ರಾಬಲ್ಯದಿಂದ ಇಲ್ಲಿ ೨೫೩೮೫೬ ಮಾತ್ರ ಕನ್ನಡಜನರೆಂದು ಕಾಣಿಸಿರು

ತ್ತಾರೆ. ಈ ಭಾಗದಲ್ಲಿಯೂ ಕರ್ನಾಟಕ ಚಳವಳಿಯು ಅತ್ಯಾವಶ್ಯಕವಾಗಿದ್ದು, ಕರ್ನಾಟಕ ಸಂಘಗಳನ್ನು ಸ್ಥಾಪಿಸಿ ಜಾಗ್ರತೆಯನ್ನುಂಟು ಮಾಡುವ ಕಾರ್ಯವನ್ನು ತೀವ್ರವಾಗಿ ಕೈಕೊಳ್ಳತಕ್ಕದ್ದು. ಇಲ್ಲದಿದ್ದರೆ ಸುದೈವದಿಂದ ಕರ್ನಾಟಕ ಪ್ರಾಂತವಾಗುವದು ಗೊತ್ತಾಗಿ, ಸರಕಾರವು ವಿಚಾರಣೆಗಾಗಿ ಒಂದು ಕಮೀಟಿಯನ್ನು ನಿಯಮಿಸಿದಾಗ, ಈ ಭಾಗದ ಕನ್ನಡಿಗರು ಏನೆನ್ನುವರೋ ಸಂದೇಹವದೆ. ಇದೇ ಮಾತು ಅನಂತಪುರ, ಚಿತ್ತೂರ, ಉತ್ತರ ಆರ್ಕಾಡು, ಸೇಲಮ್, ಜಿಲ್ಹೆಗಳಿಗೂ ಸಂಬಂಧಿಸಿರುತ್ತದೆ. ಆದ್ದರಿಂದ ಈ ಭಾಗಗಳಲ್ಲಿ ಕರ್ನಾಟಕದ ಜಾಗ್ರತೆಯ ಕಾರ್ಯವು ಬೇಗನೇ ಪ್ರಾರಂಭವಾಗಲೇಬೇಕು. ಕರ್ನಾಟಕದ ಮುಂದಾಳುಗಳು ಇತ್ತಕಡೆಗೆ ಲಕ್ಷ ಕೊಡುವರೇನು?



೭ ನೀಲಗಿರಿ ಜಿಲ್ಹೆ— ಇದು ಮೊದಲು ಕೊಯಿಮುತ್ತೂರು ಜಿಲ್ಹೆಯ ಭಾಗವಾಗಿತ್ತು. ಮುಂದೆ ಯುರೋಪಿಯನ್ನರಿಗೆ ಆರೋಗ್ಯಕರ ಸ್ಥಳವೆಂದೂ, ಇಲ್ಲಿ ಕಾಫಿಯನ್ನು ಬೆಳಿಸುವದರ ಮೂಲಕವಾಗಿಯೂ ಈ ಜಿಲ್ಹೆಯನ್ನು ಬೇರೆ ಪಡಿಸಿರುತ್ತಾರೆ (೧೮೬೮). ಇದರ ಕ್ಷೇತ್ರಫಲ ೧೦೦೯ ಚ. ಮೈ. ಜನಸಂಖ್ಯೆ ೧೧೮೬೧೮ ಇದರಲ್ಲಿ ೫ ತಾಲೂಕಗಳಿರುತ್ತವೆ. ೧ ಪೆರಂಗನಾಡ ೨ ತೋಡನಾಡ ೩ ಮೇಕನಾಡ ೪ ಕುಂಡನನಾಡ ೫ ವಾಯನಾಡ. ಇಲ್ಲಿ ಯುರೋಪಿಯನ್ನ ವಸತಿಯು ಹೆಚ್ಚುತ್ತಿರುವದರಿಂದ ಇದನ್ನು ಕರ್ನಾಟಕದಲ್ಲಿ ಸಮಾವೇಶ ಮಾಡಲಿಕ್ಕೆ ಅನುಮಾನಿಸಬಹುದು. ಆದರೆ ಇದು ಕನ್ನಡ ಜಿಲ್ಹೆಯೆಂಬದನ್ನು ಸಿದ್ಧಮಾಡುವ ಆವಶ್ಯಕತೆಯೇ ಇಲ್ಲ. ತಾಲೂಕಿನ ಹೆಸರುಗಳನ್ನು ನೋಡಿದರೆ ಕಂಡುಬರುವದು. ಇಲ್ಲಿ ಮೂಲ ನಿವಾಸಿಗಳಾದ ಜನರು ಬಡಗ, ತೋಡ ಮೊದಲಾದ ಅಶುದ್ಧ ಭಾಷೆಗಳನ್ನು ಮಾತಾಡುತ್ತಿದ್ದರೂ ಇವರ ಭಾಷೆಯು ಕನ್ನಡ ಭಾಷೆಗೆ ವಿಶೇಷವಾಗಿ ಹೋಲುತ್ತದೆಂದು ಬಲ್ಲವರು ಅಭಿಪ್ರಾಯ ಕೊಟ್ಟಿರುತ್ತಾರೆ. ಕರ್ನಾಟಕವು ಕರಿನೆಲವುಳ್ಳ ನಾಡಾದರೆ, ನೀಲಗಿರಿಯು (ಕಪ್ಪುಗುಡ್ಡ) ಈ ಕರ್ನಾಟಕದಲ್ಲಿ ಬಾರದೇ?

೮ ಮಲಿಯಾಳದ ವಾಯ್ನಾಡು ತಾ.— ಇದು ಕೊಡಗು, ನೀಲಗಿರಿ, ಮತ್ತು ಮೈಸೂರು ಇವುಗಳಿಗೆ ಹೊಂದಿಕೊಂಡಿರುತ್ತದೆ. ಕ್ಷೇ. ಸು. ೭೦೦ ಚ. ಮೈ. ಜನಸಂಖ್ಯೆ ೩೦೦೦೦೦, ಈ ಭಾಗವನ್ನು ಭಾವೀ ಕರ್ನಾಟಕಕ್ಕೆ ಜೋಡಿಸುವದು ರಾಜ್ಯದಾಢ್ಯತೆಯ ದೃಷ್ಟಿಯಿಂದ ಆವಶ್ಯವಾಗಿದೆ. ಅಂದರೆ ಮೈಸೂರಿಗೆ ಮಾಲೆ

ಯಂತೆ ಸುತ್ತುವರಿಯುವ ಭಾಷೀಕರ್ನಾಟಕದಲ್ಲಿ ಎಲ್ಲಿಯೂ ಬಿಟ್ಟು ಬಿಡದೆ ಪ್ರವಾಸವನ್ನು ಮಾಡಲಿಕ್ಕೆ ಅನುಕೂಲವಾಗುತ್ತದೆ. ಕೊಡಗಿಗೂ ನೀಲಗಿರಿಗೂ ಬಿಟ್ಟಿರುವ ಭಾಗವನ್ನು ಈ ಪಟ್ಟಿಯು ಜೋಡಿಸುತ್ತದೆ. ಈ ತಾಲೂಕಿನ ಪೂರ್ವಭಾಗವು ಕನ್ನಡವಾಗಿದ್ದು, ಪಶ್ಚಿಮದ ಅರ್ಧ ಭಾಗದಲ್ಲಿ ಮಲಿಯಾಳೀ, ಕನ್ನಡ ಎರಡೂ ಭಾಷೆಗಳು ನಡೆಯುತ್ತವೆ.

೯ ಮಂಗಳೂರ ಜಿಲ್ಹೆ—೧೫೬೧ ರಲ್ಲಿ ವಿಜಯನಗರದ ಸದಾಶಿವರಾಯನು ಕೆಲದಿಯ ಊರಗೌಡನಾದ ಸದಾಶಿವನಾಯಕನಿಗೆ ಕೊಟ್ಟ ಮೂರು ಪರಗಣೆಗಳಲ್ಲಿ ಮಂಗಳೂರು ಒಂದಾಗಿತ್ತು. ( ಅಂದರೆ ಇಕ್ಕೇರಿ ಅರಸನ ಕಡೆಗೆ ಇತ್ತು ) ೧೭೫೦ ರಲ್ಲಿ ಇವರಿಂದ ಹೈದರನು ತಕ್ಕೊಂಡನು. ಮುಂದೆ ಟೀಪುವಿನ ಕೂಡ ಆದ ಕಾಳಗದಲ್ಲಿ ಇಂಗ್ಲಿಷರ ಕೈವಶವಾಯಿತು. ಇದರ ಕ್ಷೇತ್ರಫಲ ೪೦೨೧ ಚ. ಮೈ. ಜನಸಂಖ್ಯೆ ೧೧೯೫೨೨೬. ಇದರಲ್ಲಿ ಈಗ ೬ ತಾಲೂಕಗಳಿರುತ್ತವೆ. ೧ ಮಂಗಳೂರು, ೨ ಕುಂದಾಪೂರ, ೩ ಉಡುಪಿ, ೪ ಕಾರಕಳ, ೫ ಕಾಸರಗೋಡು, ೬ ಉಪ್ಪಿನಂಗಡಿ. ಈ ಜಿಲ್ಹೆಯು ಬಹಳ ಸೊಗಸಾಗಿದ್ದು, ದಕ್ಷಿಣದ ತೋಟವೆಂದು ಪ್ರಸಿದ್ಧವದೆ.

**೩ನೆಯ ಭಾಗ ಕೊಡಗು:**—೧೫೮೩ ರಲ್ಲಿ ಇಲ್ಲಿ ನಾಯರ ಅರಸರು ಆಳುತ್ತಿದ್ದರು. ಇವರು ೧೭೭೩ ರಲ್ಲಿ ಸ್ವತಂತ್ರರಾಗಿ ಆಳಹತ್ತಿದ್ದನ್ನು ಕಂಡು ಹೈದರನು ಈ ರಾಜ್ಯವನ್ನು ತಕ್ಕೊಂಡನು. ಮುಂದೆ ಈ ಅರಸನು ಇಂಗ್ಲಿಷರನ್ನು ಕೂಡಿಕೊಂಡನು. ೧೭೯೧ ರಲ್ಲಿ ಟೀಪೂವಿನ ಕೂಡ ಯುದ್ಧಕ್ಕೆ ನಿಲ್ಲುವಾಗ ವೀರರಾಜನಿಗೂ ಈಸ್ಟ ಇಂಡಿಯಾ ಕಂಪನಿಗೂ ಒಂದು ಒಪ್ಪಂದದ ಮಾತಾಯಿತು. ೧೮೦೭ ರಲ್ಲಿ ಈ ವೀರರಾಜನು ತನ್ನ ಮಗಳಾದ ದೇವಮ್ಮನಿಗೆ ಸಿಂಹಾಸನವನ್ನು ಬಿಟ್ಟು ತೀರಿಕೊಂಡನು. ಲಿಂಗರಾಜನೆಂಬ ಇವಳ ಕಕ್ಕನು ಬಲಾತ್ಕಾರದಿಂದ ಸಿಂಹಾಸನವನ್ನು ಹಿಡಿದುಕೊಂಡನು. ಇವನ ಮಗನಾದ ೨ನೆಯ ವೀರರಾಜನು ೧೮೨೦ ರಲ್ಲಿ ಪಟ್ಟಕ್ಕೆ ಬಂದನು. ಇವನು ಪ್ರಜೆಗಳನ್ನು ಬಹಳ ಪೀಡಿಸಿದ್ದರಿಂದಲೂ, ರಾಜ್ಯಕಾರಭಾರದಲ್ಲಿ ಬಹಳ ಅವ್ಯವಸ್ಥೆಯಾದ್ದರಿಂದಲೂ ೧೮೩೪ ರಲ್ಲಿ ಲಾರ್ಡ ವ್ರಯಿಲಿಯಮ್ ಬೆಂಟಿಂಕನು ಇದನ್ನು ಬ್ರಿಟಿಶ ಹಿಂದುಸ್ಥಾನಕ್ಕೆ ಜೋಡಿಸಿದನು. ಈಗ ಇದು ಚೀಫಕಮಿಶನರರ ವಶದಲ್ಲಿದ್ದು, ಮೈಸೂರ ರೆಸಿಡೆಂಟರೇ ಇದರ ಚೀಫಕಮಿಶನರರಾಗಿರುವರು. ಇದರ ಕ್ಷೇತ್ರ ೧೫೮೨

ಚ. ಮೈ. ಜನಸಂಖ್ಯೆ ೧೬೪೯೬೬. ಇದರಲ್ಲಿ ೬ ತಾಲೂಕಗಳು ಇರುತ್ತವೆ. ೧ ಕಿಗ್ಗತನಾಡ, ೨ ಪದಿನಾಲ್ಕನಾಡ, ೩ ನಂಜರಾಜಪಟ್ಟಣ, ೪ ಮಡಿಕೇರಿ, ೫ ಎಡೆನಾಲ್ಕನಾಡ, ೬ ಯಲ್ಸವೀರಸೀಮೆ. ಈ ಭಾಗದಲ್ಲಿ ಕಾಫಿಯು ವಿಪುಲವಾಗಿ ಹುಟ್ಟುತ್ತದೆ. ಎತ್ತರವಾದ ಪರ್ವತ ಶಿಖರಗಳಿದ್ದು ನೋಡಲಿಕ್ಕೆ ಮನೋಹರವಾಗಿರುತ್ತವೆ. ಹವೆಯೂ ಬಹಳ ಆರೋಗ್ಯಕರವಾಗಿರುವದರಿಂದ ಇದು ಭಾವೀಕರ್ನಾಟಕದಲ್ಲಿ ವಿಶೇಷ ಶೋಭೆಯನ್ನುಂಟುಮಾಡುವದರಲ್ಲಿ ಸಂದೇಹವಿಲ್ಲ. ಇದು ಕನ್ನಡ ಪ್ರದೇಶವು. ೧ನೆಯ ವೀರರಾಜನೇ ೧೮೫೬ ರಲ್ಲಿ ರಾಜೇಂದ್ರನಾಮೆಯನ್ನು ಬರೆದನು. ಇಲ್ಲಿ ಕನ್ನಡದ ಹೊರತು ಕೊಡಗು ಎಂಬದೊಂದು ಭಾಷೆಯು ನಡೆಯುತ್ತದೆ. “ ಇದು ಸ್ವತಂತ್ರ ಭಾಷೆಯಾಗಿರದೆ ಕನ್ನಡದ ಅಪಭ್ರಂಶವೇ ಆಗಿರುವದು ” ಎಂದು ಕಾಲ್ಡವೆಲ್‌ರು ತಮ್ಮ ಕಂಪೆರೆಟಿವ್ಹ ಗ್ರಾಮರದಲ್ಲಿ ಸ್ಪಷ್ಟವಾಗಿ ಅಭಿಪ್ರಾಯವನ್ನು ಕೊಟ್ಟಿರುವರು.

### ೫. ಸಂಸ್ಥಾನಗಳಲ್ಲಿರುವ ಕರ್ನಾಟಕ:—

(i) ಮೈಸೂರು:—ಇದರಲ್ಲಿ ೧ ಮೈಸೂರು, ೨ ಬೆಂಗಳೂರ, ೩ ಕೋಲಾರ, ೪ ತುಮಕೂರ, ೫ ಹಾಸನ, ೬ ಕಡೂರ, ೭ ಶಿವಮೊಗ್ಗಾ, ೮ ಚಿತ್ರದುರ್ಗ ಹೀಗೆ ೮ ಜಿಲ್ಹೆಗಳು ಇರುತ್ತವೆ. ಇವುಗಳ ಒಟ್ಟು ಕ್ಷೇತ್ರ ೨೯೪೭೫ ಚ. ಮೈ. ಜನಸಂಖ್ಯೆ ಒಟ್ಟು ೫೮೦೬೧೯೩. (೪೧೪೭೭೬೫) ಕನ್ನಡಿಗರು. ಇದು, ವಿದ್ಯೆ, ಕಲಾಕೌಶಲ್ಯ, ಸಾಂಪತ್ತಿಕಸ್ಥಿತಿ ಸುವ್ಯವಸ್ಥೆಗಳಲ್ಲಿ ಹಿಂದುಸ್ಥಾನದಲ್ಲಿ ಪ್ರಸಿದ್ಧಿಯನ್ನು ಪಡೆದದ್ದು ಕನ್ನಡಿಗರಿಗೊಂದು ಅಭಿಮಾನಾಸ್ಪದವಾದ ಸಂಗತಿಯಲ್ಲವೆ?

(ii) ನಿಜಾಮನ ಕರ್ನಾಟಕ:—(ನಿಜಾಮನ ರಾಜ್ಯದ ನೈಋತ್ಯದ ಕ್ಷಿಭಾಗವು.) ಇದರಲ್ಲಿ ಬೀದರ, ಕಲಬುರ್ಗೆ, ರಾಯಚೂರ, ಮಳಖೇಡ, ಸುರಪುರ, ಕೊಪ್ಪಳ ಮೊದಲಾದವುಗಳು ಸಮಾವೇಶವಾಗುತ್ತವೆ. ಕ್ಷೇತ್ರ ಜನಸಂಖ್ಯೆಗಳನ್ನು ವಿಚಾರಿಸಲು ಮೈಸೂರ ತರುವಾಯ ಇದೇ! ಕ. ಪ್ರ. ಕ್ಷೇ. ೨೬೪೦೦. ಕನ್ನಡ ಪ್ರದೇಶದ ಜನಸಂಖ್ಯೆ ೨೦ ಲಕ್ಷ. ಇದರಲ್ಲಿ ಕನ್ನಡಿಗರು ೧೬೮೦೦೦೫. ಇಲ್ಲಿ ಕನ್ನಡಕ್ಕೆ ಇರತಕ್ಕಷ್ಟು ಉತ್ತೇಜನವಿಲ್ಲ. ಭಾವೀಕರ್ನಾಟಕದ ಧೋರಣದಲ್ಲಿ ಇಷ್ಟು ದೊಡ್ಡದಾದ ಕನ್ನಡ ಪ್ರದೇಶವನ್ನು ಮರೆತರೆ ಸಾಗದು. ಉಳಿದ ಕನ್ನಡಿಗರೊಡನೆ ಇವರ ಬಳಿಕೆಗೆ ಆಸ್ಪದವಾಗುವಂತೆ ವ್ಯವಸ್ಥೆಯಾಗಬೇಕು.

(iii) ಮುಂಬೈ ಇಲಾಖೆಯ ಸಂಸ್ಥಾನಗಳು:—ಕೊಲ್ಲಾಪುರದ ಭಾಗ ೨ ಸಾಂಗಲಿಯ ಭಾಗ ೩ ಮಿರಜಿಯ ಭಾಗ ೪ ಜಮಖಂಡಿ ೫ ರಾಮದುರ್ಗ ೬ ಮುಧೋಳ ೭ ಕುರಂದವಾಡ ೮ ಜತ್ತು ೯ ಅಕ್ಕಲಕೋಟೆ (೧೦) ಔಂಧದ ತುಸು ಭಾಗ (೧೧) ಸವಣೂರ. ಇವುಗಳ ಕನ್ನಡ ಪ್ರದೇಶದ ಜನಸಂಖ್ಯೆ ೬೪೧೫೫೪ ಇವರಲ್ಲಿ ೪೫೬೨೮೬ ಕನ್ನಡಿಗರು.

(iv) ಮದ್ರಾಸ ಇಲಾಖೆಯ ಸಂಸ್ಥಾನ:— ೧ ಸೊಂಡೂರು (ಜನಸಂಖ್ಯೆ ೧೩೫೨೬.) ಸಣ್ಣ ಸಂಸ್ಥಾನವು. ಬಳ್ಳಾರಿ ಜಿಲ್ಹೆಯ ಮಧ್ಯದಲ್ಲಿದೆ.

ವಿ. ಸೂ.:—ಈ ಸಣದೊಡ್ಡ ಸಂಸ್ಥಾನಗಳು ಅತ್ತಿತ್ತ ಸಿಡಿದು ಬಿದ್ದಿವೆ. ಇವುಗಳಲ್ಲಿ ಕೆಲವು ಶುದ್ಧ ಕನ್ನಡವಾಗಿವೆ. ಕೆಲವುಗಳಲ್ಲಿ ಕನ್ನಡ ಹಾಗು ಮರಾಟಿಗಳೆರಡೂ ನಡೆಯುತ್ತವೆ. ಈ ಸಂಸ್ಥಾನಗಳ ಒಟ್ಟು ಕ್ಷೇತ್ರವು ನಮಗೆ ಉಪಯೋಗವಿಲ್ಲ. ಕನ್ನಡ ಜನರು ವಾಸವಾಗಿರುವ ಪ್ರದೇಶದ ಕ್ಷೇತ್ರವು ಮಾತ್ರ ಸು. ೫೦೦೦ ಚ. ಮೈ. ಈ ಭಾಗದ ಜನಸಂಖ್ಯೆ ೬೪೧೫೫೪ ಇದ್ದು, ಅವರಲ್ಲಿ ೪೫೬೨೮೬ ಕನ್ನಡ ಜನರು ಇರುವರು. ಕನ್ನಡ ಸಂಸ್ಥಾನಗಳಲ್ಲಿಯೂ ಅಥವಾ ಕೆಲವುಗಳ ಕನ್ನಡಭಾಗಗಳಲ್ಲಿಯೂ ಕನ್ನಡಿಗರು ಬಹುಸಂಖ್ಯಾಕರಾಗಿರುತ್ತಾರೆ. ಕೆಲವು ಸಂಸ್ಥಾನಗಳಲ್ಲಿ ಸೇರಿರುವ ಮರಾಟಿ ಪ್ರದೇಶವನ್ನೂ ಮರಾಟಿಗರ ಸಂಖ್ಯೆಯನ್ನೂ ನಾವು ಎಣಿಸಿಲ್ಲ. ಇನ್ನೂ ಕನ್ನಡ ಪ್ರದೇಶಗಳಲ್ಲಿ ಬಹು ಸಂಖ್ಯಾಕರು ಕನ್ನಡಿಗರಿದ್ದು ಅವರೊಡನೆ ೨೦೦-೩೦೦ ಇತರ ಭಾಷೆಯ ಜನರು ಅಂದರೆ ಮುಸಲ್ಮಾನಿ, ಗುಜರಾಥಿ, ಅಥವಾ ಮರಾಟಿ ಇಲ್ಲವೆ ತೆಲಗರು ಬರುತ್ತಿದ್ದರೆ ಅವರನ್ನು ನಮ್ಮ ಸಂಖ್ಯೆಯಲ್ಲಿ ಎಣಿಸಲೇ ಬೇಕಾಗುತ್ತದೆ. ಈ ಸಿಡಿದು ಬಿದ್ದ ಅಲ್ಪಸಂಖ್ಯಾಕರ ಸಲುವಾಗಿ ಯಾವ ಪ್ರಾಂತದಲ್ಲಿಯೂ ಬೇರೆ ವ್ಯವಸ್ಥೆಯಾಗುವದು, ಶಕ್ಯವಾಗಿಲ್ಲ. ಇವರು ಆ ಪ್ರಾಂತದ ಮುಖ್ಯ ಭಾಷೆಯನ್ನು ಕಲಿಯಲೇಬೇಕು. ಇದೇ ಕಾರಣದಿಂದ ಸಾತಾರೆ ಜಿಲ್ಹೆಯಲ್ಲಿರುವ ಕೆಲವು ಕನ್ನಡ ಊರುಗಳನ್ನು ಮಹಾರಾಷ್ಟ್ರಕ್ಕೆ ಬಿಟ್ಟು ಕೊಟ್ಟದೆ. ಮತ್ತು ಬೆಳಗಾಂವಿಜಿಲ್ಹೆಯೊಳಗಿನ ಕೆಲವು ಮರಾಟಿ ಪ್ರಾಬಲ್ಯವಿರುವ ಊರುಗಳನ್ನು ಕರ್ನಾಟಕದಲ್ಲಿ ಸಮಾವೇಶಮಾಡಿ ಕೊಂಡಿರುತ್ತದೆ. ಕೈಯಲ್ಲಿ ತರಾಜು ಹಿಡಿದು ಅಷ್ಟು ಸೂಕ್ಷ್ಮರೀತಿಯಿಂದ ವಿಚಾರಿಸುತ್ತ ಹೋದರೆ, ರಾಜ್ಯದಾಢಳತೆಗೆ ಸೌಲಭ್ಯವಾಗದೆಂಬ ಆರೋಪವು

ಬಂದೇಬರುತ್ತದೆ. ಇವೆರಡೂ ಕಡೆಗೆ ಲಕ್ಷವಿಟ್ಟು ಮಧ್ಯಮ ಮಾರ್ಗವನ್ನು ಸೂಚಿಸಿರುವೆನು.

೬. **ಅಚ್ಚುಕಟ್ಟಾದ ಹೊಂದಿಕೆ:**—ಭಾವೀಕರ್ನಾಟಕದಲ್ಲಿ ಬ್ರಿಟಿಶ ಕರ್ನಾಟಕದ ಭಾಗಗಳನ್ನು ಮಾತ್ರ ನಾವು ಹೊಂದಿಸಬೇಕಾಗಿದೆ. ಸಂಸ್ಥಾನಗಳ ಕೂಡ ಸಹಕಾರವನ್ನು ಮಾತ್ರ ನಾವು ಇಚ್ಛಿಸುವದರಿಂದ ಅವುಗಳ ವಿಷಯವಾಗಿ ಭಾವೀಧೋರಣವನ್ನು ಮುಂದಿನ ಒಂದು ಪ್ರಕರಣದಲ್ಲಿ ಕಾಣಿಸಿರುತ್ತೇವೆ. ಉರಿಯಾಜನರೂ, ತೆಲಗರೂ, ತಮ್ಮ ಪ್ರಾಂತಗಳ ಸ್ವರೂಪವನ್ನು ನಿರ್ಧರಿಸುವಾಗ ಸಂಸ್ಥಾನಗಳ ಕ್ಷೇತ್ರ ಜನಸಂಖ್ಯೆಗಳನ್ನು, ಒಟ್ಟು ಕ್ಷೇತ್ರ, ಜನಸಂಖ್ಯೆಗಳಲ್ಲಿ ಕೂಡಿಸಿರುತ್ತಾರೆ. ಆಯುವ್ಯಯದ ವಿಚಾರಮಾಡುವಾಗ ಸಂಸ್ಥಾನದ ಉತ್ಪನ್ನವು ಸಂಸ್ಥಾನಿಕರಿಗೆ ಹೋಗುವದರಿಂದ, ಅದನ್ನು ಬಿಟ್ಟಿರುತ್ತಾರೆ. ಇದು ಸರಿಯಾದ ಮಾರ್ಗವೆಂದು ನಮಗೆ ಕಂಡುಬರುತ್ತದೆ. ಇರಲಿ, ಈಗ ಕರ್ನಾಟಕದ ತುಂಡುಗಳನ್ನು ಹೊಂದಿಸೋಣ:—(೧) ಮುಂಬೈ ಕರ್ನಾಟಕ—ಸೊಲ್ಲಾಪುರ ಜಿಲ್ಹೆಯ ಕನ್ನಡ ಭಾಗವನ್ನು ಜೋಡಿಸತಕ್ಕದ್ದದೆ. ಇದು ವಿಜಾಪುರ ಜಿಲ್ಹೆಯ ಇಂಡೀ ತಾಲೂಕಿಗೆ ಹೊಂದಿರುವದರಿಂದ ಜೋಡಿಸುವದರಲ್ಲಿ ಏನೂ ತೊಂದರೆಯಿಲ್ಲ. (೨) ಮದ್ರಾಸ ಕರ್ನಾಟಕ—ಕರ್ನೂಲ ಜಿಲ್ಹೆಯ ಪತ್ತಿಕೊಂಡ ತಾಲೂಕನ್ನು ಅನಂತಪುರ ಜಿಲ್ಹೆಯ ಕನ್ನಡ ತಾಲೂಕುಗಳಿಗೆ ಜೋಡಿಸಿ ೧ ಜಿಲ್ಹೆ! ಚಿತ್ತೂರ ಜಿಲ್ಹೆಯ ಕನ್ನಡ ತಾಲೂಕಗಳು, ಉತ್ತರ ಆರ್ಕಾಡಿನ ಕಂಗುಂದಿ ತಾ॥, ಸೇಲಮ್ ಜಿಲ್ಹೆಯ ಕನ್ನಡ ತಾಲೂಕಗಳನ್ನು ೧ ಜಿಲ್ಹೆ ! ಕೋಯಿಮುತ್ತೂರ ಜಿಲ್ಹೆಯ ಕನ್ನಡ ತಾಲೂಕಗಳು, ನೀಲಗಿರಿ ಜಿಲ್ಹೆ, (ನೀಲಗಿರಿಯು ಕರ್ನಾಟಕ್ಕೆ ಸೇರಿದರೂ, ಮದ್ರಾಸದ ಗವ್ಹರ್ನರರಿಗೆ ವಿಶ್ರಾಂತಿಗಾಗಿ ಉದಕಮಂಡಲಕ್ಕೆ ಬರಲಿಕ್ಕೆ ಆತಂಕವಾಗದು.) ಮಲಿಯಾಳದ ವಾಯ್ನಾಡು ತಾಲೂಕು ಕೂಡಿಸಿ ೧ ಜಿಲ್ಹೆ ! ಕೊಡಗು ಸ್ವತಂತ್ರವಾಗಿ ಒಂದು ಜಿಲ್ಹೆ ! ಬಳ್ಳಾರಿ, ಮಂಗಳೂರಗಳು ಇದ್ದಂತೆ! ಬಳ್ಳಾರಿ ಜಿಲ್ಹೆಯ ಕೆಲವು ತಾಲೂಕಗಳನ್ನು ತೆಲಗು ಪ್ರಾಂತಕ್ಕೆ ಜೋಡಿಸಬೇಕೆಂಬ ರಾಷ್ಟ್ರೀಯ ಸಭೆಯ ಕಮೀಟಿಯು ನಿರ್ಣಯಿಸಿದ್ದು ಅನ್ಯಾಯವಾಗಿದ್ದು, ಬಳ್ಳಾರಿ ಜಿಲ್ಹೆಯ ಯಾವ ಭಾಗವೂ ತೆಲಗಿಗೆ ಹೋಗುವದು ಶಕ್ಯವಾಗಿಲ್ಲ. ತೆಲಗದ ಪ್ರಾಬಲ್ಯದಿಂದ ೧-೨ ತಾಲೂಕಿನ ಜನರು ಎರಡು ಭಾಷೆಗಳನ್ನು ಮಾತಾಡತೊಡಗಿದರೆ,

ಅವರನ್ನು ತೆಲಗರೆಂದು ಒಮ್ಮೆಲೆ ನಿರ್ಧರಿಸುವದು ಅಸಮಂಜಸವಾಗದೇ? ಇರಲಿ. ಭಾವೀ ಕರ್ನಾಟಕದಲ್ಲಿ ಒಟ್ಟು ೧೦ ಜಿಲ್ಹೆಗಳಾಗುತ್ತವೆ.

೭. **ಕರ್ನಾಟಕದ ಕೇಂದ್ರಸ್ಥಾನ**:—ಹಿಂದಕ್ಕೆ ಕರ್ನಾಟಕ ಸಭೆಗೆ ಅಧ್ಯಕ್ಷರಾದ ವ್ಹಿ. ಪಿ. ಮಾಧವರಾಯರು, ಧಾರವಾಡವನ್ನು ಕೇಂದ್ರಸ್ಥಾನವನ್ನು ಮಾಡಬೇಕೆಂದು ಅಭಿಪ್ರಾಯಪಟ್ಟಿರುತ್ತಾರೆ. ಸದ್ಯಕ್ಕೆ ಕರ್ನಾಟಕ ಪ್ರಾಂತಿಕ ಕಾಂಗ್ರೇಸ ಕಮಿಟೀಯು ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಿದನಂತರ ಗದಗು ಮಧ್ಯಸ್ಥಾನದಲ್ಲಿರುವದರಿಂದ ಗದಗನ್ನು ಕೇಂದ್ರಸ್ಥಾನವನ್ನಾಗಿ ಆರಿಸಿಕೊಂಡದೆ. ಬಳ್ಳಾರಿಯು ಭಾವೀಕರ್ನಾಟಕದಲ್ಲಿ ಮಧ್ಯಸ್ಥಾನದಲ್ಲಿ ಬರುವದರಿಂದ ಅದು ಕ್ರೇಂದ್ರಸ್ಥಾನವಾಗಲಿಕ್ಕೆ ಯೋಗ್ಯವಾಗಿದೆ ಎಂದು ಕೆಲವರು ಸೂಚಿಸುತ್ತಾರೆ. ಆದರೆ ಎಲ್ಲ ದೃಷ್ಟಿಯಿಂದ ವಿಚಾರಿಸಲು ಧಾರವಾಡವೇ ಯೋಗ್ಯವಾಗಿ ಕಾಣುತ್ತದೆ.

೮. **ಹಂಪಿ, ಮಡಿಕೇರಿ, ಉದಕಮಂಡಲ**:—ಭಾವೀ ಕರ್ನಾಟಕವು ಮಾಲಾಕಾರವಾಗಿ ಹಬ್ಬುವದರಿಂದ ಒಂದೇ ಕೇಂದ್ರಸ್ಥಾನದಲ್ಲಿ ಕಾಯದೆ ಮಂಡಳವು ಸತತವಾಗಿ ಉಳಿಯುತ್ತ ಹೋದರೆ, ಉಳಿದ ಕರ್ನಾಟಕ ಭಾಗವು ಉದಾಸೀನವಾಗಬಹುದು. ಈಗ ಪುಣೆಯಲ್ಲಿ ಸರಕಾರದ ಕಾಯದೆ ಮಂಡಳವು ಕೂಡುವಂತೆ ಭಾವೀಕರ್ನಾಟಕದಲ್ಲಿಯೂ ಒಂದೆರಡು ಸ್ಥಾನಗಳನ್ನು ಗೊತ್ತು ಮಾಡಬೇಕಾಗುತ್ತದೆ. ಅವುಗಳಲ್ಲಿ ಒಂದು ಸ್ಥಾನವು ಹಂಪಿ! ಎರಡನೆಯದು ಮಡಿಕೇರಿ ಅಥವಾ ಉದಕಮಂಡಲ! ಇವುಗಳಲ್ಲಿ ಹಂಪಿಯು ಮಹತ್ವವನ್ನು ಕನ್ನಡಿಗರು ಮರೆಯಲಾಗದು. ಎಲ್ಲ ಕನ್ನಡ ಭಾಗದ ಸಭಾಸದರು ಹಂಪಿಯಲ್ಲಿ ಒಟ್ಟುಗೂಡಿ ರಾಜಕಾರಣವನ್ನು ಸಾಗಿಸುವ ಸುದಿನವು ಬಂದರೆ, ಕರ್ನಾಟಕದ ನಷ್ಟಸ್ಮೃತಿಯ ಸಾಮ್ರಾಜ್ಯವನ್ನು ಉದ್ಧರಿಸಿದಂತೆ ಆಗುವದಲ್ಲದೆ, ಹಂಪಿಯು ಕಾಯದೆಮಂಡಳದ ಮಂದಿರವೆಂದರೆ ಕರ್ನಾಟಕದ ವಿಜಯಮಂದಿರವೆಂದೇ ಭಾಸವಾಗುವದು. ಇದಲ್ಲದೆ ಕನ್ನಡಿಗರು ತಮ್ಮ ಪೂರ್ವಜರ ಋಣವನ್ನು ತೀರಿಸಿ ಕೃತಾರ್ಥರಾಗುವರೆಂದು ಭಾವಿಸಬಹುದು. ಇನ್ನು ಎರಡನೆಯ ಸ್ಥಾನವೆಂದರೆ ಮಡಿಕೇರಿ ಅಥವಾ ಉದಕಮಂಡಲ. ಆರೋಗ್ಯದೃಷ್ಟಿಯಿಂದ ಇವೆರಡೂ ಉತ್ತಮವಾಗಿರುವದರಿಂದ ಇವೆರಡರಲ್ಲಿ ಬೇಕಾದ ಒಂದನ್ನು ಆರಿಸಬಹುದು.

ಹೀಗಾಗುವದರಿಂದ ಸಭಾಸದರಿಗೆ ಕರ್ನಾಟಕದಲ್ಲಿ ಸಂಚರಿಸಲಿಕ್ಕೆ ಆಸ್ಪದ ವುಂಟಾಗಿ ಜನರ ಸುಖದುಃಖಗಳನ್ನು ತಿಳಿದುಕೊಳ್ಳಲಿಕ್ಕೆ ಸಾಧನವಾಗುತ್ತದೆ.

**೯. ಭಾವೀ ಕರ್ನಾಟಕದ ಜಿಲ್ಹೆಗಳ ವಿವರ:**—ನೆನಪಿಡಲಿಕ್ಕೆ ಯೋಗ್ಯವಾಗಬೇಕೆಂದು ಸದ್ಯಕ್ಕೆ ೧ ಜಿಲ್ಹೆಗೆ ತಾತ್ಪೂರ್ತಿಕ ಹೆಸರನ್ನು ಕೊಟ್ಟು ವಿವರಿಸುತ್ತೇನೆ.

| ಜಿಲ್ಹೆಗಳು | ಕ್ಷೇತ್ರ | ಜನಸಂಖ್ಯೆ. |
|---|---|---|
| ೧ ಬೆಳಗಾಂವಿ | ೪೬೧೧ ಚೌ. ಮೈ. | ೯೫೨೯೯೬ |
| ೨ ಧಾರವಾಡ | ೪೬೦೬ ,, | ೧೦೩೬೯೨೪ |
| ೩ ವಿಜಾಪುರ ( ಸೊಲ್ಲಾಪೂರ ಭಾಗ ಸಹಿತ ) | ೬೫೦೭ ,, | ೯೪೬೮೭೬ |
| ೪ ಕಾರವಾರ | ೩೯೪೬ ,, | ೪೦೧೭೨೭ |
| ೫ ಬಳ್ಳಾರಿ | ೫೭೧೪ ,, | ೯೬೯೪೩೬ |
| ೬ ಅನಂತಪುರ ( ಪತ್ತಿಕೊಂಡ ) ಸ. | ೫೩೨೧ ,, | ೭೬೫೦೦೦ |
| ೭ ಹೊಸೂರು ( ಚಿತ್ತೂರ, ಉತ್ತರ ಆರ್ಕಾಡು ಸೇಲಮ್ ಭಾ. ಸ. | ೩೨೦೦ ,, | ೭೫೦೦೦೦ |
| ೮ ನೀಲಗಿರಿ ( ಕೊಯಿಮುತ್ತೂರ ವಾಯ್ನಾಂಡು ಭಾ. ಸ. ) | ೪೧೦೭ ,, | ೧೦೧೮೬೧೮ |
| ೯ ಕೊಡಗು | ೧೫೮೨ ,, | ೧೭೪೯೭೬ |
| ೧೦ ಮಂಗಳೂರು | ೪೦೨೧ ,, | ೧೧೯೫೨೨೭ |
| ಒಟ್ಟು- | ೪೩೬೧೫ ಚ. ಮೈ. | ೮೨೧೧೭೮೦ |

**೧೦. ಉಪಸಂಹಾರ:**—ಮೇಲಿನ ವಿವರಣೆಯಿಂದ ಭಾವೀ ಕರ್ನಾಟಕದ ರೂಪರೇಷೆಯು ಸ್ಥೂಲಮಾನದಿಂದಾದರೂ ಕಂಡುಬಂದಿರಬಹುದು. ಇಲ್ಲಿ ತುಸು ಸ್ಪಷ್ಟೀಕರಣವು ಅವಶ್ಯವಾಗಿದೆ.— ವಿಜಾಪುರ ಜಿಲ್ಹೆಯು ಕ್ಷೇತ್ರದಿಂದ ಬಹಳ ದೊಡ್ಡದಾಗುವಂತೆ ಕಾಣುವದು. ಹೀಗಾದರೆ, ಧಾರವಾಡ, ನವಲಗುಂದ ತಾಲೂಕಗಳನ್ನು ಬೆಳಗಾಂವಿಗೆ ಜೋಡಿಸಿ, ವಿಜಾಪುರ ಜಿಲ್ಹೆಯು ಬಾದಾ

ಮಿ, ಹುನಗುಂದ ತಾಲೂಕಗಳನ್ನು ಧಾರವಾಡ ಜಿಲ್ಹೆಗೆ ಜೋಡಿಸಿ, ಹುಬ್ಬಳ್ಳಿ ಜಿಲ್ಹೆಯೆಂದು ಹೆಸರನ್ನಿಡಬಹುದು. ಇದರಿಂದ ಧಾರವಾಡದ ಕೇಂದ್ರಸ್ಥಾನವು (ಇಲಾಖೆಯು ಸ್ಥಳ) ಉಳಿದೇ ಉಳಿಯುವದು. ಧಾರವಾಡ ನವಲಗುಂದಗಳು ಬೆಳಗಾಂವಿ ಜಿಲ್ಹೆಗೆ ಹೊಂದಿರುತ್ತವೆ. ಹಾಗು ಬಾದಾಮಿ ಹುನಗುಂದಗಳು ಧಾರವಾಡ ಜಿಲ್ಹೆಗೆ ಹೊಂದಿರುತ್ತವೆ. ಇರಲಿ. ಮುಂದೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡಿಕೊಳ್ಳಲಿಕ್ಕೆ ಬರುವಂತಿದೆ. ಕೊಡಗದ ಜನರಿಗೆ ಕೆಲವು ವಿಶೇಷ ಅನುಕೂಲತೆಗಳು ಸರಕಾರದಿಂದ ದೊರೆತಿರುತ್ತವೆ. ಅವು ಹೋಗುವಂತಾದರೆ, ಕೊಡಗದ ಜನರು ಕರ್ನಾಟಕದಲ್ಲಿ ಕೂಡಲಿಕ್ಕೆ ಇಚ್ಛಿಸಲಾರರೆಂದು ತಿಳಿದು, ಸಣ್ಣದಾದರೂ ಕೊಡಗನ್ನು ಸ್ವತಂತ್ರ ಜಿಲ್ಹೆಯನ್ನಾಗಿಯೇ ಇಟ್ಟಿರುತ್ತದೆ. ಚಿತ್ತೂರ ಜಿಲ್ಹೆಯ ಕನ್ನಡ ಭಾಗ, ಉತ್ತರ ಆರ್ಕಾಡಿನ ಕಂಗುಂದಿ ತಾ||, ಹಾಗು ಸೇಲಮ್ ಜಿಲ್ಹೆಯ ಕನ್ನಡ ತಾಲೂಕಗಳು, ಇವುಗಳಿಂದ ಮಾಡಿದ ಹೊಸ ಜಿಲ್ಹೆಗೆ ಅನ್ವರ್ಥಕವಾಗುವಂತೆ ಈಗ ಸೇಲಮ್‌ದಲ್ಲಿ ತಾಲೂಕಿನ ಸ್ಥಳವಾಗುವ ಹೊಸೂರನ್ನು, ಜಿಲ್ಹೆಯ ಸ್ಥಳವನ್ನಾಗಿ ಏರ್ಪಡಿಸಲು ಸೂಚಿಸಿರುತ್ತೇನೆ. ಬೇಕಾದರೆ ಆ ಸ್ಥಳವನ್ನು ಪುಂಗನೂರಿಗೆ ಬದಲಿಸಿದರೂ ಅಡ್ಡಿಯಿಲ್ಲ. ಒಟ್ಟಿಗೆ ಭಾವೀ ಬ್ರಿಟಿಶ್ ಕರ್ನಾಟಕದ ಕ್ಷೇತ್ರವು ೪೩೬೧೫ ಚ. ಮೈ. ಜನಸಂಖ್ಯೆ ೮೨೧೧೭೮೦ ಆದಂತಾಯಿತು. ಸ್ವತಂತ್ರ ಕರ್ನಾಟಕ ಪ್ರಾಂತಕ್ಕೆ ಇಷ್ಟು ಕ್ಷೇತ್ರ ಜನಸಂಖ್ಯೆಗಳು ಸಾಕಷ್ಟು ಇದ್ದರೂ, ಉಳಿದ ಪ್ರಾಂತದವರು ತಮ್ಮ ಪ್ರಾಂತದ ಕ್ಷೇತ್ರ ಜನಸಂಖ್ಯೆಗಳನ್ನು ಸೂಚಿಸುವಾಗ ಸಂಸ್ಥಾನಗಳನ್ನು ಬಿಟ್ಟುಬಿಡದೆ ಸೇರಿಸುತ್ತಿರುವದರಿಂದಲೂ, ಭಾವೀ ಕರ್ನಾಟಕ ಪ್ರಾಂತಕ್ಕೂ ಈ ಸಂಸ್ಥಾನಗಳಿಗೂ ನಿಕಟಸಂಬಂಧವನ್ನಿಡುವಂತೆ ನವೀನ ಧೋರಣವಿರುವದರಿಂದಲೂ, ಇವುಗಳನ್ನು ಕೂಡಿಸಿಯೇ ಹೇಳಬೇಕಾಗಿದೆ. (೧) ಮೈಸೂರ, (೨) ನಿಜಾಮನ ಕರ್ನಾಟಕ ಇವೆರಡನ್ನು ಸೇರಿಸಿದರೆ ಕರ್ನಾಟಕದ ಕ್ಷೇತ್ರ ೯೯೪೯೦ (೧ ಲಕ್ಷ ಚ. ಮೈ. ಗೆ ಸಮೀಪ) ಜನಸಂಖ್ಯೆ ೧⅓ ಕೋಟಿಯ ಮೇಲೆ ಆಗುವದು. (ಇವುಗಳ ಹೊರತು ಸಣ್ಣ ಸಂಸ್ಥಾನಗಳು ೧೨ ಇರುತ್ತವೆ.)

---

# ಏಳನೆಯ ಪ್ರಕರಣ.

## ಸಂಯುಕ್ತ ಕರ್ನಾಟಕ ಪ್ರಾಂತವು ಅತ್ಯಾವಶ್ಯಕವು.



೧ ರಾಷ್ಟ್ರೀಯ ಹಾಗೂ ಪ್ರಾಂತಿಕ ಭಾವನೆಗಳು, ೨ ಸಾಂಘಿಕ ಸರಕಾರ, ೩ ಸುಧಾರಣೆಯು ಕಾಯದೆ (೧೯೧೯), ೪ ಸಂಸ್ಕೃತಿಯ ಪರಿಪೋಷಣ, ೫ ವಿದ್ಯಾಭಿವೃದ್ಧಿಯು, ೬ ಸಾಮಾಜಿಕ ಸ್ಥಿತಿಯು, ೭ ರಾಜ್ಯದಾಢಳತೆಯಲ್ಲಿ ಸಾಮರ್ಥ್ಯವೂ ಸೌಲಭ್ಯವೂ, ೮ ಸಾಂಪತ್ತಿಕಸ್ಥಿತಿಯ ಸುಧಾರಣೆ, ೯ ೧೭೫೧ ರಲ್ಲಿಯ ೧ನೆಯ ವಿಜಯು, ೧೦ ಇಬ್ಬರಿಗೂ ಸಮಾಧಾನವು.

**೧. ರಾಷ್ಟ್ರೀಯ ಹಾಗು ಪ್ರಾಂತಿಕ ಭಾವನೆಗಳು:**—ರಾಷ್ಟ್ರೀಯ ಭಾವನೆಯು ಮೊದಲು ಪ್ರಾಂತಿಕ ಭಾವನೆಯು ನೆಲೆಗೊಳ್ಳುವದು ಸ್ವಾಭಾವಿಕವು. ಚಿಕ್ಕತನದಲ್ಲಿ ತಾಯ್ನುಡಿಯನ್ನು ಕಲಿಯಲಿಕ್ಕೆ ಪ್ರಾರಂಭವಾದ ಕೂಡಲೆ ಪ್ರಾಂತಿಕ ಭಾವನೆಯ ಬೀಜಾರೋಪಣವಾಯ್ತೆಂದು ತಿಳಿಯಬೇಕು. ಈ ಭಾವನೆಯೇ ಮುಂದೆ ದೇಶಾಭಿಮಾನವೆಂಬ ಗಗನಚುಂಬಿಯಾದ ವೃಕ್ಷವನ್ನು ಪರಿಪೋಷಿಸುವದು. ಯಾವ ಮನುಷ್ಯನಿಗೆ ತನ್ನ ಸ್ವಂತ ನಾಡಿನ ಪರಿಚಯವಿರುವದಿಲ್ಲವೋ, ನುಡಿಯ ಗಂಧವು ಸೋಂಕಿರುವದಿಲ್ಲವೋ, ಆ ಮನುಷ್ಯನು ಅನೇಕ ಭಾಷೆಗಳನ್ನು ಕಲಿತವನಿದ್ದರೂ, ಅವನ ದೇಶಾಭಿಮಾನವು ಅಡಂಬರದ ಮೆಟ್ಟಿಗೆ ಮುಟ್ಟುವದು. ಮಹಾತ್ಮಾ ಗಾಂಧಿಯವರು ನಿಷ್ಪಕ್ಷಪಾತದ ಮೂರ್ತಿಯಾಗಿದ್ದರೂ, ಗುಜರಾಥವೆಂದಕೂಡಲೆ ಅವರಲ್ಲಿಯೂ ಪ್ರಾಂತಿಕ ಭಾವನೆಯು ತಲೆದೋರದಿರದು. ತಾತ್ಪರ್ಯವೆಂದರೆ— ಇದು ಎಲ್ಲರಿಗೂ ಸ್ವಾಭಾವಿಕವು. ಹಿಂದುಸ್ಥಾನವು ಅನೇಕ ಪ್ರಾಂತಗಳ ಸಮುದಾಯವಾಗಿದೆ. ಇವುಗಳಲ್ಲಿ ಭಿನ್ನ ಜಾತಿಯ, ಭಿನ್ನ ಸಂಸ್ಕೃತಿಯ, ಅನೇಕ ಭಾಷೆಯ ಜನರು ವಾಸಿಸುತ್ತಿರುವದರಿಂದ, ತಕ್ಕ ಪ್ರಮಾಣದಿಂದ ಪ್ರತಿಯೊಂದು ಪ್ರಾಂತದ ಅಭಿವೃದ್ಧಿಯೇ ಹಿಂದುಸ್ಥಾನದ ಅಭಿವೃದ್ಧಿಯೆನಿಸುವುದು. ಭಾರತಮಾತೆಗೆ ಈ ಪ್ರಾಂತಗಳು ಅವಯುವಗಳಂತಿರುವವು. ಈ ಮಾತೆಯ ಬೆಳವಣಿಗೆಯೆಂದರೆ—ಪ್ರತಿಯೊಂದು ಪ್ರಾಂತದ ತಕ್ಕ ಪ್ರಮಾಣದಲ್ಲಾದ ಬೆಳವಣಿಗೆಯೆಂದೇ ಹೇಳಬೇಕಾಗುತ್ತದೆ. ಹಿಂದುಸ್ಥಾನವು ಒಂದೇ ಜಾತಿಯ, ಒಂದೇ ಭಾಷೆಯ ದೇಶವೆನಿಸುತ್ತಿದ್ದರೆ, ಅದರ

ರಾಜಕೀಯ ಉದ್ಧಾರಕ್ಕೆ ಇಷ್ಟೊಂದು ಕಾಲಾವಧಿಯು ಬೇಕಾಗುತ್ತಿರಲಿಲ್ಲ. ಹಾಗು ಎಲ್ಲರೂ ಈ ಪ್ರಾಂತಿಕ ಭಾವನೆಯನ್ನು ಬಿಟ್ಟುಕೊಟ್ಟು ದೇಶಾಭಿಮಾನ ವೆಂಬ ಸ್ವರ್ಗೀಯಸುಖದಲ್ಲಿ ಲೋಲಾಡಲು ಬಾಧೆ ಇರುತ್ತಿದ್ದಿಲ್ಲ. ಪರಿಸ್ಥಿತಿಯು ಹಾಗಿಲ್ಲದ ಮೂಲಕ, ಪ್ರಾಂತಿಕ ಭಾವನೆಯ ನೆಲಗಟ್ಟಿನ ಮೇಲೆಯೇ ನಮ್ಮ ದೇಶಾಭ್ಯುದಯದ ಕಟ್ಟಡವನ್ನು ಕಟ್ಟತಕ್ಕದ್ದೆಂದು ರಾಜಕಾರಣಪಟುಗಳೆಲ್ಲರೂ ನಿಶ್ಚಯಿಸಿರುವರು. ಆದ್ದರಿಂದ ಸ್ವತಂತ್ರವಾದ ಕರ್ನಾಟಕಪ್ರಾಂತವನ್ನು ಪಡೆಯ ಬೇಕೆಂಬ ನಮ್ಮ ಆಕಾಂಕ್ಷೆಯು ನ್ಯಾಯವಾದದ್ದಲ್ಲವೇ?

೨. **ಸಾಂಘಿಕ ಸರಕಾರ** ( ಫೆಡರಲ್ ಗವ್ಹರ್ನಮೆಂಟ ) ರೈ. ಆ ಮಾಂಟೆಗೂ ಸಾ|| ರು, ೧೯೧೭ನೇ ಇ|| ಯ ಜುಲೈ ತಿಂಗಳಲ್ಲಿ ಕಾಮನ್ಸ ಸಭೆಯಲ್ಲಿ ಭಾಷಣವನ್ನು ಮಾಡುವಾಗ "ಸಾಂಘಿಕ ಸರಕಾರವೇ" ಹಿಂದುಸ್ಥಾನ ವಿಷ ಯದ ಧ್ಯೇಯವೆಂದು ಸಾರಿದರು. ಅದರ ಮೊದಲಮೆಟ್ಟೆಂದು ಮಾಂಟೆಗೂ ಚೇಮ್ಸಫರ್ಡ ರಿಪೋರ್ಟು ಹೊರಟು, ೧೯೧೯ರಲ್ಲಿ ಸುಧಾರಣೆಯ ಕಾಯದೆಯೂ ರೂಢಿಯಲ್ಲಿ ಬಂದಿತು. ಆ ಪ್ರಸಂಗದ ಭಾಷಣದಲ್ಲಿ:— "ಹಿಂದುಸ್ಥಾನವು ಸ್ವರಾಜ್ಯಸುಖವನ್ನು ( ಹೋಮರೂಲ ) ಭೋಗಿಸುವ ಅಖಂಡ ದೇಶವೆನಿಸದೆ, ಮೇಲ್ವಿಚಾರಕ ಸರಕಾರದಿಂದ ಕೇಂದ್ರೀಕರಿಸಲ್ಪಟ್ಟ, ಸ್ವರಾಜ್ಯಸುಖವನ್ನು ( ಹೋಮರೂಲ ) ಭೋಗಿಸುತ್ತಿರುವ ಅನೇಕ ಪ್ರಾಂತಗಳ ಸಮುದಾಯವಾ ಗುವದು" ಎಂದು ಸ್ಪಷ್ಟವಾಗಿ ಹೇಳಿರುವರು. ಇದು ಈಗಿನ ಯೂನೈಟೆಡ್ ಸ್ಟೇಟ್ಸ ( ಅಮೇರಿಕೆ ) ದ ಸರಕಾರಕ್ಕೆ ಕೆಲವಂಶದಿಂದ ಹೋಲುತ್ತದೆಂದು ಹೇಳ ಬಹುದು. ಇದಕ್ಕೆ ಸಾಂಘಿಕ ಸರಕಾರವೆಂದು ಕರೆಯೋಣ. ಈ ಧ್ಯೇಯಕ್ಕೆ ಮುಟ್ಟುವ ಪೂರ್ವದಲ್ಲಿ ಭಾಷೆಯಂತೆ ಪ್ರತಿಯೊಂದು ಪ್ರಾಂತವನ್ನು ವಿಭಾಗಿಸಿ ( ಅದು ಸಣ್ಣದಿರಲಿ, ದೊಡ್ಡದಿರಲಿ ) ಅದಕ್ಕೆ ಸ್ವತಂತ್ರವಾದ ಪ್ರಾಂತಿಕ ಆಢಳಿತೆ ಯನ್ನೇ ಕೊಡತಕ್ಕದ್ದೆಂದು ಅವರು ಅಭಿಪ್ರಾಯಪಟ್ಟಿರುವರು. ಎಂದ ಬಳಿಕ ನಮ್ಮ ಬೇಡಿಕೆಯನ್ನು ಅಶಕ್ಯ ಕೋಟಿಯಲ್ಲಿ ಎಣಿಸದೆ, ಬೇರೆ ಬೇರೆ ಕಡೆಗೆ ಸಿಡಿದು ಬಿದ್ದ ಕನ್ನಡ ಬಾಂಧವರೆಲ್ಲರೂ, ಏಕಕಾಲಕ್ಕೆ ಜಾಗ್ರತೆಯಿಂದ ಒತ್ತಾಯ ಪಡಿಸಿ, ಕರ್ನಾಟಕ ಪ್ರಾಂತವನ್ನು ಪಡೆಯುವದು ಶ್ರೇಯಸ್ಕರವಾಗಿದೆ.

೩. **ಸುಧಾರಣೆಯ ಕಾಯದೆ** ( ೧೯೧೯ )—ಈ ಕಾಯದೆಯಿಂದ ದ್ವಿದಲ ರಾಜ್ಯಪದ್ಧತಿಯು ಪ್ರಾರಂಭವಾಗಿದೆ. ಕಾಯದೆಮಂಡಳದಲ್ಲಿ ಸಭಾ

ಸದರ ಸಂಖ್ಯೆಯು ಹೆಚ್ಚಾಗಿದ್ದರೂ, ಇದರಿಂದ ಕರ್ನಾಟಕದ ಗರಜು ಪೂರೈಸುವಂತಿಲ್ಲ. ಮತದಾನ ಕಮೀಟಿಯು (ಫ್ರ್ಯಾಂಚಾಯಿಜ ಕಮಿಟಿ) ಯಾವ ತತ್ವಕ್ಕನುಸರಿಸಿ ಮತದಾನ ಮಾಡಿರುತ್ತದೆಂಬದನ್ನು ತಿಳಿದುಕೊಳ್ಳುವದೇ ಕಠಿಣವಾಗಿದೆ. ಅದು ಜನಸಂಖ್ಯೆಯನ್ನು ನೋಡಿ ಮತದಾನವನ್ನು ಮಾಡಿಲ್ಲ. ಹಾಗು ಉತ್ಪನ್ನವನ್ನು ನಿರೀಕ್ಷಿಸಿಯೂ ಮಾಡಿಲ್ಲ. ಈ ಮಾತು ಕೆಳಗಣ ಟಿಪ್ಪಣದಿಂದ ಸ್ಪಷ್ಟವಾಗುವದು:—

| ಪ್ರಾಂತ | ಜನಸಂಖ್ಯೆ (ದಶಲಕ್ಷ) | ಉತ್ಪನ್ನ | ಸಭಾಸದರ ಒಟ್ಟು ಸಂಖ್ಯೆ | ಆರಿಸಿ ಬರುವ ವರ ಸಂಖ್ಯೆ |
|---|---|---|---|---|
| ೧ ಮುಂಬೈ | ೧೯·೬೭, | ೫೬೦೦೦೧೧೫, | ೧೧೧, | ೮೬ |
| ೨ ಮದ್ರಾಸ, | ೪೧ ೪೦, | ೫೭೩೦೮೯೪೮, | ೧೧೮, | ೯೮ |
| ೩ ಬಂಗಾಲ, | ೪೫·೪೮, | ೨೮೦೨೮೫೩೭, | ೧೨೫, | ೧೧೫ |
| ೪ ಸಂಯುಕ್ತಪ್ರಾಂತ | ೪೭·೧೮, | ೫೯೦೭:೩೯೪, | ೧೧೮, | ೧೦೦ |
| ೫ ಬಿಹಾರ, ಓಡಿಸಾ | ೩೪·೪೯, | ೧೬೩೯೯೧೯೯, | ೯೩, | ೭೬ |
| ೬ ಪಂಜಾಬ, | ೧೯·೯೭, | ೨೬೯೪೩೬೩೧, | ೮೩, | ೬೫ |
| ೭ ಮಧ್ಯಪ್ರಾಂತ | ೧೩·೯೧, | ೧೮೭೧೭೨೨೯, | ೭೦, | ೫೪ |
| ೮ ಆಸಾಮು, | ೬·೭೧, | ೭೮೮೬೫೫೮, | ೫೩, | ೩೯ |

ಉತ್ಪನ್ನದ ಮಾನದಿಂದ ಮುಂಬೈ ಇಲಾಖೆಯು ೩ನೆಯದಾಗಿದ್ದರೂ ಮದ್ರಾಸಕ್ಕೂ ಅದಕ್ಕೂ ವಿಶೇಷ ಹೆಚ್ಚುಕಡಿಮೆಯಿಲ್ಲ. ಹೀಗಿದ್ದು ಮದ್ರಾಸಕ್ಕೆ ೧೧೮ ಸಭಾಸದರಿದ್ದರೆ, ಮುಂಬೈಗೆ ೧೧೧, ಮುಂಬೈ ಇಲಾಖೆಯ ಅರ್ಧದಷ್ಟು ಉತ್ಪನ್ನವಿದ್ದ ಬಂಗಾಲಕ್ಕೆ ೧೨೫ ಇರುವದು ಸೋಜಿಗದ ಮಾತೇ! ಇತ್ತಕಡೆಗೆ ನಮ್ಮ ಕಟಾಕ್ಷವಿಲ್ಲ. ಮುಂಬೈಗೆ ೧೨೫ ಸಭಾಸದರಾದರೂ, ಇದರಿಂದ ಕರ್ನಾಟಕದ ಗರಜು ಪೂರೈಸುವಂತಿಲ್ಲ. ಮುಂಬೈ ಕಾಯದೆಮಂಡಳಕ್ಕೆ ಕರ್ನಾಟಕದ ಜಿಲ್ಹೆಗಳಿಂದ ೬ ಜನರು ಗೊತ್ತಾಗಿದೆ. ಇಷ್ಟರಿಂದ ಏನಾಗಬೇಕು? ಈ ಆರರಲ್ಲಿಯೂ ಎಲ್ಲರೂ ಕನ್ನಡಿಗರೇ ಬರುತ್ತಾರೆಂಬದು ನಿಶ್ಚಿತವಿಲ್ಲ. ಮದ್ರಾಸಕ್ಕೆ ಬಳ್ಳಾರಿ ಮಂಗಳೂರಗಳಿಂದ ೪ ಜನರು ಆರಿಸಿಬರುವ ಸಂಭವವುಂಟು. ಎಲ್ಲಿಯೂ ಕರ್ನಾಟಕದ ಮಾತು ತಲೆಯೆತ್ತದಂತಾಗಿದೆ. ಸ್ವತಂತ್ರ ಕರ್ನಾಟಕಪ್ರಾಂತದ ಹೊರತು ಕರ್ನಾಟಕಕ್ಕೆ ಕಳೆಯು ಬರುವಂತಿಲ್ಲ.

**೪. ಸಂಸ್ಕೃತಿಯ ಪರಿಪೋಷಣ**:—ಕನ್ನಡ ನಾಡು, ಕನ್ನಡ ನುಡಿ, ಕನ್ನಡಿಗರ ವಿಶಿಷ್ಟ ಸಂಪ್ರದಾಯಗಳು, ಹಾಗು ಅವರ ಉಜ್ವಲವಾದ ಪೂರ್ವೇತಿಹಾಸ ಇವುಗಳ ಪರಿಪೋಷಣಕ್ಕಾಗಿ ಕರ್ನಾಟಕಪ್ರಾಂತದ ಹೊರತು ಗತ್ಯಂತರವಿಲ್ಲೆಂದು ಎಲ್ಲರೂ ಈಗ ಒಪ್ಪುವಂತಿದೆ. ಎಲ್ಲಿಯೂ ಕನ್ನಡ ನುಡಿಗೆ ಕಳೆಯಿಲ್ಲ.! ಎಲ್ಲೆಡೆಯಲ್ಲಿ ಕನ್ನಡಿಗರು ಅಲ್ಪಸಂಖ್ಯಾಕರಾಗಿ ತಿರಸ್ಕೃತರಾಗುವರು!! ಅವರ ಉಜ್ವಲವಾದ ಪೂರ್ವೇತಿಹಾಸವು ಯಾವ ಮೂಲಿಯ.ಲ್ಲಿ ಅಡಗಿದೆಯೋ? ಅವರ ಮನ್ನಣೆಯ ಸ್ಥಳಗಳು ಗೊತ್ತಿಲ್ಲದೆ ಒತ್ತಟ್ಟಿಗೆ ಉಳಿದುಬಿಟ್ಟಿವೆ. ಎಲ್ಲಕ್ಕೂ ಹೆಚ್ಚಿನದೆಂದರೆ—ಮರಾಟಿಗರು, ತೆಲಗರು, ತಮಿಳರು, ಮಲಿಯಾಳಿಗಳು ಕ್ರಮವಾಗಿ ಉತ್ತರ, ಪೂರ್ವ, ದಕ್ಷಿಣ, ಪಶ್ಚಿಮಗಳಲ್ಲಿ ಒಳನುಗ್ಗುತ್ತ ಬಂದು, ತಮ್ಮ ಭಾಷೆಯ ಶಾಲೆಗಳನ್ನು ಸ್ಥಾಪಿಸಿ ಕನ್ನಡವನ್ನು ಕುಂದಿಸುತ್ತಿರುವರು. ಬರಬರುತ್ತ ಗಡಿನಾಡಿನಲ್ಲಿ ಕನ್ನಡ ಜನಸಂಖ್ಯೆಯು ಕಡಿಮೆಯಾಗುವದು. ಈ ನಾಲ್ವರಲ್ಲಿ ಅಭಿಮಾನದ ಅಳತೆಯನ್ನು ಮೀರಿದ ಎಷ್ಟೋ ಜನರಿಗೆ ಸ್ವತಂತ್ರ ಕರ್ನಾಟಕಪ್ರಾಂತದ ಕಲ್ಪನೆಯು ಹೇಗೆ ರುಚಿಸಬೇಕು? ದಿನದಿನಕ್ಕೆ ಕನ್ನಡಿಗರನ್ನು ತಮ್ಮ ಪ್ರಾಂತಗಳಲ್ಲಿ ರೂಪಾಂತರಿಸಿಕೊಳ್ಳುವದು ಇವರಿಗೆ ಬೇಕಾಗಿದೆ. ಕನ್ನಡಿಗರೇ! ಈ ಹ್ರಾಸಕಾಲವನ್ನು ಹೊಡೆದೋಡಿಸಲಿಕ್ಕೆ ಸ್ವತಂತ್ರ ಕರ್ನಾಟಕಪ್ರಾಂತದ ವಿಷಯವಾಗಿ ನಿಮ್ಮ ಗರ್ಜನೆಯು ನಭೋಮಂಡಳದಲ್ಲಿ ಯಾವಾಗಲೂ ಗುಡುಗುಡಿಸುತ್ತಿರಲಿ.

**೫. ವಿದ್ಯಾಭಿವೃದ್ಧಿ**:—ನಮ್ಮ ನೆರೆಯ ಪ್ರಾಂತದವರಿಗಿಂತ ನಮ್ಮಲ್ಲಿ ವಿದ್ಯಾಭಿವೃದ್ಧಿಯು ಕಡಿಮೆಯಾಗಿದೆ. ಇದಕ್ಕೆ ಮುಂಬೈ ಹಾಗು ಮದ್ರಾಸ ವಿಶ್ವವಿದ್ಯಾಲಯಗಳು ಬಹುದಿವಸದ ವರೆಗೆ ನಮ್ಮ ಭಾಷೆಯನ್ನು ಎತ್ತಿಹಿಡಿಯದಿರುವದೇ ಕಾರಣವು! ನಮಗಿಂತ ಬಹಳ ಮುಂದರಿದ ಬಂಗಾಲಿಗಳಂತೂ ಇರಲಿ! ಕೆ. ವ್ಹಿ. ಲಕ್ಷ್ಮಣರಾಯರ ಪ್ರಯತ್ನದಿಂದ ತೆಲಗರು ತಮ್ಮ ಭಾಷೆಯಲ್ಲಿ ಜ್ಞಾನಕೋಶ (ಎನ್‌ಸಾಯಕ್ಲೋಪಿಡಿಯಾ) ವನ್ನು ಸಿದ್ಧಪಡಿಸಿರುವರು. ಮರಾಟಿಗರ ಜ್ಞಾನಕೋಶವು ಶ್ರೀಯುತ ಕೇತಕರರಿಂದ ಈಗ ಸಿದ್ಧವಾಗುತ್ತಲಿದೆ. ೯ ಗ್ರಂಥಗಳು ಹೊರಟಿವೆ. ಕನ್ನಡಿಗರ ಜ್ಞಾನಕೋಶವು ಎಲ್ಲಿದೆ? ವಾಙ್ಮಯಕ್ಕೆ ತಿಲಕಪ್ರಾಯವಾಗಿರುವ (ಸರಸ್ವತಿಗೆ ಕುಂಕುಮಬಟ್ಟಿನಂತೆ) ಈ ಜ್ಞಾನಕೋಶಕ್ಕಾಗಿ ಪ್ರಯತ್ನವಾಗದಿರಲಿಕ್ಕೆ ಕನ್ನಡಿಗರಲ್ಲಿ ಸಹಕಾರವು ದೂರತೋಪಾಸ್ತವಾಗಿರುವದೇ ಕಾರ

ಣವು! ಆದ್ದರಿಂದ ವಿದ್ಯಾಭಿವೃದ್ಧಿಗಾಗಿಯೂ, ವಾಙ್ಮಯೊಭಿವೃದ್ಧಿಗಾಗಿಯೂ, ಸದ್ಯದ ಸ್ಥಿತಿಯು ಶೋಚನೀಯವಾಗಿರುವದರಿಂದ, ಈ ದುಃಸ್ಥಿತಿಯು ದೂರಾಗಲಿಕ್ಕೆ ಸ್ವತಂತ್ರವಾದ ಕರ್ನಾಟಕಪ್ರಾಂತವೇ ಅವಶ್ಯಕವಾಗಿದೆ.

**೬. ಸಾಮಾಜಿಕ ಸ್ಥಿತಿಯು:**—ಪ್ರಾಕೃತಿಕ ಸ್ವರೂಪದಿಂದ ಕರ್ನಾಟಕವೆಂಬದೊಂದು ವಿಶಿಷ್ಟವಾದ ಪ್ರಾಂತವಿರುತ್ತದೆಂಬದನ್ನೂ, ಆಚಾರವಿಚಾರದಿಂದ ಕನ್ನಡಿಗರಿಗೂ ಇತರ ಪ್ರಾಂತದವರಿಗೂ ವೈಷಮ್ಯವುಂಟೆಂಬದನ್ನೂ, ಹಿಂದೆ ಸೂಚಿಸಿರುತ್ತೇವೆ. ಪ್ರಾಂತದ ಘಟಕಗಳಾದ ಪ್ರತಿಯೊಂದು ಸಮಾಜವನ್ನು ವಿಚಾರಿಸಿನೋಡಿ, ಅದರ ಧಾರ್ಮಿಕ ಭಾವನೆ; ಪೂರ್ವಸಂಸ್ಕೃತಿ, ಆಚಾರವಿಚಾರಗಳು, ಶಿಕ್ಷಣದ ಪ್ರಮಾಣ ಇವುಗಳನ್ನು ಕಂಡು ಎಲ್ಲ ಸಮಾಜಗಳಿಗೂ ಪರಿಪೋಷಕವಾಗುವಂತೆ ರಾಜ್ಯದಾಢಳತೆಯನ್ನು ಇಡಬೇಕಾಗುತ್ತದೆ. ಈಗಿನ ರಾಜ್ಯದಾಢಳತೆಯಲ್ಲಿ ಭಿನ್ನ ಸಂಸ್ಕೃತಿಯ ಅನೇಕ ಗುಂಪುಗಳು ಸೇರಿರುವದರಿಂದ ಪ್ರತಿಯೊಂದು ಸಮಾಜದ ಕಡೆಗೆ ಲಕ್ಷಕೊಡಲಿಕ್ಕೆ ಅಸ್ಪದವಿರುವದಿಲ್ಲ. ಹೀಗೆ ಎಲ್ಲ ಸಮಾಜಗಳು ತಕ್ಕ ಪ್ರಮಾಣದಿಂದ ಬೆಳವಣಿಗೆಯನ್ನು ಹೊಂದಬೇಕಾದರೆ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಿ, ಆಯಾ ಪ್ರಾಂತಗಳಿಗೆ ಪ್ರಾಂತಿಕ ಸ್ವಾತಂತ್ರ್ಯವನ್ನು ಕೊಡುವದೇ ಯೋಗ್ಯವಾದ ಉಪಾಯವು. ಒಂದು ಸಮಾಜವು ತೀರ ಮುಂಬರಿಯುವದೂ, ಮತ್ತೊಂದು ತೀರ ಹಿಂದುಳಿಯುವದೂ, ದೇಶಹಿತದೃಷ್ಟಿಯಿಂದ ಅನಿಷ್ಟವಾಗಿದೆ. ಪ್ರತಿಯೊಬ್ಬನಿಗೂ ಮುಂಬರಿಯಲಿಕ್ಕೆ ಅವಕಾಶವಿರಬೇಕು. ಅಂದರೆ ಜನರಲ್ಲಿ ಪರಸ್ಪರ ಸಹಾನುಭೂತಿಯು ಹೆಚ್ಚಿ ಪ್ರತಿಯೊಂದು ಪ್ರಾಂತವು ಸುಖದ ಬೀಡಾಗುವದು. ಈ ಸಾಮಾಜಿಕ ದೃಷ್ಟಿಯಿಂದ ವಿಚಾರಿಸಿದರೂ, ಕರ್ನಾಟಕಪ್ರಾಂತವು ಬೇರೆಯಾಗುವದು ಅವಶ್ಯವಾಗಿದೆ!

**೭. ರಾಜ್ಯದಾಢಳತೆಯಲ್ಲಿ ಸಾಮರ್ಥ್ಯವೂ, ಸೌಲಭ್ಯವೂ:**— “ಸರಕಾರದ ಬಲವು ಸುವ್ಯವಸ್ಥಿತವಾದ ರಾಜ್ಯಪದ್ಧತಿಯ ಮೇಲೆ ಅವಲಂಬಿಸಿರುತ್ತದೆ.” ಎಂಬದೊಂದು ಸಿದ್ಧಾಂತದ ಮಾತು ಇರುತ್ತದೆ. ಸುವ್ಯವಸ್ಥೆಯುಂಟಾಗಲಿಕ್ಕೆ ತಕ್ಕಷ್ಟು ಹವಣಿಯಾದ ಮತ್ತು ಸ್ವಾಭಾವಿಕವಾದ ಪ್ರಾಂತಗಳು ಇರಬೇಕಾಗುತ್ತವೆ. ಒಂದು ಕಾಲದಲ್ಲಿ ರಚಿತವಾದ ಈಗಿನ ದೊಡ್ಡ ದೊಡ್ಡ ಪ್ರಾಂತಗಳ ರಚನೆಯನ್ನು ಮುರಿದು, ಭಾಷೆಯಂತೆ ಅವುಗಳನ್ನು ಪುನಃ ರಚಿಸಿದರೆ, ಪ್ರತಿ

ಯೊಂದು ಪ್ರಾಂತವು ತಕ್ಕಷ್ಟು ಹವಣಿಯಾಗಿಯೂ, ಸ್ವಾಭಾವಿಕವಾಗಿಯೂ ಉಂಟಾಗುತ್ತದೆ. ಇದಲ್ಲದೆ ರಾಜ್ಯದಾಢ್ಯಳತೆಗೂ ಇದರಿಂದ ಸೌಲಭ್ಯವುಂಟು. ಈಗ ಒಬ್ಬ ಕಲೆಕ್ಟರನಿಗಾಗಲಿ, ಅಥವಾ ಅಸಿಸ್ಟಂಟ ಕಲೆಕ್ಟರನಿಗಾಗಲಿ, ಒಂದೇ ಇಲಾಖೆಯಲ್ಲಿದ್ದರೂ ವರ್ಗವಾದ ಸರತಿಗೊಮ್ಮೆ ಬೇರೆ ಭಾಷೆಯನ್ನು ಕಲಿಯುವ ಪ್ರಸಂಗವು ಬರುತ್ತದೆ. ಬೆಳಗಾಂವಿಯಲ್ಲಿ ಕನ್ನಡ ಕಲಿತ ಕಲೆಕ್ಟರರು ಸಾತಾರೆಗೆ ಹೋದಾಗ ಮರಾಟಿಯನ್ನು ಕಲಿಯಬೇಕಾಗುತ್ತದೆ. ಆ ಕಲೆಕ್ಟರರು ಗುಜರಾಥಕ್ಕೆ ಹೋದಾಗ ಗುಜರಾಥಿಯನ್ನೂ, ಸಿಂಧಕ್ಕೆ ಹೋದಾಗ ಸಿಂಧಿಯನ್ನೂ, ಕಲಿಯದಿದ್ದರೆ ಗತ್ಯಂತರವಿಲ್ಲ. ಇದು ಅಸ್ವಾಭಾವಿಕ ಪದ್ಧತಿಯ ಈಗಿನ ಪ್ರಾಂತಗಳ ಪರಿಣಾಮವಲ್ಲವೇ? ಇದಲ್ಲದೆ ಒಂದು ಪ್ರಕಟನೆಯನ್ನಾಗಲಿ, ಜಾಹೀರನಾಮೆಯನ್ನಾಗಲಿ ಪ್ರಕಟಿಸಬೇಕಾದರೆ ಮುಂಬಯಿ ಸರಕಾರವು ನಾಲ್ಕು ಭಾಷೆಯಲ್ಲಿಯೂ ಮದ್ರಾಸ ಸರಕಾರವು ಐದು ಭಾಷೆಯಲ್ಲಿಯೂ ಪ್ರಕಟಿಸಬೇಕಾಗುತ್ತದೆ. ಇದೇತರ ಪರಿಣಾಮವು? ಈಗಿನ ಅಸ್ವಾಭಾವಿಕ ಪದ್ಧತಿಯ ಪರಿಣಾಮವಲ್ಲವೇ? ಆದ್ದರಿಂದ ಭಾಷೆಯಂತೆ ಪ್ರಾಂತಗಳನ್ನು ರಚಿಸುವದರಿಂದ ಇವೆಲ್ಲ ಅನಾನುಕೂಲತೆಗಳು ದೂರಾಗುವವಲ್ಲದೆ, ಹೆಚ್ಚಿನ ಅನುಕೂಲತೆಗಳೂ ಒದಗುವವು.

**೮. ಸಾಂಪತ್ತಿಕ ಸ್ಥಿತಿಯ ಸುಧಾರಣೆ:**—ಕರ್ನಾಟಕದಲ್ಲಿ ಬೈಲುಸೀಮೆ ಬಹಳ. ಬೈಲು ಸೀಮೆಯಲ್ಲಿ ಮಳೆಯು ತಕ್ಕಷ್ಟು ಆಗುವದಿಲ್ಲ. ಭೂಮಿ ನೆಟ್ಟಗಿರುವದರಿಂದ ಇಲ್ಲಿ ಹರಿಯುತ್ತಿರುವ ದೊಡ್ಡ ದೊಡ್ಡ ನದಿಗಳಿಗೆ ಕಾಲುವೆಗಳನ್ನು ಮಾಡಿಕೊಟ್ಟರೆ, ಸರಕಾರಕ್ಕೂ ಪ್ರಜೆಗಳಿಗೂ ಕೂಡಿಯೇ ಕಲ್ಯಾಣವುಂಟು. ಕಬ್ಬು ವಿಪುಲವಾಗಿ ಬೆಳೆಯುವ ಕರ್ನಾಟಕದ ಪ್ರದೇಶದಲ್ಲಿ ಇದುವರೆಗೆ ಸಕ್ಕರೆಯ ಕಾರಖಾನೆಯು ಏಕೆ ಹುಟ್ಟಬಾರದು? ಬಳ್ಳಾರಿ ಜಿಲ್ಲೆಯು ಹತ್ತಿಯ ಸಲುವಾಗಿ ಪ್ರಸಿದ್ಧವಾಗಿರುತ್ತದೆ. ಆದರೆ ಅಲ್ಲಿ ನೂಲಿನ ಗಿರಣಿಗಳು ಎಷ್ಟು ಇರುತ್ತವೆ? ಹೊಸ ಹೊಸ ಕಾರಖಾನೆಗಳನ್ನು ತೆಗೆಯುವದರ ಬದಲು ಕಿರಾಣಿ ಅಂಗಡಿಗಳಲ್ಲಿಯೇ ಕನ್ನಡಿಗರು ಸಂತುಷ್ಟರಾದರೆ ಈ ಅಲ್ಪ ಸಂತೋಷವು ಆತ್ಮಘಾತಕವಾಗುವದು. ನೋಡಿರಿ! ಮರಾಟಿಗರ ಕಿರ್ಲೋಸ್ಕರವಾಡಿಯು ಪಾಶ್ಚಿಮಾತ್ಯರ ಲಕ್ಷವನ್ನೆಳೆಯುಹತ್ತಿದೆ. ಓಗಲೆಯ ಕಾಜಿನ ಕಾರಖಾನೆಯು ಎಷ್ಟು ಭರದಿಂದ ಬೆಳೆಯತೊಡಗಿದೆ. ಮಹಾರಾಷ್ಟ್ರವೇನೂ ಸ್ವತಂತ್ರ ಪ್ರಾಂತವಾಗಿರದಿದ್ದರೂ, ಬಹಳ ಜಿಲ್ಹೆಗಳು ಒತ್ತಟ್ಟಿಗಿರುವದರಿಂದ ಅವರಲ್ಲಿ

ಸಹಕಾರವೂ, ಸಾಹಸವೂ, ಉದ್ಯೋಗ ಪ್ರೀತಿಯೂ ಹೆಚ್ಚಾಗಿವೆ. ಕರ್ನಾಟಕ ದಷ್ಟು ಮಹಾರಾಷ್ಟ್ರದ ಸ್ಥಿತಿಯು ಶೋಚನೀಯವಾಗಿಲ್ಲ. ಆದ್ದರಿಂದ ಕರ್ನಾಟಕಪ್ರಾಂತವು ಸ್ವತಂತ್ರವಾಗಲೇಬೇಕು.

**೯. ೧೭೫೧ ರಲ್ಲಿಯ ೧ನೆಯ ವಿಜಯ:**—ಕರ್ನಾಟಕದ ನವಾಬನಪಟ್ಟದ ವಿಷಯವಾಗಿ ನಡೆದ ಜಗಳದಲ್ಲಿ ಇಂಗ್ಲಿಷರೂ ಫ್ರೆಂಚರೂ ಒಂದೊಂದು ಪಕ್ಷವನ್ನು ವಹಿಸಿ, ಎದುರಾಳಿಗಳಾಗಿ ನಿಂತರು ಹಿಂದುಸ್ಥಾನದಲ್ಲಿ ಕೆಲವು ಪ್ರದೇಶಗಳನ್ನು ಪಡೆಯಬೇಕೆಂದು ಡುಪ್ಲೆಯ ಧೋರಣವಿತ್ತು. ಇವನ ಧೋರಣವನ್ನು ಅರಿತು ಇಂಗ್ಲಿಷರು ತಮ್ಮ ವ್ಯಾಪಾರದ ಧೋರಣದಲ್ಲಿ ಬದಲು ಮಾಡಿದರು. ಈ ಕರ್ನಾಟಕದ ಕಾಳಗದಲ್ಲಿಯೇ ಇಂಗ್ಲಿಷರು ಮೊಟ್ಟಮೊದಲು ವಿಜಯವನ್ನು ಸಂಪಾದಿಸಿದ್ದರಿಂದಲೂ, ಈ ವಿಜಯವೇ ಅವರ ಉತ್ತರೋತ್ತರ ಅಭ್ಯುದಯಕ್ಕೆ ಕಾರಣವಾದುದರಿಂದಲೂ, ಇದರ ಸ್ಮಾರಕವೆಂದಾದರೂ ಕರ್ನಾಟಕಪ್ರಾಂತವನ್ನು ಬೇರೆ ಪಡಿಸುವದು ಭೂಷಣವಾಗಿದೆ. ( ಈ ಅಭಿಪ್ರಾಯವು ಹಿಂದೆ ಇತಿಹಾಸ ಪ್ರಕರಣದಲ್ಲಿ ಸೂಚಿತವಾಗಿದೆ. )

**೧೦. ಇಬ್ಬರಿಗೂ ಸಮಾಧಾನವು:**—ಸದ್ಯದ ಸ್ಥಿತಿಯಿಂದ ಪ್ರತಿಯೊಂದು ಸಂಸ್ಥೆಯಲ್ಲಿ ದ್ವೇಷಾಸೂಯೆಗಳು ಹುಟ್ಟುತ್ತವೆ. ಮರಾಟಿಗನು ಒಂದು ಕೆಲಸವನ್ನು ಕೈಕೊಂಡರೆ ಕನ್ನಡಿಗನು ಮೂಗು ಮುರಿಯುತ್ತಾನೆ. ಕನ್ನಡಿಗನು ಒಂದು ಕೆಲಸವನ್ನು ಪ್ರಾರಂಭಿಸಿದರೆ ಮರಾಟಿಗನು ತಿರಸ್ಕಾರ ಬುದ್ಧಿಯಿಂದ ಹಳಿಯದೆ ಬಿಡುವದಿಲ್ಲ. ತೆಲಗರಲ್ಲಿಯೂ, ಕನ್ನಡಿಗರಲ್ಲಿಯೂ, ಈ ದ್ವಂದ್ವವು ಗೊಂದಲವನ್ನು ಹಾಕುತ್ತಲೇ ಇದೆ. ಇದು ಪ್ರತಿನಿತ್ಯದ ವ್ಯವಹಾರದಿಂದ ಮ್ಯುನಸಿಪಾಲ್ಟಿ, ಲೋಕಲ್‌ಬೋರ್ಡ್, ಕಾಯದೆ ಮಂಡಳ ಮೊದಲಾದ ಸಣ್ಣ ದೊಡ್ಡ ಸಂಸ್ಥೆಗಳಲ್ಲೆಲ್ಲ, ತುಸು ಹೆಚ್ಚು ಕಡಿಮೆ ಒಂದೇ ತರವಾಗಿ ವ್ಯಾಪಿಸಿರುತ್ತದೆ. ಆದ್ದರಿಂದ ಅವರವರ ಪ್ರಾಂತಗಳು ಬೇರೆಯಾದರೆ ಎಲ್ಲರಿಗೂ ಸಮಾಧಾನವಾಗುದುಂಟು. ಪರಸ್ಪರರಲ್ಲಿರತಕ್ಕ ಸಾಶಂಕ ವೃತ್ತಿಯೂ, ತಿರಸ್ಕಾರ ಬುದ್ಧಿಯೂ ಅಳಿದುಹೋಗಿ, ಎಲ್ಲರಲ್ಲಿ ಸಮಭಾವನೆಯೂ, ಸಹಕಾರವೂ ಹುಟ್ಟುವವೆಂದು ಹೇಳಲು ಅಡ್ಡಿಯಿಲ್ಲ. ನಿಜವಾದ ಬಂಧುಪ್ರೇಮವು ಬೆಳೆಯಬೇಕೆಂದು ಇಚ್ಛಿಸುತ್ತಿದ್ದರೆ—ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದು ಲೇಸು! ಇದರಿಂದ ಸರಕಾರಕ್ಕೂ ಹಿತವುಂಟು.



---

# ಎಂಟನೆಯ ಪ್ರಕರಣ.

## ಸ್ಥಿತ್ಯಂತರಗಳು.

೧ ಒಂದು ಸೂಚನೆಯು, ೨ ಸುಧಾರಣೆಯ ಕಾಯದೆಗಳು, ೩ ಹಿಂದುಸ್ಥಾನದಲ್ಲಾದ ಸ್ಥಿತ್ಯಂತರಗಳು, ೪ ಕರ್ನಾಟಕದಲ್ಲಾದ ಸ್ಥಿತ್ಯಂತರಗಳು, ೫ ಸಾರಾಂಶ.

**೧ ಒಂದು ಸೂಚನೆಯು:**—ಕರ್ನಾಟಕಪ್ರಾಂತವೆಂದು ಉಚ್ಚರಿಸಿದ ಕೂಡಲೆ ಬೆದರಿಬೀಳುವ ಜನರಿಗೆ ಒಂದು ಸೂಚನೆಯನ್ನು ಕೊಡುವದು ಅವಶ್ಯವಾಗಿದೆ. ಶಿಲಾಲೇಖದ ಬರಹದಂತೆ, ಎಂದೂ ಬದಲಿಸಲಿಕ್ಕಾಗದ ತೆರದಿಂದ ನಮ್ಮ ಸರಕಾರದವರು ಈಗಿನ ಪ್ರಾಂತಗಳನ್ನು ರಚಿಸಲಿಲ್ಲ. ಕಾಲಕಾಲಕ್ಕೆ ಹೆಚ್ಚುಕಡಿಮೆಗಳಾಗುವದು ಸ್ವಾಭಾವಿಕವೆಂದು ಅವರ ತಿಳಿವಳಿಕೆಯಿತ್ತು. ಅದರಂತೆ ಬದಲಿಸಿದ ಉದಾಹರಣೆಗಳೂ ವಿಶೇಷವಾಗಿವೆ. "ಕರ್ನಾಟಕಪ್ರಾಂತ" ಎಂದರೆ "ಹೊಸಪ್ರಾಂತವು", ಹೊಸಪ್ರಾಂತವೆಂದರೆ "ಅಶಕ್ಯಕೋಟಿಯಲ್ಲಿ ಸಮಾವೇಶವಾಗುವ ವಿಷಯವು" ಎಂದು ಯಾರೂ ತಿಳಿಯಬಾರದು. ಇಲ್ಲಿ ಕೊಟ್ಟ ಸ್ಥಿತ್ಯಂತರಗಳನ್ನು ನೋಡಿ ಕರ್ನಾಟಕಪ್ರಾಂತದ ಆಶಾಂಕುರವು ಉದ್ಭವಿಸಿದರೆ ಅದನ್ನು ಪೋಷಿಸಬೇಕಲ್ಲದೆ, ಛೇದಿಸಬಾರದೆಂಬುದೇ ನಮ್ಮ ಸೂಚನೆಯು.

**೨. ಸುಧಾರಣೆಯ ಕಾಯದೆಗಳು:**—೧೭೭೩ ಇ|| ಯ ರೆಗ್ಯುಲೇಟಿಂಗ ಕಾಯದೆಯಿಂದ ೧೮೫೮ ಇಸ್ವಿಯವರೆಗೆ ರಾಜ್ಯದಾಢ್ಯತೆಯ ಸುಧಾರಣೆಗಾಗಿ ೯ ಕಾಯದೆಗಳಾಗಿರುತ್ತವೆ ೧೭೭೩ ರಲ್ಲಾದ ಕಾಯದೆಯು ಬಂಗಾಲದ ಗವ್ಹರ್ನರರನ್ನು ಗವ್ಹರ್ನರ ಜನರಲ್‌ರೆಂದು ಗೊತ್ತುಮಾಡಿತು. ಇವರು ಉಳಿದ ಪ್ರಾಂತಗಳ ಗವ್ಹರ್ನರರ ಮೇಲಧಿಕಾರಿಯಾದರು. ೧೭೮೪ ಇ|| ಪಿಟ್ಟನ ಕಾಯದೆಯಿಂದ ಕಂಪನಿಯ ಕಾರಭಾರದ ಮೇಲ್ವಿಚಾರಣೆಗಾಗಿ ೬ ಜನರ ಒಂದು ಮಂಡಳವನ್ನು ನಿರ್ಮಿಸುವದಾಯಿತು. ೧೭೯೩ ಇ|| ಯ ಚಾರ್ಟರಆಕ್ಟ್ (ಸನದಿನ ಕಾಯದೆ)ವು ಕೌನ್ಸಿಲ್‌ದ ನಿಯಮಗಳನ್ನೂ, ಗವ್ಹರ್ನರ ಜನರಲ್‌ರ ಅಧಿಕಾರಗಳನ್ನೂ, ಗೊತ್ತುಪಡಿಸಿತು. ೧೮೧೩ ಇ|| ಯ ಸನದಿನ ಕಾಯದೆಯಿಂದ

ರಾಜ್ಯದಾಢಳತೆಯಲ್ಲಿ ಏನೂ ಹೆಚ್ಚುಕಡಿಮೆಯಾಗಲಿಲ್ಲ. ೧೮೩೩ ಇ|| ಯ ಸನದಿನ ಕಾಯದೆಯು ಕಂಪನಿಯನ್ನು ಅರಸನ ಎಜಂಟನೆಂದು ಗೊತ್ತುಪಡಿಸಿತು. ಬಂಗಾಲಪ್ರಾಂತವು ದೊಡ್ಡದಾದ ಕಾರಣ ಬಂಗಾಲ ಮತ್ತು ಆಗ್ರಾಪ್ರಾಂತಗಳನ್ನು ಬೇರೆ ಮಾಡಬೇಕೆಂದೂ, ಬಂಗಾಲದ ಗವ್ಹರ್ನರ ಜನರಲ್‌ರು ಆ ಪ್ರಾಂತದ ಗವ್ಹರ್ನರರು ಸಹ ಆಗಿರಬೇಕೆಂದೂ ಗೊತ್ತುಮಾಡಿತು. ೧೮೩೫ ಇ|| ಯ ಸುಧಾರಣೆಯ ಕಾಯದೆಯಿಂದ ಈಗಿನ ಸಂಯುಕ್ತಪ್ರಾಂತ (ಆಗಿನ ನಾರ್ಥ ವೆಸ್ಟರ್ನ ಪ್ರಾವ್ಹಿನ್ಸ) ವನ್ನು ಬೇರೆ ಮಾಡಿ ಲೆ. ಗವ್ಹರ್ನರರ ಕೈಕೆಳಗೆ ಕೊಡಲ್ಪಟ್ಟಿತು. ೧೮೫೩ ಇ|| ಯ ಕಾಯದೆಯಿಂದ ಬಂಗಾಲಕ್ಕೆ ಬೇರೊಬ್ಬ ಗವ್ಹರ್ನರರಿರಬೇಕೆಂದು ಗೊತ್ತಾಗಿ, ಗವ್ಹರ್ನರ ಜನರಲ್‌ರ ಕಡೆಗೆ ಮೇಲ್ವಿಚಾರಣೆಯ ಕೆಲಸವನ್ನು ಕೊಟ್ಟಿತು. ೧೮೫೪ ಇಸ್ವಿಯ ಕಾಯದೆಯಿಂದ ಬಂಗಾಲಕ್ಕೆ ಲೆ. ಗವ್ಹರ್ನರರಿರಬೇಕೆಂದು ಗೊತ್ತಾಯಿತು. ೧೮೫೮ ಇ|| ಯ ಕಾಯದೆಯಿಂದ ಹಿಂದುಸ್ಥಾನದ ಈಗಿನ ರಾಜ್ಯಕಾರಭಾರದ ಸ್ವರೂಪವು ಗೊತ್ತಾಯಿತು. ಇವುಗಳ ನಂತರ ಆದ ಹೆಚ್ಚುಕಡಿಮೆಯ ಕಾಯದೆಗಳಲ್ಲಿ ಮೋರ್ಲೆ ಮಿಂಟೋ ಸುಧಾರಣೆಯ ಕಾಯದೆಯು ಪ್ರಸಿದ್ಧವಾಗಿದ್ದು, ಕಾಯದೆ ಮಂಡಳದಲ್ಲಿ ಸುಧಾರಣೆಯನ್ನು ಮಾಡಿದೆ.

**೩. ಹಿಂದುಸ್ಥಾನದಲ್ಲಾದ ಸ್ಥಿತ್ಯಂತರಗಳು:—** ಬೇರೆ ಬೇರೆ ಪ್ರಾಂತಗಳಲ್ಲಿ ಹೇಗೆ ಬದಲಾವಣೆಗಳಾಗಿರುತ್ತದೆಂಬದನ್ನು ಇಲ್ಲಿ ಸೂಚಿಸುವದು ನಮ್ಮ ಉದ್ದೇಶವಾಗಿರುತ್ತದೆ.

(i) **ಬಂಗಾಲಪ್ರಾಂತವು:**—೧೭೬೫ ರಲ್ಲಿ (೧) ಬಂಗಾಲ, (೨) ಆಸಾಮ, (೩) ಈಗಿನ ಸಂಯುಕ್ತಪ್ರಾಂತ ಈ ಮೂರನ್ನು ಒಳಕೊಂಡಿತ್ತು. ೧೮೩೬ ರಲ್ಲಿ ಸಂಯುಕ್ತಪ್ರಾಂತವೂ, ೧೮೭೪ ರಲ್ಲಿ ಆಸಾಮಪ್ರಾಂತವೂ, ಬೇರೆಯಾಗಿವೆ. ೧೯೦೫ ರಲ್ಲಿ ಲಾರ್ಡ ಕರ್ಝನ್‌ರವರು ಪೂರ್ವಬಂಗಾಲದ ರಾಜಶಾಯಿ, ಡಾಕಾ, ಚಿತಗಾಂಗ ಈ ಮೂರು ಜಿಲ್ಹೆಗಳನ್ನು ಆಸಾಮಕ್ಕೆ ಜೋಡಿಸಿ, ಆ ಪ್ರಾಂತವನ್ನು ಲೆ. ಗವ್ಹರ್ನರರ ಕೈಕೆಳಗೆ ತರಬೇಕೆಂದು ಪ್ರಯೋಗಮಾಡಿದರು. ಆದರೆ ಈ ಸಂಗತಿಯು ಈಡೇರಲಿಲ್ಲ. ೧೯೧೨ ರಲ್ಲಿ ಲಾರ್ಡ ಹಾರ್ಡಿಂಜಶವರ ಕಾಲದಲ್ಲಿ ಪುನಃ ಬಂಗಾಲವು ಮೊದಲಿನಂತೆ ಮಾಡಲ್ಪಟ್ಟಿತು.

(ii) **ಸಂಯುಕ್ತಪ್ರಾಂತ:**—ಮೊದಲು ಇದು ಬಂಗಾಲದ ಭಾಗ ವಾಗಿತ್ತು. ೧೮೩೬ ರಲ್ಲಿ "ನಾರ್ಥ ವೆಸ್ಟರ್ನ ಪ್ರಾವ್ಹಿನ್ಸ" ಎಂದು ಹೆಸರಿಟ್ಟು ಈ ಪ್ರಾಂತವನ್ನು ಬೇರೆಮಾಡಿದರು. ಆಗಿನ ಬ್ರಿಟಿಶರ ಪ್ರದೇಶಗಳಲ್ಲಿ ಇದು ವಾಯು ವ್ಯಕ್ಕೆ ಇದ್ದುದರಿಂದ ಈ ಹೆಸರು ಅದಕ್ಕೆ ಒಪ್ಪುತ್ತಿತ್ತು. ೧೮೪೯ ರಲ್ಲಿ ಪಂಜಾ ಬವು ಇಂಗ್ಲಿಷರ ವಶವಾದದ್ದರಿಂದ, ಈ ಹೆಸರು ಒಪ್ಪುವದಿಲ್ಲೆಂದು ಇದಕ್ಕೆ ಆಗ್ರಾಪ್ರಾಂತವೆಂದು ಹೆಸರಿಟ್ಟರು. ೧೮೭೭ರ ವರೆಗೆ ಅಯೋಧ್ಯಾಪ್ರಾಂತವು ಬೇರೆ ಯಾಗಿತ್ತು. ಅದೇ ವರುಷ ಇವೆರಡನ್ನೂ ಕೂಡಿಸಿದ್ದರಿಂದ ಸಂಯುಕ್ತಪ್ರಾಂತ ವೆಂದು ಹೆಸರಾಯಿತು.

(iii) **ವಾಯುವ್ಯ ಸರಹದ್ದಿಯ ಪ್ರಾಂತ:**— ವಾಯುವ್ಯ ಸರಹ ದ್ದಿಯ ಮೇಲಿನ ತುಸು ಪ್ರದೇಶವು ಲಷ್ಕರೀ ಖಾತೆಯವರ ವಶದಲ್ಲಿತ್ತು. ಲಷ್ಕ ರದ ಅಧಳತೆಯು ರೋಚಿಸಲಿಕ್ಕಿಲ್ಲೆಂದು ಪಂಜಾಬದ ತುಸು ಪ್ರದೇಶವನ್ನು ಕೂಡಿಸಿ, ಈ ಸರಹದ್ದಿಯ ಪ್ರಾಂತವನ್ನು ೧೯೦೧ ರಲ್ಲಿ ಬೇರೆ ಮಾಡಿದರು. ಮೊದ ಲು ಸಂಯುಕ್ತಪ್ರಾಂತಕ್ಕೆ ಇದ್ದ ನಾರ್ಥ ವೆಸ್ಟರ್ನ ಪ್ರಾವ್ಹಿನ್ಸವೆಂಬ ಹೆಸರು ಈಗ ಇದಕ್ಕೆ ಬಂದದೆ.

(iv) **ಮಧ್ಯಪ್ರಾಂತ:**— ನಾಗಪೂರ ಭೋಸಲೆಯಿಂದ ದೊರೆತ ಪ್ರಾಂತಗಳನ್ನು ಒಟ್ಟುಗೂಡಿಸಿ ೧೮೬೧ ರಲ್ಲಿ ಈ ಪ್ರಾಂತವನ್ನು ಬೇರೆ ಮಾಡಿರು ತ್ತಾರೆ. ೧೯೦೩ ರಲ್ಲಿ ನಿಜಾಮನಿಂದ ದಂಡಿನ ವೆಚ್ಚಕ್ಕಾಗಿ ದೊರೆತ ವರ್‍ಹಾಡಪ್ರಾಂತ ವನ್ನು ಹಿಂದುಸ್ತಾನ ಸರಕಾರದವರು ೧೯೧೩ ರ ವರೆಗೆ ತಮ್ಮ ವಶದಲ್ಲಿಟ್ಟು ಕೊಂಡಿದ್ದರು. ಅದೇ ವರುಷ ಇದು ಮಧ್ಯಪ್ರಾಂತಕ್ಕೆ ಜೋಡಿಸಲ್ಪಟ್ಟಿತು.

(v) **ಮುಂಬಯಿ ಇಲಾಖೆ:**— ಸಿಂಧದ ಹೊರತು ಉಳಿದ ಮುಂಬಯಿ ಇಲಾಖೆಯು ಪ್ರದೇಶವನ್ನು ಪೇಶ್ವೆಯ ಕೂಡ ಆದ ಕಾಳಗದಿಂದ ದೊರಕಿಸಿರು ತ್ತಾರೆ. ೧೮೪೩ ರಲ್ಲಿ ಸಿಂಧವು ಮುಂಬಯಿ ಇಲಾಖೆಗೆ ಜೋಡಿಸಲ್ಪಟ್ಟಿರುತ್ತದೆ. ಟೀಪೂವಿನಿಂದ ದೊರೆತ ಕಾನಡಾ ಜಿಲ್ಹೆಯನ್ನು ೧೮೬೨ ರಲ್ಲಿ ಮುಂಬಯಿ ಇಲಾಖೆಗೆ ಜೋಡಿಸಿರುತ್ತಾರೆ. ಬೇರೆ ಬೇರೆ ಪ್ರಾಂತಗಳಲ್ಲಾದ ಹೆಚ್ಚು ಕಡಿಮೆ ಗಳಲ್ಲಿ ಮುಖ್ಯವಾದವುಗಳನ್ನು ಇದುವರೆಗೆ ಸಾಧಾರಣವಾಗಿ ಸೂಚಿಸಿದಂತಾ

ಯಿತು. ಇನ್ನು ಕರ್ನಾಟಕದಲ್ಲಾದ ವಿಶೇಷ ಹೆಚ್ಚುಕಡಿಮೆಗಳನ್ನು ಕುರಿತು ವಿಚಾರಿಸುವಾ.

**೪. ಕರ್ನಾಟಕದಲ್ಲಾದ ಸ್ಥಿತ್ಯಂತರಗಳು:**—ಟೀಪುವಿನಿಂದ ದೊರೆತ ಮಂಗಳೂರು ಮತ್ತು ಕಾನಡಾ ಜಿಲ್ಹೆಗಳು ಪ್ರಾರಂಭದಲ್ಲಿ ಒಬ್ಬನೇ ಕಲೆಕ್ಟರನ ವಶದಲ್ಲಿದ್ದು ಮದ್ರಾಸ ಇಲಾಖೆಯಲ್ಲಿ ಸಮಾವೇಶವಾಗಿದ್ದವು. ೧೮೦೦ ರಲ್ಲಿ ನಿಜಾಮನು ಬಿಟ್ಟುಕೊಟ್ಟ ಬಳ್ಳಾರಿ, ಕಡಪೆ ಜಿಲ್ಹೆಗಳು ಮದ್ರಾಸ ಇಲಾಖೆಗೆ ಜೋಡಿಸಲ್ಪಟ್ಟವು. ೧೮೦೮ ರಲ್ಲಿ ಬಳ್ಳಾರಿಯು ಸ್ವತಂತ್ರ ಜಿಲ್ಹೆಯಾಯಿತು. ೧೮೧೮ ರಲ್ಲಿ ಪೇಶ್ವೆಯಿಂದ ದೊರೆತ ಬೆಳಗಾಂವಿ, ಧಾರವಾಡ, ವಿಜಾಪುರ ಜಿಲ್ಹೆಗಳು ಬಳ್ಳಾರಿಗೆ ಜೋಡಿಸಲ್ಪಟ್ಟವು. ೧೮೨೨ ರಲ್ಲಿ ಈ ಪ್ರದೇಶವು ದೊಡ್ಡದಾಗುವದೆಂದು ಕರ್ನಾಟಕದ ಕೆಲವು ತಾಲೂಕುಗಳನ್ನು ಸೊಲ್ಲಾಪುರಕ್ಕೆ ಕೊಟ್ಟು ಸೊಲ್ಲಾಪುರ ಜಿ॥ ಯನ್ನು ಬೇರೆಮಾಡಿರುತ್ತಾರೆ. ೧೮೩೦ ರಲ್ಲಿ ಧಾರವಾಡ ಜಿಲ್ಹೆಯನ್ನು ಬೇರೆ ಮಾಡಿ ಬೆಳಗಾಂವಿ, ವಿಜಾಪುರಗಳು ಅದಕ್ಕೆ ಜೋಡಿಸಲ್ಪಟ್ಟವು. ೧೮೩೬ ರಲ್ಲಿ ಬೆಳಗಾಂವಿ ಜಿಲ್ಹೆಯು ಬೇರೆಯಾಯಿತು. ಆಗ ಇದರಲ್ಲಿ ೧ ಪಾಚ್ಛಾಪೂರ, ೨ ಸಂಪಗಾಂವ, ೩ ಬೀಡಿ, ೪ ಚಿಕ್ಕೋಡಿ, ೫ ಪರಸಗಡ, ೬ ಬಾಗಲಕೋಟೆ, ೭ ಬಾದಾಮಿ, ೮ ಹುನಗುಂದ, ೯ ಇಂಡಿ, ೧೦ ಮುದ್ದೇಬಿಹಾಳ ಹೀಗೆ ೧೦ ತಾಲೂಕುಗಳಿದ್ದವು. ಮುಂದೆ ಸ್ವಲ್ಪ ದಿವಸಗಳಲ್ಲಿ ಗೋಕಾವಿಯು ಮತ್ತು ಅಥಣಿಯು ದೊರಕಿದ್ದರಿಂದ ಇಂಡಿ, ಮುದ್ದೇಬಿಹಾಳಗಳನ್ನು ಸೊಲ್ಲಾಪುರಕ್ಕೆ ಜೋಡಿಸಿ, ಗೋಕಾವಿ, ಅಥಣಿಗಳನ್ನು ಬೆಳಗಾಂವಿಗೆ ಜೋಡಿಸಿದರು. ೧೮೬೪ ರಲ್ಲಿ ಸೊಲ್ಲಾಪುರಕ್ಕೆ ಸೇರಿದ್ದ ಇಂಡಿ, ಹಿಪ್ಪರಗಿ, ವಿಜಾಪುರ, ಮನಗೂಳಿ, ಮುದ್ದೇಬಿಹಾಳ ಈ ಐದು ತಾಲೂಕುಗಳನ್ನೂ ಹಾಗು ಬೆಳಗಾಂವಿ ಜಿಲ್ಹೆಯಲ್ಲಿದ್ದ ಬಾಗಲಕೋಟೆ, ಬದಾಮಿ, ಹುನಗುಂದ ಈ ಮೂರು ತಾಲೂಕುಗಳನ್ನೂ ಕೂಡಿಸಿ ಕಲಾದಗಿ, ಜಿಲ್ಹೆಯನ್ನು ಮಾಡಿದರು, ೧೮೮೪ ರಲ್ಲಿ ಕಲಾದಗಿಯ ಬದಲು ವಿಜಾಪುರವನ್ನು ಜಿಲ್ಹೆಯ ಸ್ಥಳವೆಂದು ಗೊತ್ತುಪಡಿಸಿದರು. ಈಗ ತಾಲೂಕಿನ ಸ್ಥಳಗಳೂ ಕೆಲವು ಬದಲಾಗಿವೆ. ಕೆಲವು ಹೆಚ್ಚಾಗಿವೆ. ೧೮೩೦ ರಲ್ಲಿ ಧಾರವಾಡ ಜಿಲ್ಹೆಯನ್ನು ಮಾಡಿದಾಗ ಜನರಲ್ ಮನ್ರೋ ಎಂಬವರು ಪ್ರಿನ್ಸಿಪಲ್ ಕಲೆಕ್ಟರರೂ, ಪೊಲಿಟಿಕಲ್ ಎಜಂಟರೂ ಆಗಿದ್ದರು.

೫. **ಸಾರಾಂಶ**:—ಇಲ್ಲಿ ಒಂದು ಮಾತಿನ ಸ್ಪಷ್ಟೀಕರಣವು ಅವಶ್ಯವಾಗಿದೆ. ಪೇಶ್ವೆಯಿಂದ ದೊರಕಿದ ಧಾರವಾಡ, ಬೆಳಗಾಂವಿ, ವಿಜಾಪುರ ಈ ೩ ಜಿಲ್ಹೆಗಳಿಗೆ ಸರಕಾರದವರು ಒಂದು ಕಾಲದಲ್ಲಿ ದಕ್ಷಿಣ ಮಹಾರಾಷ್ಟ್ರವೆಂದು ಹೆಸರಿಟ್ಟರೂ, ಈ ಹೆಸರು ಪೇಶ್ವೆಯಿಂದ ಗೆದ್ದುಕೊಂಡ ಪ್ರದೇಶವನ್ನು ಸೂಚಿಸುವದೇ ಹೊರತು, ಇಲ್ಲಿ ಮರಾಟಿಗರು ವಾಸಿಸುತ್ತಾರೆಂದು ಅರ್ಥವಾಗುವದಿಲ್ಲ. ಹಿಂದಕ್ಕೆ ಅನೇಕ ರಾಜವಂಶಗಳು ಆಗಿಹೋದಂತೆ, ಪೇಶ್ವೆಯರೂ ಕೆಲಕಾಲ ಕರ್ನಾಟಕದಲ್ಲಿ ಆಳಿಹೋದರು. ಇದೇ ರೀತಿ ಮರಾಟಿಗರ ಮೇಲೆ ಕನ್ನಡಿಗರ ಸಾಮ್ರಾಜ್ಯವೂ ಒಂದು ಕಾಲದಲ್ಲಿ ಪಸರಿಸಿತ್ತು. ದಕ್ಷಿಣಮಹಾರಾಷ್ಟ್ರವು ನಿಜವಾಗಿ ಉತ್ತರಕರ್ನಾಟಕವಿರುತ್ತದೆ. ಇಲ್ಲಿ ವಾಸಿಸುವ ಜನರು ಮರಾಟಿಗರಲ್ಲ. ಕನ್ನಡಿಗರಿರುತ್ತಾರೆ. ಏನೋ ಒಂದು ಕಾಲದಲ್ಲಿ ಒಂದು ನೆವದಿಂದ ಬಿದ್ದ ದಕ್ಷಿಣ ಮಹಾರಾಷ್ಟ್ರವೆಂಬ ಹೆಸರನ್ನೇ ಆಧಾರವಾಗಿಟ್ಟುಕೊಂಡು, ಇಲ್ಲಿಯ ಕನ್ನಡಿಗರನ್ನು ಮರಾಟಿಗರೆಂದು ಸಿದ್ಧಮಾಡುವದಕ್ಕೋಸ್ಕರ ವಿಕಟಪ್ರಮಾಣಗಳನ್ನು ತೋರಿಸುವ ವೃಥಾಭಿಮಾನಿಗಳು, ಮೃಗಜಲವನ್ನು ಬೆನ್ನಟ್ಟಿದಂತೆ ಬಳಲಿ ಬಾಯಿ ಬಿಡಬೇಕಾಗುವದು. ಎಚ್ಚರಿರಲಿ! ಮತ್ತೊಂದು ನೆನಪಿಡತಕ್ಕ ಸಂಗತಿಯೆಂದರೆ, ೧೮೬೭ ರ ವರೆಗೆ ಸೊಲ್ಲಾಪುರ ಜಿಲ್ಹೆಯು ಕರ್ನಾಟಕದಲ್ಲಿ ಸಮಾವೇಶವಾಗುತ್ತಿತ್ತು. ಕರ್ನಾಟಕದ ಪ್ರದೇಶವನ್ನು ಹಂಚಿಕೊಟ್ಟದ್ದರಿಂದ ಈ ಜಿಲ್ಹೆಯು ಪ್ರಾರಂಭವಾಗಿದೆ. ಕರ್ನಾಟಕದ ಇತರ ಜಿಲ್ಹೆಗಳಿಗೂ ಈ ಜಿಲ್ಹೆಗೂ ತಾಲೂಕಿನ ಕೊಡುಕೊಳ್ಳುವ ಕೆಲಸವು ಬಹು ದಿವಸದಿಂದ ಸಾಗಿದೆ. ಆದ್ದರಿಂದ ಸೊಲ್ಲಾಪುರ ಜಿಲ್ಹೆಯ ಪೂರ್ವ, ದಕ್ಷಿಣಭಾಗಗಳಲ್ಲಿರುವ ಕನ್ನಡ ಪ್ರದೇಶವನ್ನು ಭಾವೀ ಕರ್ನಾಟಕಕ್ಕೆ ಜೋಡಿಸಬೇಕೆಂಬ ನಮ್ಮ ಬೇಡಿಕೆಯು ಅನ್ಯಾಯವಾದದ್ದೆಂದು ಹೇಳಲಾಗದು.

---

# ಒಂಭತ್ತನೆಯ ಪ್ರಕರಣ.

## ಆಕ್ಷೇಪಗಳಿಗೆ ಉತ್ತರ.

೧ ಯಾರು ಏನೆನ್ನುವರು?, ೨ ಕರ್ನಾಟಕಪ್ರಾಂತವು ಶಕ್ಯವೇ?, ೩ ಸಬಲರ ಸಹಾಯವು ತಪ್ಪುವದಷ್ಟೇ?, ೪ ಭಾರತೀಯ ಐಕ್ಯಕ್ಕೆ ಪೋಷಕವೇ?, ೫ ಸಂಸ್ಥಾನಗಳು ಒಡಂಬಡುವವೇ?, ೬ ಕೊಡಗು ಎಡರಾಗದೇ? ೭ (೨೬೪) ಭಾಷೆಗಳ ವ್ಯವಸ್ಥೆಯೇನು?, ೮ ಇಸಾಪನೀತಿಯ ಒಂದು ಕಥೆಯು

೧. **ಯಾರು ಏನೆನ್ನುವರು?**:—ಕರ್ನಾಟಕಪ್ರಾಂತವು ಅಶಕ್ಯವೆಂದಾಗಲಿ, ಅಥವಾ ಅದಕ್ಕೆ ಅನೇಕ ಎಡರುಗಳುಂಟೆಂದಾಗಲಿ, ಯಾರು ಆಕ್ಷೇಪಗಳನ್ನು ಎತ್ತುವರೋ ಅವುಗಳಿಗೆ ಸಮಾಧಾನಕಾರಕವಾದ ಉತ್ತರವು ಅವಶ್ಯವಾಗಿರುವದರಿಂದ ಇಲ್ಲಿ ಯಾರು ಏನೆನ್ನುವರೆಂಬದನ್ನು ವಿಚಾರಿಸುವಾ.

(i). **ಮರಾಟಿಗರು**:— "ಕೇಸರಿ" ಪತ್ರದ ಸಂಪಾದಕರಾದ ಶ್ರೀಯುತ ಕೇಳಕರವರು ತಮ್ಮ ಲೇಖಸಂಗ್ರಹವೆಂಬ ಗ್ರಂಥದ ಒಂದು ಪ್ರಕರಣದಲ್ಲಿ ಭಾಷೆಯಂತೆ ಪ್ರಾಂತಗಳ ವಿಭಾಗವನ್ನು ಕುರಿತು ತುಸು ಚರ್ಚಿಸಿರುವರು. ಇವರು ಕರ್ನಾಟಕದ ಅಂಶಗಳು ಎಲ್ಲೆಲ್ಲಿ ಸಿಡಿದುಹೋಗಿರುವವೆಂಬದನ್ನು ವಿಚಾರಿಸದೆ, ಕೇವಲ ಸದ್ಯದ ಕನ್ನಡ ಜಿಲ್ಹೆಗಳ ಜನಸಂಖ್ಯೆಯ ಮೇಲಿಂದ ಕರ್ನಾಟಕ ಪ್ರಾಂತವಾಗುವದು ಶಕ್ಯವಾಗಿಲ್ಲೆಂಬ ಅಭಿಪ್ರಾಯವನ್ನು ಧೈರ್ಯದಿಂದ ಕೊಟ್ಟಿರುವರು. ಕನ್ನಡ ಜಿಲ್ಹೆಗಳ ಜನಸಂಖ್ಯೆಯು ಸುಮಾರು ೪೫ ಲಕ್ಷ (ಸಂಸ್ಥಾನಗಳನ್ನು ಹೊರತುಪಡಿಸಿ) ಆಗುವದೆಂದೂ, ಇಷ್ಟರಿಂದ ಸ್ವತಂತ್ರ ಪ್ರಾಂತವಾಗುವದು ಶಕ್ಯವಾಗಿಲ್ಲೆಂದೂ, ಇವರೆನ್ನುವ ಮಾತು ಆಶ್ಚರ್ಯಕಾರಕವೇ ಸರಿ! ಕನ್ನಡಜಿಲ್ಹೆಗಳ ಜನಸಂಖ್ಯೆಯು (ಸಂಸ್ಥಾನಗಳ ಹೊರತು) ಇವರು ತೋರಿಸಿದ ಸಂಖ್ಯೆಯ ಇಮ್ಮಡಿಗೆ ಸಮೀಪಿಸಿರುವದನ್ನು ವಾಚಕರು ಈ ಮೊದಲೇ ಅರಿತಿರುವರು. ಸಂಸ್ಥಾನಗಳನ್ನು ಕೂಡಿಸಿದರೆ ಕೋಟಿಗೆ ಮೀರುವದು. ಮರಾಟಿಗರು, ತೆಲಗರು, ಉರಿಯಾ ಜನರು ತಮ್ಮ ಜನಸಂಖ್ಯೆಯನ್ನು ಹೇಳುವಾಗ ಸಂಸ್ಥಾನಗಳನ್ನು ಕೂಡಿಸಿಕೊಂಡು ಹೇಳುತ್ತಿರಲು, ಕರ್ನಾಟಕದ ಜನಸಂಖ್ಯೆಯನ್ನು

ತೋರಿಸುವಾಗ ಸಂಸ್ಥಾನಗಳನ್ನು ಹೊರತುಪಡಿಸಿ ಹೇಳುವದರ ಇಂಗಿತವೇನು? ಸಣ್ಣ ಸಣ್ಣ ಸಂಸ್ಥಾನಗಳನ್ನು ಬಿಟ್ಟರೂ, ಮೈಸೂರು ಹಾಗು ನಿಜಾಮನ ಕರ್ನಾಟಕಗಳು ಕೂಡಿದರೆ ಕನ್ನಡಿಗರ ಜನಸಂಖ್ಯೆಯು ೧೩ ಕೋಟಿಗೆ ಸಮೀಪಿಸುವದು. ಇರಲಿ. ಸಿಡಿದುಬಿದ್ದ ಪ್ರತಿಯೊಂದು ಕರ್ನಾಟಕದ ತುಂಡನ್ನು ವಿಚಾರಿಸದೆ, ಕರ್ನಾಟಕದ ಕ್ಷೇತ್ರವನ್ನೂ, ಜನಸಂಖ್ಯೆಯನ್ನೂ, ಕೊಡುವಾಗ ನಮ್ಮವರೇ ದುರ್ಲಕ್ಷಮಾಡಿರುವಾಗ ಉಳಿದವರಿಗೆ ಹೆಸರಿಡುವ ಕಾರಣವಿಲ್ಲ. ಕರ್ನಾಟಕ ಸಭೆಯ ಅಧ್ಯಕ್ಷರಾಗಿದ್ದ ದಿ. ಬ. ವ್ಹಿ. ಪಿ. ಮಾಧವರಾಯರು ಸಹ ಜನಸಂಖ್ಯೆಯನ್ನು ತೋರಿಸುವಾಗ ಪ್ರಸಿದ್ಧವಾದ ಕನ್ನಡ ಜಿಲ್ಹೆಗಳನ್ನಷ್ಟೇ ಎಣಿಸಿದಂತೆ ಕಾಣುತ್ತದೆ. ರೈ. ಆ. ಮಾಂಟೆಗೂ ಸಾ|| ರ ಕಡೆಗೆ ಧಾರವಾಡದ ಕನ್ನಡಿಗರು ಮಾಡಿದ ಅರ್ಜಿಯಲ್ಲಿ ಇವರಿಗಿಂತ ತುಸು ಹೆಚ್ಚಿಗೆ ವಿಚಾರವಾದದ್ದು ಕಂಡುಬರುತ್ತದೆ. ಅದರಲ್ಲಿಯೂ ಕೊರತೆಯುಂಟು. ಇಷ್ಟೇ ಅಲ್ಲ. ನಾನು ತೋರಿಸಿದ ಮಾರ್ಗದಲ್ಲಿಯೂ ಕೊರತೆಯುಂಟೆಂದು ನಾಳೆ ಮತ್ತೊಬ್ಬರು ಹೇಳಬಹುದು. ಈ ಮಾತು ನನ್ನ ಸ್ಮರಣೆಯಲ್ಲಿದ್ದು, ಈ ಮೊದಲೇ ನಾನು ಇದನ್ನು ಒಪ್ಪಿಕೊಂಡಿರುತ್ತೇನೆ:—ಇನ್ನು ಮರಾಟಿಗರಲ್ಲಿ ೨ನೆಯವರೆಂದರೆ ಶ್ರೀಯುತ ಭೋಪಟಕರರು. ಇವರು "ಸ್ವರಾಜ್ಯದ ಮೀಮಾಂಸೆ" ಎಂಬ ಗ್ರಂಥದ ೩೮-೪೦ ಪುಟಗಳಲ್ಲಿ ಭಾಷೆಯಂತೆ ಪ್ರಾಂತವಿಭಾಗದ ಚರ್ಚೆಯನ್ನು ಮಾಡಿದ್ದು, ಕರ್ನಾಟಕಪ್ರಾಂತವು ಬೇರೆಯಾಗತಕ್ಕದ್ದೆಂದು ಸೂಚಿಸಿರುತ್ತಾರೆ. ಕನಿಷ್ಟಪಕ್ಷಕ್ಕೆ ಮುಂಬೈ ಇಲಾಖೆಯೊಳಗಿನ ಕನ್ನಡಜಿಲ್ಹೆಗಳನ್ನು ಮದ್ರಾಸಕ್ಕೆ ಜೋಡಿಸಿ, ಒಂದೇ ಇಲಾಖೆಯಲ್ಲಿಯಾದರೂ ಕರ್ನಾಟಕವನ್ನು ಸಂಬಂಧಿಸಬೇಕೆಂದು ಸೂಚಿಸುತ್ತಾರೆ. ಇವರು ಈ ಅಭಿಪ್ರಾಯವನ್ನು ಪ್ರಾಮಾಣಿಕತನದಿಂದ ಬರೆದಂತೆ ಕಾಣುತ್ತದೆ. ಆದರೂ ಕನ್ನಡಿಗರಿಗೆ ಸಂಯುಕ್ತ ಕರ್ನಾಟಕಪ್ರಾಂತವೇ ಬೇಕಲ್ಲದೆ, ಮುಂಬೈ ಇಲಾಖೆಯಲ್ಲಿಯಾಗಲಿ, ಮದ್ರಾಸದಲ್ಲಾಗಲಿ ಜೋತಾಡುವದು ಇಷ್ಟವಾಗಿಲ್ಲ. **ಆಡಿನ ಕೊರಳಲ್ಲಿ ಜೋತಾಡಿದರೇನು? ಹೋತಿನ ಕೊರಳಲ್ಲಿ ಜೋತಾಡಿದರೇನು? ಜೋತಾಡುವ ನೊಲೆಗಳಿಗೆ ಮಹತ್ವವಿಲ್ಲವಷ್ಟೇ!** ೩ನೆಯವರು:-ಪ್ರೋ. ದತ್ತೋಪಂತ ಪೋತದಾರರು. ಇವರು ಹಿಂದುಸ್ಥಾನ ಅಂಕವೆಂಬ "ಲೋಕಮಾನ್ಯ" ಪತ್ರದ ಸ್ಪೇಶಲ್ ಸಂಚಿಕೆಯಲ್ಲಿ (ಜನವರಿ ೧೯೨೪) ಮಹಾರಾಷ್ಟ್ರದ ಏಕೀಕರಣವೆಂಬ ವಿಷಯದ ಮೇಲೆ ಲೇಖವನ್ನು ಬರೆದಿದ್ದು,

ಭಾಷೆಯಂತೆ ಪ್ರಾಂತಗಳ ವಿಭಾಗವನ್ನು ಕುರಿತು ತುಸು ಚರ್ಚಿಸಿರುವರು. ಮಹಾರಾಷ್ಟ್ರವು ಏಕೀಕರಣದಿಂದ ಸ್ವತಂತ್ರ ಪ್ರಾಂತವಾದರೆ, ಗುಜರಾಥ, ಕರ್ನಾಟಕ ಪ್ರಾಂತಗಳನ್ನು ಬೇರೆ ಬೇರೆ ಮಾಡಲೇಬೇಕೆಂಬ ಅಭಿಪ್ರಾಯವನ್ನು ಕೊಟ್ಟಿರುವರು. ನ್ಯೂ ಪೂನಾ ಕಾಲೇಜದ ಪ್ರೊಫೆಸರರಾದ ಈ ಮಹಾಶಯರು ಪ್ರಾಮಾಣಿಕತನದಿಂದ ಅಭಿಪ್ರಾಯ ಕೊಟ್ಟಿರುವರೆಂದು ಹೇಳಬೇಕಾಗುವದು. ಇನ್ನು ಕೆಲವರು ಬೆಳಗಾಂವಿಯನ್ನು ಮಹಾರಾಷ್ಟ್ರಕ್ಕೆ ಜೋಡಿಸಬೇಕೆಂದು ಅನ್ನುವರು. ಇದಂತೂ ಮೃಗಜಲವನ್ನು ಬೆನ್ನಟ್ಟಿದಂತಾಗುವದೆಂದು ಹಿಂದೆ ನಾವು ಸೂಚಿಸಿರುತ್ತೇವೆ. ಬೆಳಗಾಂವಿಯ ಕಿಲ್ಲೆಯೊಳಗಿನ ಬಸ್ತಿಗಳಲ್ಲಿ ಎರಡು ಶಿಲಾಲೇಖಗಳಿದ್ದವು. ಈಗ ಅವುಗಳನ್ನು ಇಂಗ್ಲಂಡಿನ ವಸ್ತುಸಂಗ್ರಹಾಲಯಕ್ಕೆ ಕಳಿಸಿರುವರು. ಸವದತ್ತಿಯ ರಟ್ಟರಲ್ಲಿ ೪ನೆಯ ಕಾರ್ತಿವೀರ್ಯನ ಕಾಲದಲ್ಲಿ ೧೨೦೪ ರಲ್ಲಿ ಬರೆಯಲ್ಪಟ್ಟವು. ಬಾಳಚಂದ್ರ ಕವಿಕಂದರ್ಪನೆಂಬ ಕವಿಯು ಬರೆದಿರುತ್ತಾನೆ. ಇವನಿಗೆ ಅನೇಕ ಬಿರುದುಗಳಿದ್ದವು. ಅವುಗಳಲ್ಲಿ ಚತುರ್ಭಾಷಾ ಕವಿಚಕ್ರವರ್ತಿಯೆಂಬದೊಂದಾಗಿರುವದು. ಈ ವಿಷಯವು ಕರ್ನಾಟಕ ವೃತ್ತದಲ್ಲಿ ಶ್ರೀ. ಟಿ. ಟಿ. ಶರ್ಮಾ ಎಂಬವರಿಂದ ಪ್ರಸಿದ್ಧವಾಗಿರುವದನ್ನು ಕನ್ನಡಿಗರು ಮರೆತಿರಲಾರರು. ಇವುಗಳ ಹೊರತು ಬೆಳಗಾಂವಿ ಜಿಲ್ಹೆಯಲ್ಲಿ ಹಲಸಿಗಿ (೨ ಶಿಲಾಲಿಪಿ), ದೇವಗಾಂವಿ (೪), ಕಲ್ಹೊಳ್ಳಿ (೧), (ಗೋಕಾಕ ತಾಲೂಕ) ಮಮದಾಪೂರ (೧), ಗೋಕಾವಿಯ ತಡಸಲದ ಮಹಾಲಿಂಗೇಶ್ವರ (೧), ಹೂಲಿ (೩), ಕಿತ್ತೂರ (೧), ಮುನ್ನೋಳಿ (೧), ಕಾಗವಾಡ (೧), ಶೇಡಬಾಳ (೧), ಸವದತ್ತಿ (೬), ಶಂಕೇಶ್ವರ (೩), ಸೊಗಲ (೧), ಮೊದಲಾದ ಸ್ಥಳಗಳಲ್ಲಿ ಕರ್ನಾಟಕ ಕಟ್ಟಡಗಳಿದ್ದು ಶಿಲಾಲೇಖಗಳೂ ಇರುತ್ತವೆ. ಇವುಗಳ ಹೊರತು ವೀರಗಲ್ಲುಗಳೂ, ಮಹಾಸತಿಗಲ್ಲುಗಳೂ ಹೇರಳವಾಗಿರುವವಲ್ಲದೆ, ಕೆಲವು ತಾಮ್ರಪಟಗಳೂ ದೊರೆಕಿರುತ್ತವೆ. ಕಲ್ಹೋಳ್ಳಿಯ ಬಸ್ತಿಯು ಶಕೆ ೧೧೨೯ ರಲ್ಲಿ ಕಟ್ಟಲ್ಪಟ್ಟದೆ. ಇದು ಸರಕಾರದಿಂದ ಸಂರಕ್ಷಿಸಲ್ಪಟ್ಟ ಕಟ್ಟಡಗಳಲ್ಲಿ ಒಂದಾಗಿರುವದು. ಇರಲಿ. ಬೆಳಗಾಂವಿಯು ಕನ್ನಡ ನಾಡೇ ಇದ್ದು, ಈ ವಿಷಯವನ್ನು ಇಲ್ಲಿ ಸಿದ್ಧಮಾಡುತ್ತ ಕುಳಿತರೆ ಅಧಿಕಪ್ರಸಂಗವಾಗಬಹುದು. ಆಕ್ಷೇಪದ ಸಮಾಧಾನಕ್ಕೆ ಮೇಲೆ ವಿವರಿಸಿದ ಸಂಗತಿಯು ಸಾಕಾಗಿದೆ.

(ii). **ತೆಲಗರು:**—ಜಿ. ಲಕ್ಷ್ಮಣ ರಡ್ಡಿ ಬಿ. ಎ. ವಕೀಲರು ಗುತ್ತಿ ಎಂಬವರು “ಫಾರ ಆ್ಯಂಡ ಅಗೇನ್ಸ್ಟ ಆಂಧ್ರ ಪ್ರಾವಿನ್ಸ” ಎಂಬ ಪುಸ್ತಕದಲ್ಲಿ ಒಂದು ಲೇಖವನ್ನು ಬರೆದಿರುವರು. ಇವರು “ಬಳ್ಳಾರಿಯಲ್ಲಿ ಕನ್ನಡಿಗರು ಬಹು ಸಂಖ್ಯಾಕರಾಗಿರುವದರಿಂದಲೂ, ಅನಂತಪುರದಲ್ಲಿ ಕನ್ನಡಿಗರು ಅಲ್ಪಸಂಖ್ಯಾಕರಿದ್ದರೂ, ಸಧನರಿದ್ದು ವರ್ಚಸ್ಸುಳ್ಳವರಿರುವದರಿಂದಲೂ, ಇವೆರಡು ಜಿಲ್ಹೆಗಳನ್ನು ನುಂಗಿ ಪಚನಮಾಡಿಕೊಳ್ಳುವದು ಜಡವಾಗಿರುವದೆಂ”ಬ ಖೇದೋದ್ಗಾರವನ್ನು ತೆಗೆದಿರುವರು. ಬಳ್ಳಾರಿಜಿಲ್ಹೆಯು ಕನ್ನಡವೆಂದು ಶ್ರೀಯುತ ಆಲೂರವರು ೧೯೩೦ನೆಯ ಜುಲೈ ತಿಂಗಳ ಸಾಹಿತ್ಯಪರಿಷತ್ಪತ್ರಿಕೆಯಲ್ಲಿ ಸಿದ್ಧಮಾಡಿರುವರು. ಅನಂತಪುರವಂತೂ ಮೊದಲು ಬಳ್ಳಾರಿ ಜಿಲ್ಹೆಯಲ್ಲಿಯೇ ಇದ್ದಿತು. ಕನ್ನಡಿಗರು ಉದಾಸೀನರಾದುದರಿಂದ ಪೂರ್ವಭಾಗದಲ್ಲಿ ತೆಲಗರು ಪ್ರಾಬಲ್ಯವನ್ನು ಹೆಚ್ಚಿಸುತ್ತಿರುವರು. ಆಂಧ್ರರು ನುಂಗಲಿಚ್ಛಿಸುವ ಈ ಭಾಗವನ್ನು ಕನ್ನಡಿಗರು ಜಾಗ್ರತೆಯೆಂಬ ಜುಲಾಬಿನ ಔಷಧವನ್ನು ಕೊಟ್ಟು ಪಚನವಾಗದಂತೆ ಮಾಡುವದು ಲೇಸು! ಇಲ್ಲದಿದ್ದರೆ ಮುಂದೆ ಶಸ್ತ್ರಕ್ರಿಯೆ (ಅಪರೇಶನ್) ಮಾಡುವದು ಜಡವಾಗುವದು. ಇನ್ನು ಎನೆಯವರು ಶ್ರೀ. ಸೂರ್ಯನಾರಾಯಣರಾಯರು. ಇವರು ಅದೇ ಪುಸ್ತಕದಲ್ಲಿ ಬರೆದ ಒಂದು ಲೇಖದಲ್ಲಿ—ಆಂಧ್ರಪ್ರಾಂತಕ್ಕೆ ಹಂಪಿಯು ರಾಜಧಾನಿಯಾದರೆ ಒಳ್ಳೇ ಶೋಭಿಸುವದೆಂದು ತಮ್ಮ ಹಂಬಲವನ್ನು ತೋರಿಸುವರು. ಕನ್ನಡಿಗರೇ ಇನ್ನಾದರೂ ಜಾಗ್ರತರಾಗಿರಿ! ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯರೆಂದು ಹೆಸರಾದ ಶ್ರೀವಿದ್ಯಾರಣ್ಯರ ಅಭಿಮಾನದ ಸ್ಥಳದಲ್ಲಿ ಆಂಧ್ರರು ತಮ್ಮ ಸಿಂಹಾಸನವನ್ನು ಸ್ಥಾಪಿಸಬೇಕೆನ್ನುವರು! ಇನ್ನು ಕೆಲವರು ಆಂಧ್ರರು ಪ್ರಾಮಾಣಿಕತನವನ್ನು ತೋರಿಸುವ ನೆವದಿಂದ ತಮ್ಮ ಜೊತೆಗೆ ಕರ್ನಾಟಕಕ್ಕೂ ಸ್ವತಂತ್ರ ಪ್ರಾಂತವು ದೊರೆಯಬೇಕೆಂದು ಸೂಚಿಸಿರುತ್ತಾರೆ. ಆದರೆ ಇವರಿಗೆ ಬಳ್ಳಾರಿ, ಅನಂತಪುರಗಳ ಮೋಹವು ಮಾತ್ರ ಇನ್ನೂ ಹೋಗಿರುವದಿಲ್ಲ. ಈ ಮೋಹವನ್ನು ಹೋಗಲಾಡಿಸಲಿಕ್ಕೆ ಬಳ್ಳಾರಿ, ಅನಂತಪುರಗಳ ಕನ್ನಡಿಗರೇ ಪ್ರಯತ್ನಿಸಬೇಕಲ್ಲದೆ ಬೇರೆ ಗತಿಯೇನು? ರಾಷ್ಟ್ರೀಯ ಸಭೆಯು ಕರ್ನಾಟಕಕ್ಕೆ ಪ್ರಾಂತಿಕಸ್ವರೂಪವನ್ನು ಕೊಟ್ಟಾಗ, ಗಡಿಗಳನ್ನು ಗೊತ್ತುಮಾಡುವದಕ್ಕಾಗಿ ಒಂದು ಕಮೀಟಿಯನ್ನು ಗೊತ್ತುಪಡಿಸಿತು. ಶ್ರೀ. ನ. ಚಿ. ಕೇಳಕರರವರು ಈ ಕಮೀಟಿಗೆ ಅಧ್ಯಕ್ಷರಾಗಿ ಬಳ್ಳಾರಿಯ ಬಗ್ಗೆ ವಿಚಾರಮಾಡಿದರು.

ಪೂರ್ವದ ಮೂರು ತಾಲೂಕಗಳನ್ನು ಆಂಧ್ರಪ್ರಾಂತಕ್ಕೆ ಕೂಡಿಸಬೇಕೆಂದು ಅಭಿಪ್ರಾಯವನ್ನು ಕೊಟ್ಟರಂತೆ! ಪೂರ್ವದ ಈ ತಾಲೂಕುಗಳಲ್ಲಿ ನೂರಕ್ಕೆ ೫೦ ರಂತೆ ಕನ್ನಡಿಗರು, ಉಳಿದವರು ತೆಲಗರು, ಅಂದರೆ ಅರ್ಧ ಕನ್ನಡಿಗರು, ಅರ್ಧ ತೆಲಗರು ಇರುವದೇನೋ ನಿಜವು! ತೆಲಗರ ಪ್ರಾಬಲ್ಯದಿಂದ ಈ ಸ್ಥಿತಿಯು ಬಂದದೆ. ಇರಲಿ. ಅರ್ಧ ತೆಲಗರು ಇದ್ದ ಮಾತ್ರಕ್ಕೆ ತೆಲಗರಿಗೆಯೇ ಈ ತಾಲೂಕಗಳು ಏಕೆ ಹೋಗಬೇಕು? ಅರ್ಧ ಕನ್ನಡಿಗರಿದ್ದದರಿಂದ ಕರ್ನಾಟಕಕ್ಕೆ ಏಕೆ ಸೇರಬಾರದು? ಇದರ ಉತ್ತರವು ಕೇಳಕರರಿಗೇ ಗೊತ್ತು! ಬಳ್ಳಾರಿ ಪೂರ್ಣ, ಅನಂತಪುರ ಜಿ. ಷ ಭಾಗವು ಕರ್ನಾಟಕಕ್ಕೆ ಸೇರಲೇ ಬೇಕು. ಇದು ಮಧ್ಯಮ ಯೋಜನೆಯು.

(iii) **ಉರಿಯಾ ಜನರು:**—“ಉರಿಯಾ ಮುವ್ಹಮೆಂಟ” ಎಂಬ ಗ್ರಂಥದ ಉಪೋದ್ಘಾತದಲ್ಲಿ (೧) ಓಡಿಸಾಪ್ರಾಂತವೇ ವಿಶೇಷವಾಗಿ ಛಿನ್ನ ವಿಚ್ಛಿನ್ನವಾಗಿದೆ. (೨) ಉರಿಯಾ ಜನರಿಗೆ ಮಾತ್ರ ಒತ್ತಾಯದ ಪರಭಾಷಾ ಶಿಕ್ಷಣವು ಕೊಡಲ್ಪಡುತ್ತದೆ. (೩) ಉರಿಯಾ ಜನರಿಗೆ ಎಲ್ಲಿಯೂ ಬಹುಮತ ವಿಲ್ಲ ಎಂದು ತಮ್ಮ ದೈನ್ಯವನ್ನು ದೂರಿಕೊಂಡಿರುವರು. ಇಷ್ಟಕ್ಕೆ ಬಿಟ್ಟಿದ್ದರೆ ಕರ್ನಾಟಕದ ಸ್ಥಿತಿಯು ನಿಮ್ಮಂತೆಯೇ ಇರುತ್ತದೆ. ಸ್ವಾಮೀ! ಎಂದು ಒಂದೇ ಮಾತಿನಿಂದ ನಾವೂ ಉತ್ತರವನ್ನು ಮುಗಿಸುತ್ತಿದ್ದೆವು. ಇವರು ಕರ್ನಾಟಕ ಪ್ರಾಂತದ ವಿಷಯವಾಗಿ ಅಜ್ಞಾನವನ್ನು ಪ್ರಕಟಿಸಿರುವರು. “ಕರ್ನಾಟಕದ ಜನಸಂಖ್ಯೆಯು ಉರಿಯಾ ಜನರಷ್ಟೇ ಇದ್ದರೂ, ಓಡಿಸಾ ಪ್ರಾಂತದಷ್ಟು ಅದರ ಸ್ಥಿತಿಯು ಶೋಚನೀಯವಾಗಿಲ್ಲ. ಎಲ್ಲಕ್ಕೂ ಹೆಚ್ಚಿನದೆಂದರೆ—ಕರ್ನಾಟಕದ ಹಿತವು ಊರ್ಜಿತ ಸ್ಥಿತಿಯಲ್ಲಿರುವ ಮೈಸೂರ ಸಂಸ್ಥಾನದಿಂದ ಯಾವಾಗಲೂ ದಕ್ಷತೆಯಿಂದ ರಕ್ಷಿಸಲ್ಪಡುವದು” ಎಂದು ಎಲ್ಲವನ್ನು ಬಲ್ಲವರಂತೆ ಪ್ರಸ್ತಾಪಿಸಿರುವರು. ಮೈಸೂರು ಊರ್ಜಿತಾವಸ್ಥೆಯಲ್ಲಿದ್ದ ಮಾತ್ರಕ್ಕೆ ಕರ್ನಾಟಕವನ್ನು ಏಕೀಕರಿಸಬಲ್ಲದೆ? ಕರ್ನಾಟಕದ ಹಿತದ ಬಗ್ಗೆ ಮುಂಬೈ, ಮದ್ರಾಸ, ಕೌನ್ಸಿಲ್‌ಗಳಲ್ಲಿ ಹೋರಾಡಬಲ್ಲದೆ? ಕನ್ನಡಿಗರ ಸಂಸ್ಥಾನವೆಂಬ ದೃಷ್ಟಿಯಿಂದ ಮೈಸೂರದ ವಿಷಯವಾಗಿ ನಾವು ಅಭಿಮಾನವನ್ನೂ, ಪೂಜ್ಯಭಾವವನ್ನೂ, ತೋರಿಸಿರುತ್ತೇವೆ. ಮುಂದಾದರೂ ತೋರಿಸುವೆವು.

**೨. ಕರ್ನಾಟಕ ಪ್ರಾಂತವು ಶಕ್ಯವೆ?:**—ಎಂದು ಕೆಲವರು ಆಕ್ಷೇಪಿಸುವರು. (೧) ಕ್ಷೇತ್ರ-ಜನಸಂಖ್ಯೆ, (೨) ಆಧಳತೆಯಲ್ಲಿ ಅನುಕೂಲತೆ, (೩) ಆಯುವ್ಯಯ. ಈ ಮೂರು ಸಂಗತಿಗಳಿಗೆ ಸಮಾಧಾನಕಾರಕವಾದ ಉತ್ತರವು ದೊರೆತರೆ ಹೊಸ ಪ್ರಾಂತದ ರಚನೆಯಲ್ಲಿ ಬರುವ ಮುಖ್ಯವಾದ ವಿಘ್ನಗಳು ದೂರಾಗುವವು. ಕ್ಷೇತ್ರ-ಜನಸಂಖ್ಯೆಗಳನ್ನು ಈ ಮೊದಲೇ ನಿರ್ಣಯಿಸಿರುತ್ತೇನೆ. ಇದು ಸ್ವತಂತ್ರ ಪ್ರಾಂತಕ್ಕೆ ಸಾಕಷ್ಟು ಇರುತ್ತದೆಂದು ಹೇಳಲು ಅಡ್ಡಿ ಇಲ್ಲ. ಉಳಿದವುಗಳ ವಿಷಯವಾಗಿ ಮುಂದೆ ಬರೆಯತಕ್ಕವನಿರುತ್ತೇನೆ. ಅಲ್ಲಿಯವರೆಗೆ ತಡೆಯಲಿಕ್ಕಾಗದೆ ಇದ್ದರೆ "ಕರ್ನಾಟಕ ಪ್ರಾಂತವಾಗುವದು ಶಕ್ಯವಾಗಿದೆ" ಎಂದು ಉತ್ತರವನ್ನು ಕೊಡಬಲ್ಲೆನು.

**೩. ಸಬಲರ ಸಹಾಯವು ತಪ್ಪುವದಷ್ಟೆ?:**—ಮರಾಟಿಗರಲ್ಲಿ ವಿದ್ವಾಂಸರೂ ಸಾಹಸಿಗಳೂ ಹೆಚ್ಚಿರುವದರಿಂದಲೂ, ಗುಜರಾಥಿಗಳಲ್ಲಿ ಧನವಂತರು ಹೆಚ್ಚಿರುವದರಿಂದಲೂ, ಇವರೊಡನೆ ಮುಂಬೈ ಇಲಾಖೆಯಲ್ಲಿ ಕೂಡಿರುವದರಿಂದ, ಅನಾಯಾಸವಾಗಿ ಕರ್ನಾಟಕಕ್ಕೆ ಲಾಭವಾಗುತ್ತಿದ್ದು, ಸ್ವತಂತ್ರ ಪ್ರಾಂತದ ಹಂಬಲದಿಂದ ಇದನ್ನೇಕೆ ತಪ್ಪಿಸಿಕೊಳ್ಳಬೇಕು? ಎಂದು ಕೆಲವರು ಕೇಳುವರು. ಮೇಲೆ ಮೇಲೆ ನೋಡುವವರಿಗೆ ಈ ಪ್ರಶ್ನವು ಚಂದಕಾಣುತ್ತಿದ್ದರೂ, ಇದರಲ್ಲಿ ಏನೂ ಹುರುಳಿಲ್ಲ. ಎಲ್ಲಿಯವರೆಗೆ ಸಬಲರು ಸ್ವಾರ್ಥಿಗಳಾಗಿರುವದಿಲ್ಲವೋ, ಅಲ್ಲಿಯವರೆಗೆ ಸಬಲರ ಸಹಾಯವು ಮನಃಪೂರ್ವಕವೂ, ಹಿತಕರವೂ ಆಗಿರುತ್ತದೆ. ಆದರೆ ಸಬಲರು ದುರ್ಬಲರನ್ನು ನುಂಗತೊಡಗಿದರೆ ದುರ್ಬಲರು ಸರಿದು ಬೇರೆ ನಿಂತಹೊರತು ಗತ್ಯಂತರವಿಲ್ಲ. ಸ್ವತಂತ್ರಪ್ರಾಂತವನ್ನು ಬೇಡುವ ತೆಲಗು, ಉರಿಯಾ ಮೊದಲಾದವರೆಲ್ಲರು ಈ ಅಭಿಪ್ರಾಯವನ್ನೇ ಮಂಡಿಸಿರುತ್ತಾರೆ. ಬಹುಸಂಖ್ಯಾಕರೇ ಕಾರ್ಯವನ್ನು ಸಾಗಿಸುತ್ತ ಹೋದರೆ ಲಘುಸಂಖ್ಯಾಕರಿಗೆ ರಾಜಕಾರಣದ ಗಂಧವೂ ಸಹ ಗೊತ್ತಾಗಲಿಕ್ಕಿಲ್ಲ. ಆದ್ದರಿಂದಲೇ ಸ್ವತಂತ್ರಪ್ರಾಂತದ ಬೇಡಿಕೆಯು. ಈ ಲಾಭದ ಮುಂದೆ ಸಬಲರ ಸಹಾಯದ ಲಾಭವು ಕಃಪದಾರ್ಥವು!

**೪. ಭಾರತೀಯ ಐಕ್ಯಕ್ಕೆ ಪೋಷಕವೇ?:**—ಹಿಂದುಸ್ಥಾನದಲ್ಲಿ ಒಂದೇ ಜಾತಿ ಇಲ್ಲ. ಒಂದೇ ಭಾಷೆಯಿಲ್ಲ. ಹಾಗೆ ಇದ್ದರೆ ಸ್ವತಂತ್ರಪ್ರಾಂತ

ವನ್ನು ಬೇಡುವ ಅವಶ್ಯಕತೆಯೇ ಉಳಿಯುತ್ತಿದ್ದಿಲ್ಲ. ಹಾಗಿಲ್ಲದ್ದರಿಂದ ಸದ್ಯಸ್ಥಿತಿಗೆ ಅನುಗುಣವಾಗುವಂತೆ ಹಿಂದುಸ್ಥಾನದ ಧ್ಯೇಯವನ್ನು ಬಲ್ಲವರು ಗೊತ್ತುಪಡಿಸಿ ರುತ್ತಾರೆ. ಅದೇನಂದರೆ—“ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಿ, ಆಯಾ ಪ್ರಾಂತಗಳಿಗೆ ಪ್ರಾಂತಿಕ ಸ್ವಾತಂತ್ರ್ಯವನ್ನು ಕೊಟ್ಟು, ಇವುಗಳನ್ನು ಮೇಲ್ವಿಚಾ ರಕ ಸರಕಾರದಿಂದ ಕೇಂದ್ರೀಕರಿಸುವದು. ” ಇದರಿಂದ ತಮ್ಮ ತಮ್ಮ ಪ್ರಾಂತ ಗಳನ್ನು ಮುಂದೆ ತರುವದಕ್ಕಾಗಿ ಪರಾಕಾಷ್ಟದ ಪ್ರಯತ್ನ ಮಾಡಲಿಕ್ಕೆ ಪ್ರತಿ ಯೊಬ್ಬರಿಗೂ ಅನುವು ದೊರೆಯುವದರಿಂದ, ದ್ವೇಷಾಸೂಯಗಳಿಗೆ ಕಾರಣ ವಿಲ್ಲದಂತಾಗಿ, ನೆರೆಯ ಪ್ರಾಂತದವರ ಕೂಡ ಸಹಕಾರವನ್ನಿಡುವ ಇಚ್ಛೆಯು ಪ್ರತಿಯೊಬ್ಬರಲ್ಲಿಯೂ ಉಂಟಾಗುವದು ಸ್ವಾಭಾವಿಕವಾಗಿದೆ. ಹೊರಗಿನ ನೋ ಟಕ್ಕೆ ಕೂಡಿದ್ದವರಂತೆ ತೋರಿಸಿ ಒಳಗೆ ಹೊಡೆದಾಡುವದಕ್ಕಿಂತ, ಹೊರಗಿನ ನೋಟಕ್ಕೆ ಬೇರೆ ನಿಂತಂತೆ ಕಂಡುಬಂದರೂ, ಪರಸ್ಪರರಲ್ಲಿ ಸಹಕಾರದ ಹಾಗೂ ಸಹಾಯದ ವ್ಯವಹಾರವಿದ್ದರೆ, ಅಖಿಲ ಭಾರತೀಯ ಐಕ್ಯಕ್ಕೆ ಪೋಷಕವೆಂದೇ ಹೇಳಬಹುದು.

**೫. ಸಂಸ್ಥಾನಗಳು ಒಡಂಬಡುವವೇ?:—** ಸಂಸ್ಥಾನಿಕರನ್ನು ಕಿತ್ತೊಗೆದು ಅವರ ವಶದಲ್ಲಿದ್ದ ಕರ್ನಾಟಕದ ಭಾಗಗಳನ್ನು ಬ್ರಿಟಿಶ್ ಕರ್ನಾಟ ಕಕ್ಕೆ ಜೋಡಿಸಿ, ಒಂದು ಅಖಂಡ ಕರ್ನಾಟಕ ಪ್ರಾಂತವನ್ನು ಮಾಡಬೇಕೆಂದು ಯಾರಾದರೂ ಹೇಳಿದರೆ, ಆಗ ಈ ಪ್ರಶ್ನವನ್ನು ಕೇಳಿದರೆ ನೆಟ್ಟಗಾಗುವದು. ಸಂಸ್ಥಾನಿಕರನ್ನು ಮುರಿಯುವದು ನಮ್ಮ ಧೋರಣವಿಲ್ಲ. ಹಾಗೂ ಅವರ ಅಧಿ ಕಾರದಲ್ಲಾಗಲಿ, ಉತ್ಪನ್ನದಲ್ಲಾಗಲಿ ಕೈಹಾಕುವದು ನಮ್ಮ ಇಚ್ಛೆಯಿಲ್ಲ. ಅವರೂ ನಮ್ಮ ಕನ್ನಡ ಬಂಧುಗಳಾದ್ದರಿಂದ ಪರಸ್ಪರ ಸಹಕಾರವನ್ನೂ ಸಹಾಯವನ್ನೂ ಬಯಸುತ್ತೇವೆ. ಇದಕ್ಕೇಕೆ ಸಂಸ್ಥಾನಗಳು ಒಡಂಬಡಲಿಕ್ಕಿಲ್ಲ?

**೬. ಕೊಡಗು ಎಡರಾಗದೇ?:—**ಕೊಡಗರಿಗೆ ಶಸ್ತ್ರಗಳ ಕಾಯದೆ (ಆರ್ಮ್ಸ ಆಕ್ಟ) ಯ ಸಂಬಂಧವಿಲ್ಲ. ಉಳಿದ ಬ್ರಿಟಿಶ್ ಜಿಲ್ಲೆಗಳಲ್ಲಿ ಯಾವ ಜಿಲ್ಲೆಗೂ ಈ ಅನುಕೂಲತೆಯು ದೊರೆತಿರುವದಿಲ್ಲ. ಆದ್ದರಿಂದ ಕೊಡಗು ಸಣ್ಣ ದಾದರೂ, ಅದನ್ನು ಬೇರೆ ಇಟ್ಟಿರುತ್ತಾರೆ. ಹೀಗಿರಲು ಅದು ಕರ್ನಾಟಕ ಪ್ರಾಂತ ದಲ್ಲಿ ಸೇರಿ ತನಗೆ ಇರುವ ವಿಶೇಷ ಅನುಕೂಲತೆಗಳನ್ನು ಕಳೆದುಕೊಳ್ಳಲಿಕ್ಕೆ

ಹೇಗೆ ಸಿದ್ಧವಾದೀತು? ಎಂದು ಕೆಲವರು ಪ್ರಶ್ನವನ್ನು ಮಾಡುವರು. ಈ ಅಭಿಪ್ರಾಯವನ್ನು ಲಕ್ಷದಲ್ಲಿಟ್ಟುಕೊಂಡು ಭಾವೀಕರ್ನಾಟಕದಲ್ಲಿ ನಾವು ಕೊಡಗನ್ನು ಸ್ವತಂತ್ರ ಜಿಲ್ಹೆಯಾಗಿ ಇಟ್ಟಿರುತ್ತೇವೆ. ಅದರ ಯಾವ ಅನುಕೂಲತೆಯನ್ನೂ ಅಪಹರಿಸುವ ಇಚ್ಛೆಯು ನಮಗಿಲ್ಲ. ಆ ತರದ ಅನುಕೂಲತೆಯು ಉಳಿದವರಿಗೂ ದೊರೆಯಬೇಕೆಂದು ನಾವು ಹೋರಾಡುತ್ತಿರುವಾಗ, ಇದ್ದವರ ಅನುಕೂಲತೆಗಳನ್ನು ಅಪಹರಿಸಿರೆಂದು ಹೇಳುವದು ಜಾಣತನದ ಕೆಲಸವೆಂದು ಯಾರು ಅಂದಾರು? ಅದ್ದರಿಂದ ಕೊಡಗು ನಮ್ಮ ಮಾರ್ಗದಲ್ಲಿ ಎಡರಾಗಲಿಕ್ಕೆ ಯಾವ ಕಾರಣವೂ ಇರುವದಿಲ್ಲ.

೭. **( ೨೬೪ ) ಭಾಷೆಗಳ ವ್ಯವಸ್ಥೆಯೇನು?**:—ಹಿಂದುಸ್ಥಾನದಲ್ಲಿ ೨೬೪ ಭಾಷೆಗಳು ನಡೆಯುತ್ತಿದ್ದು, ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದಾದರೆ ೨೬೪ ಪ್ರಾಂತಗಳನ್ನು ಮಾಡಬೇಕಾಗುವದೋ ಹೇಗೆ? ಎಂಬದೊಂದು ವಿಚಿತ್ರಪ್ರಶ್ನವನ್ನು ಕೇಳಬಹುದು. ಹತ್ತೇ ಜನರು ಒಂದು ಭಾಷೆಯನ್ನು ಮಾತಾಡುತ್ತಿದ್ದರೆ ಆ ಹತ್ತು ಜನರಿಗಾಗಿ ಒಂದು ಪ್ರಾಂತವನ್ನು ಬೇರೆಯಾಗಿ ಬೇಡುವದು ಯಾರಿಗೆ ಸಮಂಜಸವೆನಿಸೀತು? ಹೊಸದಾಗಿ ಪ್ರಾಂತಗಳನ್ನು ಮಾಡಬೇಕಾದರೆ ಹಿಂದೆ ವಿವರಿಸಿದ ಮೂರು ಸಂಗತಿಗಳು ಅವಶ್ಯವಾಗಿದ್ದು, ಅವುಗಳನ್ನು ಸರಕಾರವು ಮೊದಲು ಲಕ್ಷಪೂರ್ವಕವಾಗಿ ವಿಚಾರಿಸುತ್ತದೆ. ಆ ದೃಷ್ಟಿಯಿಂದ ವಿಚಾರಿಸಿದರೆ ಹಿಂದುಸ್ಥಾನದೊಳಗಿನ ೨೬೪ ಭಾಷೆಗಳಿಗೆಲ್ಲ ಸ್ವತಂತ್ರ ಪ್ರಾಂತಗಳು ದೊರೆಯುವದು ಶಕ್ಯವಾಗಿಲ್ಲ. ಸುಮಾರು ೨೦ ಭಾಷೆಗಳಿಗೆ ಸ್ವತಂತ್ರ ಪ್ರಾಂತಗಳು ದೊರೆಯುವದು ಶಕ್ಯವಾಗಿದೆ.

೮. **ಇಸಾಪನೀತಿಯ ಒಂದು ಕಥೆಯು**:—ಸ್ವತಂತ್ರಪ್ರಾಂತದ ವಿಷಯವಾಗಿ ಸವಿಸ್ತರ ಚರ್ಚಿಸಿದ ಗ್ರಂಥಗಳನ್ನು ಉರಿಯಾಜನರೂ, ತೆಲಗರೂ ಪ್ರಸಿದ್ಧಪಡಿಸಿರುತ್ತಾರೆ. ಮರಾಟಿಗರು ಬಿಡಿಬಿಡಿಯಾಗಿ ಲೇಖಗಳನ್ನು ಪ್ರಸಿದ್ಧಿಸಿರುತಾರೆ. ಕನ್ನಡದಲ್ಲಿಯಂತೂ ಈ ಮಾದರಿಯ ಗ್ರಂಥವು ಇದೇ ಮೊದಲನೆಯದು. ಕೆಲವರು ತಮಗೆ ಸ್ವತಂತ್ರವಾದ ಪ್ರಾಂತವು ತೀವ್ರವಾಗಿ ಸಿಗಬೇಕೆಂದು, ಬರೆಯುವ ಭರದಲ್ಲಿ ಉಳಿದ ಪ್ರಾಂತದವರ ವಿಷಯವಾಗಿ ಕಾರಣವಿಲ್ಲದೆ ಕೊಚ್ಚಿರುತ್ತಾರೆ. ಇದು ಸರಿಯಲ್ಲ. ಮನೆಯಲ್ಲಿ ತಂದೆಯು ತಿನ

ಸುಗಳನ್ನು ಎಲ್ಲ ಹುಡುಗರಿಗೆ ಹಂಚುವಾಗ ಸುಮ್ಮನೆ ಕುಳಿತರೂ ಎಲ್ಲರಿಗೆ ಸಿಗುವಷ್ಟು ಸಿಕ್ಕೇ ಸಿಗುತ್ತದೆ. ಯಾಕಂದರೆ ತಂದೆಗೇನೂ ಪಕ್ಷಪಾತವನ್ನು ಮಾಡಬೇಕಾಗುವದಿಲ್ಲ. ಆದರೆ ಹುಡುಗರು ಮಾತ್ರ ನನಗೆ ಬೇಕು, ನನಗೆ ಬೇಕು ಎನ್ನುತ್ತ ಇತರರನ್ನು ಹಿಂದಕ್ಕೆ ದಬ್ಬಿ ತಮ್ಮ ಕೈಯನ್ನು ಮುಂದೆ ಚಾಚ ಲಿಕ್ಕೆ ಹವಣಿಸುತ್ತಿರುವದರ ಸೌಮ್ಯವೇ ಈ ಪ್ರಾಂತಿಕ ಚಳವಳಿಗಾರರಿಗೂ ಸಂಬಂಧಿಸುವಂತೆ ಕಂಡುಬರುತ್ತದೆ. ಈ ಸ್ಥಿತಿಯನ್ನು ನೋಡಿ ಇಸಾಪನೀತಿಯ ಒಂದು ಕಥೆಯು ನಮಗೆ ನೆನಪಿಗೆ ಬರುತ್ತದೆ. ಅದೇನಂದರೆ—“ಈ ಜಗತ್ತಿ ನಲ್ಲಿ ಹುಟ್ಟಿ ಬಂದ ಪ್ರತಿಯೊಬ್ಬ ಮನುಷ್ಯನ ಹೆಗಲಮೇಲೆ ಒಂದು ಹಸಿಬಿ ಇರುತ್ತದೆ. ಆದರಲ್ಲಿ ಹಿಂಭಾಗದ ಚೀಲದಲ್ಲಿ ತನ್ನ ಸ್ವಂತ ತಪ್ಪುಗಳೂ, ಮುಂಭಾ ಗದಲ್ಲಿ ಇತರರ ತಪ್ಪುಗಳೂ ತುಂಬಿರುತ್ತವೆ. ಆದ್ದರಿಂದ ಅವನಿಗೆ ಇತರರ ತಪ್ಪುಗಳು ಕಾಣುತ್ತವೆ. ತನ್ನ ಸ್ವಂತ ತಪ್ಪುಗಳು ಕಾಣುವದಿಲ್ಲ.” ಈ ಕಥೆಯ ಇಂಗಿತವನ್ನು ಲಕ್ಷದಲ್ಲಿಟ್ಟುಕೊಂಡು ಈ ಪ್ರಾಂತಿಕ ಚಳವಳಿಗಾರರು ವರ್ತಿ ಸತಕ್ಕದ್ದು. ನಮ್ಮಂತೆ ತೆಲಗರಿಗೂ, ಮರಾಟಿಗರಿಗೂ, ಸಿಂಧಿಜನರಿಗೂ ಗುಜ ರಾಥಿ ಜನರಿಗೂ ಮತ್ತು ಶಕ್ಯವಿದ್ದವರಿಗೆಲ್ಲ ಸ್ವತಂತ್ರಪ್ರಾಂತವು ದೊರೆಯಲೆಂದೇ ನಾವು ಹಾರೈಸುತ್ತೇವೆ. ನಾವು ಮೇಲೆ ಮೇಲೆ, “ಮರಾಟಿಗರೂ, ತೆಲಗರೂ” ಎಂದು ಬರೆಯುತ್ತಿರುವದರಿಂದ ಅವರ ವಿಷಯವಾಗಿ ನಮ್ಮಲ್ಲಿ ಅಸೂಯೆ ಯುಂಟೆಂದು ಯಾರೂ ಕಲ್ಪಿಸಕೂಡದು. ತಮ್ಮ ಗ್ರಂಥದಲ್ಲಿ ಹಾಗೂ ಲೇಖ ದಲ್ಲಿ ಅಸಂಬದ್ಧವಾಗಿ ಪ್ರಲಾಪಿಸಿ ಕರ್ನಾಟಕದ ವಾತಾವರಣವನ್ನು ಕೆಡಿಸಿ ದರೆ, ಅಭಿಮಾನಿಯಾದ ಕನ್ನಡಿಗನು ಗಾಳಿಯನ್ನು ಬೀಸಿ ಅದನ್ನಷ್ಟು ಶುದ್ಧ ಮಾಡಲೇ ಬೇಕಾಗುವದು.

---

# ಹತ್ತನೆಯ ಪ್ರಕರಣ.

## ನಿಶ್ಚಿತ ಯೋಜನೆಯೂ, ರಾಜ್ಯದಾಢಳತೆಯ ತರವೂ.



೧ ಸದ್ಯದ ಪ್ರಾಂತಗಳ ವಿವರವು, ೨ ಪ್ರಾಂತಗಳ ವರ್ಗೀಕರಣ, ೩ ಭಾವೀ ಕರ್ನಾಟಕ ಪ್ರಾಂತದ ತುಲನೆ, ೪ ನಿಶ್ಚಿತ ಯೋಜನೆಯು, ೫ ರಾಜ್ಯದಾಢಳತೆಯ ತರವು, ೬ ಹೆಚ್ಚುಕಡಿಮೆಗಳು, ೭ ಆಕ್ಷೇಪನಿವಾರಣ, ೮ ಒಂದೆರಡು ಉದಾಹರಣೆಗಳು.

### ೧. ಸದ್ಯದ ಪ್ರಾಂತಗಳ ವಿವರವು:—

| | ಪ್ರಾಂತಗಳು. | ಕ್ಷೇತ್ರ. | ಜನಸಂಖ್ಯೆ. | ಜಿಲ್ಹೆಗಳ ಸಂಖ್ಯೆ. |
|---|---|---|---|---|
| ೧ | ಮುಂಬಯಿ | ೧೨೩೦೫೯, | ೧೯೬೭೨೬೪೨ | ೨೬ |
| ೨ | ಮದ್ರಾಸ | ೧೪೨೩೩೦, | ೪೧೪೦೫೪೦೪ | ೨೪ |
| ೩ | ಬಂಗಾಲ | ೭೮೬೯೯, | ೪೫೪೮೩೦೭೭ | ೨೮ |
| ೪ | ಬಿಹಾರ-ಓಡಿಸಾ | ೮೩೧೮೧, | ೩೪೪೯೦೦೮೪ | ೨೧ |
| ೫ | ಸಂಯುಕ್ತಪ್ರಾಂತ | ೧೦೭೨೬೭, | ೪೭೧೮೭೦೪೪ | ೪೮ |
| ೬ | ಪಂಜಾಬ | ೯೯೭೭೯, | ೧೯೯೭೪೯೫೬ | ೨೯ |
| ೭ | ಮಧ್ಯಪ್ರಾಂತ (ವರ್ಹಾಡ) | ೯೯೮೨೩, | ೧೩೯೧೬೩೦೮ | ೨೨ |
| ೮ | ಆಸಾಮ | ೫೩೦೧೫, | ೬೭೧೩೬೩೫ | ೧೨ |
| ೯ | ಬ್ರಹ್ಮದೇಶ | ೨೩೦೮೩೯, | ೧೩೧೧೫೨೧೭ | ೪೧ |
| ೧೦ | ವಾಯುವ್ಯ ಸರಹದ್ದಿಪ್ರಾಂತ | ೧೩೪೧೮, | ೨೧೯೬೯೩೩ | ೫ |
| ೧೧ | ಬ್ರಿಟಿಶ್ ಬಲುಚಿಸ್ತಾನ | ೫೪೨೭೮, | ೪೧೪೪೧೨ | ೬ |
| ೧೨ | ಕೊಡಗು | ೧೫೮೨, | ೧೭೪೯೭೬ | ೧ |
| ೧೩ | ಅಜಮೀರ | ೨೭೧೧, | ೫೦೧೩೯೫ | ೨ |
| ೧೪ | ಅಂದಮಾನ | ೩೧೪೩, | ೨೬೪೫೯ | ... |

೧೫ ದಿಲ್ಲಿ:—(ದಿಲ್ಲಿಯನ್ನು ಹಿಂದುಸ್ಥಾನದ ರಾಜಧಾನಿಯಾಗಿ ಗೊತ್ತುಪಡಿಸಿದ ನಂತರ ಅದಕ್ಕೆ ಮಹತ್ವವನ್ನು ತಂದುಕೊಡುವದಕ್ಕಾಗಿಯೂ, ಆಢಳತೆಯ ಅನುಕೂಲತೆಗಾಗಿಯೂ, ಸುತ್ತಲಿನ ಪ್ರದೇಶವನ್ನು ಸೇರಿಸಿ, "ದಿಲ್ಲಿಪ್ರಾಂತ"

ವನ್ನು ತಾ. ೧–೧೦–೧೯೧೨ ಇಸ್ವಿ ದಿವಸ ಬೇರೆ ಮಾಡಿರುತ್ತಾರೆ. ಇದು ಅತಿಶಯ ಸಣ್ಣದು.)

(೨) **ಪ್ರಾಂತಗಳ ವರ್ಗೀಕರಣ:**—ರೈ. ಆ. ಮಾಂಟೆಗೂ ಸಾ|| ರು ಹಿಂದುಸ್ಥಾನದ ರಾಜ್ಯಾಡಳಿತೆಯ ಸುಧಾರಣೆಗಾಗಿ ಸಿದ್ಧಪಡಿಸಿದ ತಮ್ಮ ರಿಪೋರ್ಟಿನ ೨೧೮ ನೆಯ ಕಲಮಿನಲ್ಲಿ—ಪ್ರಾಂತವು ದೊಡ್ಡದಿರಲಿ, ಸಣ್ಣದಿರಲಿ, ಗವ್ಹರ್ನರನ ಅಧಿಕಾರಕ್ಕೊಳಪಟ್ಟಿರಬೇಕೆಂದು ಸೂಚಿಸಿರುತ್ತಾರೆ. ೧೯೧೯ ರಲ್ಲಾದ ಸುಧಾರಣೆಯ ಕಾಯದೆಯಲ್ಲಿ ಈ ಸೂಚನೆಯು ನಿಶ್ಚಿತ ಸ್ವರೂಪವನ್ನು ಹೊಂದಿತು. ಇದರಿಂದ ಕೆಲವು ಪ್ರಾಂತಗಳ ಲೆ. ಗವ್ಹರ್ನರರ ಹಾಗು ಚೀಫ್ ಕಮಿಶನರರ ಬದಲು ಈಗ ಗವ್ಹರ್ನರರೇ ನಿಯಮಿಸಲ್ಪಟ್ಟಿರುತ್ತಾರೆ. ಈಗಿನ ವರ್ಗೀಕರಣವೆಂದರೆ ಮೊದಲಿನ ೯ ಪ್ರಾಂತಗಳಿಗೆ ಗವ್ಹರ್ನರರೂ, ಉಳಿದ ಸಣ್ಣ ಪ್ರಾಂತಗಳಿಗೆ ಚೀಫ್‌ಕಮಿಶನರರೂ, ಇರುತ್ತಾರೆ. ೧೯೧೯ ರ ಸುಧಾರಣೆಯ ಕಾಯದೆಯ ಪೂರ್ವದಲ್ಲಿ ರಾಜ್ಯಾಡಳಿತೆಯ ದೃಷ್ಟಿಯಿಂದ ಪ್ರಾಂತಗಳು ಹೇಗೆ ವರ್ಗೀಕರಿಸಲ್ಪಟ್ಟಿದ್ದವೆಂಬದನ್ನು ತಿಳಿದುಕೊಳ್ಳುವದು ಈ ಪ್ರಸಂಗದಲ್ಲಿ ಇಷ್ಟವೂ, ಆವಶ್ಯಕವೂ ಆಗಿರುವದರಿಂದ, ಅದನ್ನು ಇದರಡಿಯಲ್ಲಿ ವಿಸ್ತರಿಸುತ್ತೇನೆ:—

**೧೯೧೯ರ ಪೂರ್ವದಲ್ಲಿ ಪ್ರಾಂತಗಳ ವರ್ಗೀಕರಣವು:—**

ಐದು ವರ್ಗವಾಗಿತ್ತು.

| | ಪ್ರಾಂತಗಳು. | ಮುಖ್ಯಾಧಿಕಾರಿ. | ಆಡಳಿತೆಯ ತರವು. |
|---|---|---|---|
| ೧ | ಮುಂಬಯಿ<br>ಮದ್ರಾಸ<br>ಬಂಗಾಲ | ಗವ್ಹರ್ನರರು | ಕಾಯದೆಮಂಡಳ, ಹಾಗು ಪ್ರಚಾರಕಮಂಡಳ (ಲೇ. ಕೌನ್ಸಿಲ್. ಎಗ್ಝಿ. ಕೌ.) |
| ೨ | ಬಿಹಾರ-ಓಡಿಸಾ | ಲೆ. ಗವ್ಹರ್ನರ | (ಎರಡೂಮಂಡಳ) |
| ೩ | ಸಂಯುಕ್ತಪ್ರಾಂತ<br>ಪಂಜಾಬ<br>ಬ್ರಹ್ಮದೇಶ | ಲೆ. ಗವ್ಹರ್ನರರು | ಕಾಯದೆಮಂಡಳ ಮಾತ್ರ. |
| ೪ | ಮಧ್ಯಪ್ರಾಂತ<br>ಆಸಾಮ | ಚೀಫ್‌ಕಮಿಶನರ | ಕಾಯದೆಮಂಡಳ ಮಾತ್ರ. |
| ೫ | ಉಳಿದವುಗಳು | ಚೀಫ್‌ಕಮಿಶನರ | ಎರಡೂ ಮಂಡಳಗಳಿಲ್ಲ. |

ಅಧಿಕಾರಿಗಳನ್ನೂ, ಆಢಳತೆಯ ತರವನ್ನೂ ಕೂಡಿಯೇ ವಿಚಾರಿಸಿದಾಗ ಮೇಲೆ ವಿವರಿಸಿದಂತೆ ವರ್ಗೀಕರಣವಾಗುತ್ತದೆ. ಆಢಳತೆಯ ತರವನ್ನು ಮಾತ್ರ ವಿಚಾರಿಸಿದರೆ— ೧ ಎರಡೂ ಮಂಡಳಗಳಿರುವ, ೨ ಕಾಯದೆಮಂಡಳ ಮಾತ್ರ ಇರುವ, ೩ ಯಾವ ಮಂಡಳವೂ ಇಲ್ಲದಿರುವ. ಹೀಗೆ ೩ ತರವು ಕಂಡುಬರುತ್ತದೆ.

**( ೩ ) ಭಾವೀ ಕರ್ನಾಟಕದ ತುಲನೆಯು:**— ಬ್ರಿಟಿಶ ಕರ್ನಾಟಕದ ಕ್ಷೇತ್ರವು ೪೩೬೧೫ ಚ. ಮೈ. ಜನಸಂಖ್ಯೆಯು. ೮೨೧೧೩೭೦ ಇರುವದು. ಮೈಸೂರು, ನಿಜಾಮನ ಕರ್ನಾಟಕವೆರಡನ್ನು ಕೂಡಿಕೊಂಡು ಹೇಳುವದಾದರೆ ಕರ್ನಾಟಕದ ಕ್ಷೇತ್ರ–೯೯೪೯೦ ಚ. ಮೈ.ಜನಸಂಖ್ಯೆಯು ಸು. ೧೩ ಕೋಟಿ. ಇನ್ನುಳಿದ ಸಣ್ಣ ಸಂಸ್ಥಾನಗಳನ್ನು ಕೂಡಿಕೊಂಡು ಹೇಳಿದರೆ ಕ್ಷೇತ್ರವು ೧೦ ಸಾವಿರ ಚ. ಮೈಲಾಗುವದು. ಜನಸಂಖೆಯು ೧೩ ಕೋಟಿಗೆ ಮೀರಿಹೋಗುವದು. ನಮ್ಮ ಭಾವೀ ಕರ್ನಾಟಕ ( ಬ್ರಿಟಿಶ ಕರ್ನಾಟಕ ) ಪ್ರಾಂತವು ಕ್ಷೇತ್ರದಿಂದ ಆಸಾಮ ಪ್ರಾಂತಕ್ಕಿಂತ ಕಡಿಮೆ ಎನಿಸಿದರೂ, ಜನಸಂಖ್ಯೆಯಿಂದ ಅದನ್ನು ಮೀರಿರುತ್ತದೆ. ಇದೇ ರೀತಿ ಬ್ರಿಟಿಶ ಬಲುಚಿಸ್ತಾನವನ್ನೂ ಮೀರಿರುತ್ತದೆ. ವರ್ಹಾಡ ಪ್ರಾಂತವನ್ನು ನಿಜಾಮನಿಗೆ ತಿರುಗಿ ಕೊಡಬೇಕೋ ಹೇಗೆಂಬ ಬಗ್ಗೆ ನಡೆದ ವಾದವು ಈಗ ವೃತ್ತಪತ್ರದಿಂದ ತಿಳಿದುಬರುತ್ತಿದೆ. ವರ್ಹಾಡವನ್ನು ಬಿಟ್ಟರೆ ಮಧ್ಯ ಪ್ರಾಂತಕ್ಕೆ ನಮ್ಮ ಕರ್ನಾಟಕವು ಸಮೀಪಿಸುವದು. ತೆಲಗರು ತಮ್ಮ ಸ್ವತಂತ್ರ ಪ್ರಾಂತದ ಯೋಜನೆಯಲ್ಲಿ ಕ್ಷೇತ್ರ–೯೧೫೧೬, ಚ. ಮೈ. ಜನಸಂಖ್ಯೆ ೨೩ ಕೊಟಿಯೆಂದು ಕಾಣಿಸಿರುವರು. ಹೀಗಿದ್ದರೂ ಕರ್ನಾಟಕವು ಕ್ಷೇತ್ರದಿಂದಾದರೂ ಇವರನ್ನು ಮೀರುವದು. ಸರಕಾರದ ಲೆಕ್ಕದಲ್ಲಿ ಓಡಿಸಾಪ್ರಾಂತದ ಕ್ಷೇತ್ರವು ೧೩೭೪೩ ಚ. ಮೈ. ಎಂದೂ, ಜನಸಂಖ್ಯೆಯು ೫೧೩೧೭೫೩ ಎಂದೂ ಕಾಣಿಸಿರುತ್ತದೆ. ಆದರೆ ಉರಿಯಾ ಜನರು ಸ್ವತಂತ್ರಪ್ರಾಂತವನ್ನು ಬೇಡುವ ಕಾಲದಲ್ಲಿ ಕಾಣಿಸಿರುವ ಆಂಕಿಗಳನ್ನು ನೋಡಿರಿ! ಬ್ರಿಟಿಶ್ ಉರಿಯಾ—ಕ್ಷೇ. ೪೨೩೨೫ ಚ. ಮೈ. ಸಂಸ್ಥಾನಗಳು ಸಹಿತ ಉರಿಯಾ ಪ್ರಾಂತದ ಕ್ಷೇ. ೮೯೦೨೯ ಚ. ಮೈ. ಬ್ರಿಟಿಶ ಕರ್ನಾಟಕವೂ, ಸಂಸ್ಥಾನಗಳು ಸಹಿತವಾದ ಕರ್ನಾಟಕವೂ ಈ ಉರಿಯಾ ಪ್ರಾಂತವನ್ನು ಮಿಕ್ಕಿ ಹೋಗುವವು. ಹೀಗಿರಲು " ನ ಭೂತೋ ನ ಭವಿಷ್ಯತಿ " ಚಳವಳಿಯನ್ನು ಎಬ್ಬಿಸಿ ಉರಿಯಾ ಜನರು ಬಹುಮಟ್ಟಿಗೆ ತಮ್ಮ ಆಕಾಂಕ್ಷೆಯನ್ನು ತೃಪ್ತ

ಮಾಡಿಕೊಂಡಿರಲು, ಈಗ ಕರ್ನಾಟಕವು ಸ್ವತಂತ್ರ ಪ್ರಾಂತವೆಂದು ಉಚ್ಚರಿಸಿದರೆ ಘನ ಪಾಪವೇ? ಅಶಕ್ಯ ಕೋಟಿಯೇ? ಇದಕ್ಕೆನ್ನಬೇಕು ಅಜ್ಞಾನ!

**( ೪ ) ನಿಶ್ಚಿತಯೋಜನೆಯು:**—ಉರಿಯಾಜನರು ಸಂಸ್ಥಾನಗಳನ್ನು ಸೇರಿಸಿ ಹೇಳುವ ಕ್ಷೇತ್ರ ಜನಸಂಖ್ಯೆಗಳಿಗಿಂತ ಕರ್ನಾಟಕದ ಕ್ಷೇತ್ರ ಜನಸಂಖ್ಯೆಗಳು ಹೆಚ್ಚಾಗುವದರಿಂದ ಉರಿಯಾ ಪ್ರಾಂತದವರು ಮಾಡಿದ ಯೋಜನೆಗಿಂತ ಕರ್ನಾಟಕದ ಆಕಾಂಕ್ಷೆಯು ಹೆಚ್ಚಾದರೆ ಅದು ಸ್ವಾಭಾವಿಕವೆನಿಸುವದೇ ಹೊರತು ಅತಿಶಯೋಕ್ತಿಯೆನಿಸಲಾರದು. ಉರಿಯಾ ಪ್ರಾಂತದವರ ಕೊನೆಯ ಆಕಾಂಕ್ಷೆಯು ಲೆ. ಗವ್ಹರ್ನರರನ್ನು ಬೇಡುತ್ತದೆ. ಭಾವೀ ಕರ್ನಾಟಕವು ೯೯೪೯೦ ಚ. ಮೈ. ಕ್ಷೇತ್ರವುಳ್ಳದ್ದೂ, ೧⅔ ಕೋಟಿ ಜನಸಂಖ್ಯೆಯುಳ್ಳದ್ದೂ ಆಗುವದೆಂದ ಬಳಿಕ ಗವ್ಹರ್ನರರನ್ನು ಬೇಡಲು ಆತಂಕವೇನು? ಈಗ ಸುಧಾರಣೆಯ ಕಾಯದೆಯಂತೆ ಮಧ್ಯಪ್ರಾಂತ, ಆಸಾಮುಗಳಿಗೆ ಸಹ ಗವ್ಹರ್ನರರಾಗಿರಲು ( ಮೊದಲು ಚೀಫ್ ಕಮಿಶನರರು ) ಕರ್ನಾಟಕ ಪ್ರಾಂತಕ್ಕೆ ಗವ್ಹರ್ನರರು ದೊರೆಯಲು ಯಾವ ವ್ಯತ್ಯಯವೂ ಇಲ್ಲ.

**( ೫ ) ರಾಜ್ಯದಾಢಳಿತೆಯ ತರವು:**—

೧ ಕರ್ನಾಟಕ ಪ್ರಾಂತದ ಗವ್ಹರ್ನರರು, ಹಾಗು ಅವರ ಸ್ಟಾಫ್

೨ ಕಾಯದೆಪ್ರಚಾರಕ ಮಂಡಳವು ( ಎಗ್ಝಿಕ್ಯುಟಿವ್ಹ ಕೌನ್ಸಿಲ್ ) ಇದರಲ್ಲಿ ೨ ಸಭಾಸದರಿದ್ದು ಅವರಲ್ಲಿ ಒಬ್ಬನು ಹಿಂದು ಇರಲೇ ಬೇಕು. ಹಾಗು ಒಪ್ಪಿಸಿಕೊಟ್ಟ ಖಾತೆಗಳ ಬಗ್ಗೆ ೧ ಮಂತ್ರಿ ( ಮಿನಿಸ್ಟರ ).

೩ ಕಾಯದೆಮಂಡಳ ( ಲೇಜಿಸ್ಲೇಟಿವ್ಹ ಕೌನ್ಸಿಲ್ ). ೭೫ ಸಭಾಸದರು ( ಪರಿಶಿಷ್ಟ ನಂ. ೮ ನೋಡಿರಿ. )

೪ ಆಯವ್ಯಯದ ಕಮಿಶನರರು (ಫಾಯನನ್ಸಿಯಲ್ ಕಮಿಶನರ).

೫ ಕೆಳಗೆ ಕಾಣಿಸಿದ ಖಾತೆಗಳು:—

( i ) ಪೋಲಿಸಖಾತೆ, ( ii ) ತುರಂಗ, ( iii ) ಅಬಕಾರಿ, ( iv ) ದವಾಖಾನೆಗಳು, ( v ) ಆರೋಗ್ಯಖಾತೆ, ( vi ) ವಿದ್ಯಾಖಾತೆ, ( vii ) ಒಕ್ಕಲತನದ ಖಾತೆ, ( viii ) ಲೆಕ್ಕಪತ್ರ ( ಅಕೌಂಟ ) ಖಾತೆ.

ಈ ರೀತಿಯಾಗಿ ಭಾವೀ ಕರ್ನಾಟಕ ಪ್ರಾಂತದ ಆಢಳಿತೆಯ ರೂಪರೇಷೆಯನ್ನು ಸಂಕ್ಷೇಪದಿಂದ ಸೂಚಿಸಿರುತ್ತೇನೆ. ಪ್ರಸಂಗವಿಶೇಷದಲ್ಲಿ ಇದರಲ್ಲಿ ಹೆಚ್ಚು ಕಡಿಮೆಗಳಾಗಬಹುದು.

**( ೬ ) ಹೆಚ್ಚು ಕಡಿಮೆಗಳು:**—ಮಾಂಟೆಗೂ ಚೇಮ್ಸಫರ್ಡ ರಿಪೋರ್ಟಿನಲ್ಲಿ ಪ್ರತಿಯೊಂದು ಪ್ರಾಂತಕ್ಕೆ ( ಗವ್ಹರ್ನರರಿರುವ ) ಕಾಯದೆಮಂಡಳವೂ ಕಾಯದೆ ಪ್ರಚಾರಕಮಂಡಳವೂ ಇರಬೇಕೆಂದು ಸೂಚಿಸಿದ್ದರೂ, ಹೊಸ ಪ್ರಾಂತಕ್ಕೆ ಆರಂಭದ ಖರ್ಚಿಗಾಗಿ ವಿಶೇಷ ಹಣವು ಬೇಕಾಗುವದರಿಂದ ಕಾಯದೆಪ್ರಚಾರಕ ಮಂಡಳದ ಸಭಾಸದರ ಸಂಬಳವು ಪಾಂತಿಕ ಆಯವ್ಯಯಕ್ಕೆ ಭಾರವೆನಿಸುವದು. ಉತ್ಪನ್ನದ ಬಾಬುಗಳು ಬೆಳೆದಂತೆ ಈ ಸಭಾಸದರ ಸಂಖ್ಯೆಯನ್ನು ಹೆಚ್ಚಿಸಲಿಕ್ಕೂ ಬರುವಂತಿದೆ. ಆರಂಭಕ್ಕೆ ಈ ಸಭಾಸದರ ಕಾರ್ಯವನ್ನು ಆಯಾಖಾತೆಯ ಸೆಕ್ರೇಟರಿಯವರೇ ಸಾಗಿಸಬೇಕೆಂಬ ಸೂಚನೆಯನ್ನು ಹೊಸಪ್ರಾಂತವನ್ನು ಬೇಡುವವರೆಲ್ಲರೂ ಮಾಡಿರುವರು. ಇನ್ನು “ ರೆವ್ಹಿನ್ಯೂ ಬೋರ್ಡ ” ನ ಬದಲು ಕೆಲವರು ಫಾಯನನ್ಸಿಯಲ್ ಕಮಿಶನರರನ್ನು ಸೂಚಿಸಿದ್ದು, ಆ ಬೋರ್ಡಿನ ಕೆಲಸವು ಇವರಿಂದ ಸಾಗುವದು.

**( ೭ ) ಆಕ್ಷೇಪ ನಿವಾರಣ:**— ಕರ್ನಾಟಕಕ್ಕೆ ಬೇರೊಬ್ಬ ಗವ್ಹರ್ನರರನ್ನು ನಿಯಮಿಸಿ, ಆ ಪ್ರಾಂತವನ್ನು ಬೇರೆ ಮಾಡುವದು ಇಷ್ಟವಾಗಿದ್ದರೂ, ಶಕ್ಯವಾಗಿಲ್ಲೆಂದು ಸರಕಾರದವರು ತಮ್ಮ ನಿತ್ಯದ ರೂಢಿಗನುಸರಿಸಿ ಉತ್ತರವನ್ನು ಕೊಟ್ಟರೆ ಮುಂದೆ ಕನ್ನಡಿಗರು ಏನು ಮಾಡಬಲ್ಲರು? ಎಂದು ಕೆಲವರು ಆಕ್ಷೇಪಿಸುವರು. ಮುಖ್ಯಾಧಿಕಾರಿಯು ಗವ್ಹರ್ನರರೇ ಇರಬೇಕೆಂದು ಕನ್ನಡಿಗರೇನೂ ಪಂಥವನ್ನು ತೊಟ್ಟಿಲ್ಲ. ಹಾಗೆ ಪಂಥವನ್ನು ತೊಡುವ ಕಾರಣವೂ ಇಲ್ಲ. ಮುಖ್ಯಾಧಿಕಾರಿಯ ಕಡೆಗೆ ಅವರ ಕಟಾಕ್ಷವಿಲ್ಲ. ಯಾವ ತರದಿಂದಾದರೂ ಕನ್ನಡಿಗರೆಲ್ಲರನ್ನು ಒಂದೇ ಅಧಿಕಾರದ ಕೆಳಗೆ ಒಟ್ಟುಗೂಡಿಸುವದು ಅವರಿಗೆ ಇಷ್ಟವಾಗಿದೆ. ಎಂದ ಬಳಿಕ ಗವ್ಹರ್ನರರು ಇಲ್ಲವಾದರೆ:—

(i) ಲೆ. ಗವ್ಹರ್ನರರನ್ನೂ ಕಾಯದೆಮಂಡಳವನ್ನೂ ಬೇಡಬಹುದು.

(ii) ಇದು ಸಹ ಅಶಕ್ಯವಾದರೆ ಚೀಫ್‌ಕಮಿಶನರರನ್ನೂ, ಕಾಯದೆ ಮಂಡಳವನ್ನೂ ಬೇಡಬಹುದು.

ಈ ರೀತಿಯಾಗಿ, ಗವ್ಹರ್ನರರು, ಲೆ. ಗವ್ಹರ್ನರರು, ಚೀಫ್‌ಕಮಿಶನರರು, ಈ ಮೂರು ತೆರದಲ್ಲಿ ಒಂದನ್ನು ಕಾಯದೆಮಂಡಳ ಸಹಿತವಾಗಿ ಕೊಟ್ಟು, ಕರ್ನಾಟಕ ಪ್ರಾಂತದ ಆಢಳತೆಯನ್ನು ನಿಶ್ಚಯಿಸಬಹುದು. ಇದು ಸರಕಾರಕ್ಕೆ ಮಾನ್ಯವಾದರೆ, ಸರಕಾರವು ವಿಚಾರಣೆಗಾಗಿ ಒಂದು ಕಮೀಟಿಯನ್ನು ನಿಯಮಿಸಬಹುದು. ನಮ್ಮ ಅಂದಾಜದ ಯೋಜನೆಯ ಬದಲು ಒಂದು ನಿಶ್ಚಿತವಾದ ಯೋಜನೆಯನ್ನು ಸಿದ್ಧಪಡಿಸಬಹುದು. ಇದಕ್ಕೆ ಒಂದೆರಡು ವರುಷ ಕಾಲಾವಧಿಯೂ ಬೇಕಾಗಬಹುದು. ಇರಲಿ. ಈಗ ಮಾತ್ರ ಈ ವಿಚಾರವು ಮಾನ್ಯವಾದ ಬಗ್ಗೆ ಒಪ್ಪಿಗೆಯೆಂದಾಗಲಿ, ಪೂರ್ವಸಿದ್ಧತೆಯೆಂದಾಗಲಿ, ಒಂದು ಕಾರ್ಯವನ್ನು ಮಾತ್ರ ಸರಕಾರವು ಅವಶ್ಯವಾಗಿ ಮಾಡಲೇ ಬೇಕೆಂದು ಸೂಚಿಸುತ್ತೇವೆ. ಅದೇನಂದರೆ:—ಸಿಂಧಪ್ರಾಂತವನ್ನು ಪಂಜಾಬಕ್ಕೆ ಜೋಡಿಸಬೇಕು. ಹಾಗು ನಾವು ಹಿಂದೆ ಸೂಚಿಸಿದ ಭಾವೀ ಕರ್ನಾಟಕದ ೧೦ ಜಿಲ್ಹೆಗಳನ್ನು ಮುಂಬೈ ಇಲಾಖೆಯಲ್ಲಿ ಒಟ್ಟುಗೂಡಿಸಬೇಕು. ಈಗಿನಂತೆ ಮುಂಬೈ ಇಲಾಖೆಯಲ್ಲಿ—೧ ಉತ್ತರಭಾಗ, ೨ ಮಧ್ಯಭಾಗ, ೩ ದಕ್ಷಿಣಭಾಗ ಎಂದು ೩ ಭಾಗಗಳಾಗುವವು. ಗುಜರಾಥವೇ ಉತ್ತರಭಾಗವಾಗುವದು. ಈಗಿನ ದಕ್ಷಿಣಭಾಗದ ೨ ಮರಾಟಿ ಜಿಲ್ಹೆಗಳನ್ನು (ಕುಲಾಬಾ, ರತ್ನಾಗಿರಿ) ಮಧ್ಯಭಾಗಕ್ಕೆ ಜೋಡಿಸಿದರೆ, ಮಹಾರಾಷ್ಟ್ರವನ್ನೂ ಒಂದೇ ಇಲಾಖೆಯಲ್ಲಿ ಏಕೀಕರಿಸಿದಂತಾಗುವದು. ದಕ್ಷಿಣಭಾಗದಲ್ಲಿ ಕರ್ನಾಟಕವನ್ನೂ ಏಕೀಕರಿಸಿದಂತಾಗುವದು. ಈ ದಕ್ಷಿಣಭಾಗದಲ್ಲಿ ಕರ್ನಾಟಕದ ೧೦ ಜಿಲ್ಹೆಗಳು ಬರುವದರಿಂದ ತಾತ್ಪೂರ್ತಿಕವಾಗಿ ಇದು ಒಬ್ಬ ಕಮಿಶನರರ ಅಧಿಕಾರದಲ್ಲಿ ಬರುವದು. ಒಬ್ಬರಿಂದ ಶಕ್ಯವಾಗದಿದ್ದರೆ ಅಸಿ॥ ಕಮಿಶನರರೊಬ್ಬರನ್ನು ನಿಯಮಿಸಬಹುದು. ಇದಂತೂ ತಾತ್ಕಾಲಿಕವಾಗಿ ಆಗಬೇಕೆಂದು ನಮ್ಮ ಬೇಡಿಕೆಯುಂಟು. ಇದಕ್ಕೆ ನಮ್ಮ ನಾಲ್ಕನೆಯ ಯೋಜನೆಯೆಂದು ಕರೆಯಬಹುದು. ಇದರಿಂದ ಮುಂದೆ ಕರ್ನಾಟಕವನ್ನು ಬೇಕಾದಾಗ ಸ್ವತಂತ್ರ ಪ್ರಾಂತವನ್ನು ಮಾಡಲಿಕ್ಕೆ ಸುಲಭವಾಗುವದು. ಸ್ವತಂತ್ರಪ್ರಾಂತದ ಯೋಜನೆಯು ನಮ್ಮ ಪ್ರಧಾನ ಯೋಜನೆಯೂ ಇದು ತಾತ್ಪೂರ್ತಿಕ ಗೌಣ ಯೋಜನೆಯೂ ಆಗಿವೆಯೆಂದು ಹೇಳಬಹುದು.

(೮) ಒಂದೆರಡು ಉದಾಹರಣೆಗಳು:—

(i) **ಸ್ವಿತ್ಸರ್ಲಂಡ**:—ಯುರೋಪಖಂಡದಲ್ಲಿ ಸ್ವಿತ್ಸರ್ಲಂಡವೆಂಬದೊಂದು ಪ್ರಜಾಸತ್ತಾತ್ಮಕ ಸಣ್ಣ ರಾಜ್ಯವಿದೆ. ಇದರ ಕ್ಷೇತ್ರ ೧೫೯೫೧ ಚ ಮೈ. ಜನಸಂಖ್ಯೆ ೩೩೧೫೩೪೩. ಇದು ನಮ್ಮ ಮುಂಬೈ ಕರ್ನಾಟಕದ ನಾಲ್ಕು ಜಿಲ್ಹೆಗಳಿಗಿಂತ ಸಣ್ಣದಾಗಿದೆ. ರಾಜ್ಯದಾಢಳತೆಗಾಗಿ ಇದರಲ್ಲಿ **೨೨** ಪ್ರಾಂತ (ಜಾತಿ ಹಾಗು ಭಾಷೆಗನುಸರಿಸಿ ಮಾಡಿದ ವಿಭಾಗ) ಗಳಿದ್ದು, ಪ್ರತಿಯೊಂದು ವಿಭಾಗವು ತನಗೆ ಇಷ್ಟವಾದ ರಾಜ್ಯದಾಢಳತೆಯನ್ನು ಯೋಜಿಸಿಕೊಂಡಿರುತ್ತದೆ. ಹೀಗಿದ್ದರೂ ಈ ದೇಶದ ಮಾನಾಪಮಾನಗಳಿಗೆ ಈ ವಿಭಾಗಗಳು ಸರಿಯಾಗಿ ಹೊಣೆಗಾರರಾಗಿರುತ್ತವೆ. ಇಲ್ಲಿ ಜರ್ಮನ್, ಫ್ರೇಂಚ, ಇಟಾಲಿಯನ್, ಮತ್ತು ರೋಮನ್‌ಭಾಷೆಗಳು ನಡೆಯುತ್ತಿದ್ದು, ಭಿನ್ನ ಜಾತಿಯ ಹಾಗು ಭಾಷೆಯ ಜನರು ಹೇಗೆ ಸುಖಸಮಾಧಾನಗಳಲ್ಲಿ ಪಾಲುಗಾರರಾಗಿ ಸ್ವಾತಂತ್ರ್ಯವನ್ನು ಭೋಗಿಸುತ್ತಿರುವರೆಂಬದನ್ನು ತಿಳಿದುಕೊಳ್ಳಲಿಕ್ಕೆ ಈ ಸಣ್ಣ ರಾಜ್ಯವು ಒಳ್ಳೇ ಉದಾಹರಣೆಯಾಗಿದೆ. ಯುರೋಪಖಂಡದಲ್ಲಿ ಬಲವಾದ ಅನೇಕ ರಾಜ್ಯಗಳ ಮಧ್ಯದಲ್ಲಿ ಈ ಅತಿಶಯ ಸಣ್ಣ ರಾಜ್ಯವು ಪ್ರಜಾಪ್ರಭುತ್ವದಂಥ ಶ್ರೇಷ್ಠತಮವಾದ ರಾಜ್ಯದಾಢಳತೆಯನ್ನು ಉಳಿದ ದೇಶಕ್ಕೆಲ್ಲ ಮಾದರಿಯಾಗುವಂತೆ ಸಾಗಿಸುತ್ತಿರುವದನ್ನು ನೋಡಿದರೆ ಎಂಥವನಾದರೂ ಕ್ಷಣಹೊತ್ತು ಸ್ತಬ್ಧನಾಗಬಹುದು. ವಿಚಾರಮಗ್ನನಾಗಬಹುದು. ಸಣ್ಣ ಸ್ವಿತ್ಸರ್ಲಂಡದಲ್ಲಿ **೨೨** ವಿಭಾಗಗಳು (ಪ್ರಾಂತ) ಆಗಿರುವದರಿಂದ, ಒಂದು ಪ್ರಾಂತವು ನಮ್ಮಲ್ಲಿಯ **೨** ತಾಲೂಕಿನಷ್ಟು ಸಹ ಆಗುವಂತಿಲ್ಲ. ಅರಲಿ. ಕರ್ನಾಟಕವು ೯೯೪೯೦ ಚ. ಮೈ. ಕ್ಷೇತ್ರವುಳ್ಳದ್ದೂ, ೧೩ ಕೋಟಿ ಜನಸಂಖ್ಯೆಯುಳ್ಳದ್ದೂ, ೧೦ ಜಿಲ್ಹೆಯುಳ್ಳದ್ದೂ, ಇರುವಾಗ ಅದಕ್ಕೆ ಸ್ವತಂತ್ರಪ್ರಾಂತವು ಇರಬೇಡವೆ? ಕರ್ನಾಟಕವು ಬ್ರಿಟಿಶರ ವಶವಾಗಿ ಇಂದಿಗೆ ನೂರು ವರ್ಷಗಳು ಕಳೆದು ಹೋದರೂ ಅದಕ್ಕೆ ಪ್ರಾಂತಿಕಸ್ವರೂಪವು ಪ್ರಾಪ್ತವಾಗದಿದ್ದರೆ, ಇನ್ನು ಪ್ರಾಪ್ತವಾಗುವದು ಯಾವಾಗ?

(ii) **ಸಂಯುಕ್ತ ಸಂಸ್ಥಾನಗಳು (ಅಮೇರಿಕೆ)**—:ಇದು ಸಣ್ಣ ದೊಡ್ಡ ೪೮ ಸಂಸ್ಥಾನಗಳು ಕೂಡಿದ ಒಂದು ರಾಜ್ಯವಾಗಿದೆ. ಈ ೪೮ ಸಂಸ್ಥಾನಗಳೇ ಇದರಲ್ಲಿ ಪ್ರಾಂತಗಳಂತೆ ಇದ್ದು, ಪ್ರತಿಯೊಂದು ಪ್ರಾಂತವು

ಸ್ವಾತಂತ್ರ್ಯವನ್ನು ಪಡೆದಿರುತ್ತದೆ. ಇವುಗಳಲ್ಲಿ ತೀರ ಸಣ್ಣದಾದ ಕೋಲಂಬಿಯಾ ಸಂಸ್ಥಾನವು ಕೇವಲ ೭೦ ಚ. ಮೈ. ಇದೆ. ಎಲ್ಲಕ್ಕೂ ದೊಡ್ಡ ಸಂಸ್ಥಾನವು ೧ಲಕ್ಷ ಚ. ಮೈ. ಇರುವದು. ಕರ್ನಾಟಕದ ಕ್ಷೇತ್ರವಾದರೂ ಸುಮಾರು ಇಷ್ಟೇ ಇರುವದರಿಂದ, ಅಮೇರಿಕೆಯೊಳಗಿನ ಎಲ್ಲಕ್ಕೂ ದೊಡ್ಡ ಪ್ರಾಂತದಷ್ಟು ಕ್ಷೇತ್ರವಿರುವ ಪ್ರದೇಶಕ್ಕೆ ಹಿಂದುಸ್ಥಾನದಲ್ಲಿ ಪ್ರಾಂತಿಕ ಸ್ವರೂಪವು ದೊರೆಯುವದಿಲ್ಲೆನ್ನುವದು ಆಶ್ಚರ್ಯವೇ ಸರಿ! ಇವು ಬೇರೆ ರಾಜ್ಯಗಳ ಉದಾಹರಣಗಳಾದವು. ಇನ್ನು ಬ್ರಿಟಿಶಸಾಮ್ರಾಜ್ಯದ ಕಡೆಗೆ ತಿರುಗುವಾ:—

(iii) ಆಸ್ಟ್ರೇಲಿಯಾದಲ್ಲಿ ತಾಸ್ಮಾನಿಯಾದ ಕ್ಷೇತ್ರವು ೨೬೨೧೫ ಚ. ಮೈ. ಇದ್ದರೂ, ಅದು ಸ್ವತಂತ್ರಪ್ರಾಂತವಾಗಿದೆ. ಕಾನಡಾದಲ್ಲಿರುವ ನೋವ್ಹಾಸ್ಕೋಶಿಯಾ ಪ್ರಾಂತದ ಕ್ಷೇತ್ರ ೨೫೨೧೮ ಚ. ಮೈ. ಜನಸಂಖ್ಯೆ ೪೯೧೫೨೪ ಇರುವದು. ಈ ಜನಸಂಖ್ಯೆಯು ನಮ್ಮಲ್ಲಿಯ ಅರ್ಧಜಿಲ್ಹೆಯ ಜನಸಂಖ್ಯೆಯಷ್ಟಾಗುವದು. ಹೀಗಿದ್ದು ನೋವ್ಹಾಸ್ಕೋಶಿಯಾ ಪ್ರಾಂತವು ಬ್ರಿಟಿಶಸಾಮ್ರಾಜ್ಯದಲ್ಲಿ ಸ್ವತಂತ್ರಪ್ರಾಂತವೆನಿಸಿ ಮೆರೆಯುತ್ತದೆ. ಜನಸಂಖ್ಯೆಯಿಂದ ಇದರ ೨೦ ಮಡಿ ದೊಡ್ಡದಾದ ಕರ್ನಾಟಕಕ್ಕೆ ಅದೇ ಬ್ರಿಟಿಶಸಾಮ್ರಾಜ್ಯದಲ್ಲಿ ಸ್ವತಂತ್ರಪ್ರಾಂತವು ದೊರೆಯುವದು ಅಶಕ್ಯವೇ? " ಸೇವ್ಹನ್ ವಂಡರ್ಸ ಆಫ್ ದಿವರ್ಲ್ಡ " ( ಜಗತ್ತಿನ ೭ ಆಶ್ಚರ್ಯಗಳು ) ಎಂಬ ಪುಸ್ತಕವನ್ನು ಬರೆದ ಗ್ರಂಥಕಾರನಿಗೆ ಈ ಸಂಗತಿಯು ಗೊತ್ತಾಗಿದ್ದರೆ ನಿಜವಾಗಿಯೂ ಅವನು ತನ್ನ ಪುಸ್ತಕಕ್ಕೆ " ಏಟ ವಂಡರ್ಸ ಆಫ್ ದಿವರ್ಲ್ಡ " ಎಂದೇ ಹೆಸರಿಡುತ್ತಿದ್ದನು. ಇತ್ತಕಡೆಗೆ ಸರಕಾರವು ತುಸು ಲಕ್ಷಕೊಟ್ಟರೆ ಒಳಿತಾಗುವದು.

---

# ಹನ್ನೊಂದನೆಯ ಪ್ರಕರಣ.

## ಸ್ಥಾನಿಕ ಸೌಲಭ್ಯಗಳು.

೧ ಸ್ವಾಭಾವಿಕ ಸ್ಥಿತಿಯು, ೨ ಕೃತ್ರಿಮ ಸುಧಾರಣೆಗಳು, ೩ ಉಗಿಬಂಡಿಯ ಸಂಬಂಧವು, ೪ ಸಮುದ್ರದ ದಂಡೆಯು, ೫ ಆಢಳತೆಗೆ ಸೌಲಭ್ಯವು, ೬ ಶುಭ ಸ್ವಪ್ನವು.

**(೧) ಸ್ವಾಭಾವಿಕ ಸ್ಥಿತಿಯು:—** ಕರ್ನಾಟಕದಲ್ಲಿ ೩ ಸ್ವಾಭಾವಿಕ ವಿಭಾಗಗಳಾಗುತ್ತವೆ. ೧ ತುಂಗಭದ್ರಾ ನದಿಯು ಉತ್ತರಕ್ಕಿರುವ ಪ್ರದೇಶ. ಇದಕ್ಕೆ ಉತ್ತರಕರ್ನಾಟಕವೆನ್ನಬಹುದು. ೨ ತುಂಗಭದ್ರಾನದಿಯು ದಕ್ಷಿಣಕ್ಕಿರುವ ಪ್ರದೇಶ. ಇದಕ್ಕೆ ದಕ್ಷಿಣಕರ್ನಾಟಕವೆನ್ನಬಹುದು. ೩ ಸಹ್ಯಾದ್ರಿಗೂ, ಸಮುದ್ರಕ್ಕೂ ನಡುವಿರುವ ಕಿರಿನೆಲದ ಪಟ್ಟಿ. ಉತ್ತರಕರ್ನಾಟಕವು ಬೈಲು ಸೀಮೆ. ದಕ್ಷಿಣಕರ್ನಾಟಕವು ೩೦೦೦ ಅಡಿ ಎತ್ತರವುಳ್ಳ ತಪ್ಪಲಭೂಮಿಯು. ಪಶ್ಚಿಮದ ಕಿರಿನೆಲದ ಪಟ್ಟಿಯು ಕರ್ನಾಟಕಕ್ಕೆ ಸಮುದ್ರದ ದಂಡೆಯನ್ನು ಒದಗಿಸಿರುತ್ತದೆ. ಉತ್ತರ ಕರ್ನಾಟಕದಲ್ಲಿ ಹರಿಯುವ ಕೃಷ್ಣಾನದಿಯ ದಂಡೆಯು ಪ್ರದೇಶವು ಬಹು ಬೆಲೆಯುಳ್ಳದ್ದು. ಈ ನದಿಯ ನೀರಿನಲ್ಲಿ ಕಬ್ಬಿಣದ ಅಂಶವು ವಿಶೇಷವಾಗಿದ್ದದರಿಂದ ಕ್ಷಯ ರೋಗದ ಜನರಿಗೆ ಇಲ್ಲಿರುವದಕ್ಕೆ ಡಾಕ್ಟರರು ಉಪದೇಶಿಸುತ್ತಾರೆ. ಈ ನದಿಯ ನೀರಿನಿಂದಲೇ ಈ ಪ್ರದೇಶದಲ್ಲಿ ಬೆಳೆಯುವ ಪದಾರ್ಥ, ಹೈನು ಮೊದಲಾದವುಗಳು ವಿಶೇಷ ರುಚಿಕರವಾಗಿವೆ. ದಕ್ಷಿಣ ಕರ್ನಾಟಕದಲ್ಲಿ ಕೊಡಗು, ನೀಲಗಿರಿ, ಪ್ರದೇಶಗಳಲ್ಲಿ ೫೦೦೦ ದಿಂದ ೯೦೦೦ ಅಡಿ ಎತ್ತರವುಳ್ಳ ಪರ್ವತ ಶಿಖರಗಳು ನಯನ ಮನೋಹರವಾಗಿ ನಿಂತುಕೊಂಡಿವೆ. ಈ ಪ್ರದೇಶದಲ್ಲಿ ಕಾಫಿ, ಸಿಂಕೋನಾಗಳನ್ನು ವಿಶೇಷವಾಗಿ ಬೆಳೆಯಿಸುತ್ತಾರೆ. ಪಶ್ಚಿಮದ ಪಟ್ಟಿಯು ಅನೇಕ ಬಂದರಗಳಿಗೆ ಆಶ್ರಯವಾಗಿ ಕರ್ನಾಟಕದ ವ್ಯಾಪಾರಾಭಿವೃದ್ಧಿಗೆ ಆಸ್ಪದವಾಗಿದೆ. ಕರ್ನಾಟಕದ ಮುಖ್ಯ ಉದ್ಯೋಗವು ಒಕ್ಕಲತನವು. ಎಲ್ಲತರದ ಧಾನ್ಯಗಳು, ಕಬ್ಬು, ಹತ್ತಿಗಳು ಮುಖ್ಯ ಬೆಳೆಗಳಾಗಿರುತ್ತವೆ. ಹವೆಯು ಆರೋಗ್ಯಕರವಾಗಿದ್ದು, ಬೈಲು ಸೀಮೆಯಲ್ಲಿ ಮಳೆಯು ಕಡಿಮೆ. ಉಳಿದ ಕಡೆಯಲ್ಲಿ ಮಳೆಯು ಸಾಕಷ್ಟು ಆಗುತ್ತದೆ.

**(೨) ಕೃತ್ರಿಮ ಸುಧಾರಣೆಗಳು:—** ಮುಖ್ಯ ಉದ್ಯೋಗವಾದ ಒಕ್ಕಲತನದ ಸುಧಾರಣೆಗಾಗಿ ಸರಕಾರದವರು ಅನೇಕ ಪ್ರಯತ್ನಗಳನ್ನು ಮಾಡುತ್ತಿರುವರು. ನದಿಗಳಿಗೆ ಒಡ್ಡು ಕಟ್ಟಿ ಕಾಲುವೆಗಳಿಂದ ಭೂಮಿಗೆ ನೀರನ್ನು ಪೂರೈಸುವದೇ ಇವುಗಳಲ್ಲಿ ಮುಖ್ಯವಾದುದು. ಯಾಕಂದರೆ ಬೈಲುಸೀಮೆಯಲ್ಲಿ ಮಳೆ ಕಡಿಮೆಯಾದುದರಿಂದ ಈ ಕಾಲುವೆಗಳಿಂದ ಬಹು ಉಪಯೋಗವಾಗಿ ಒಕ್ಕಲಿಗರ ಗೋಳಾಟವು ಹಿಂಗುವದು. ಗೋಕಾಕ ರೋಡ ಸ್ಟೇಶನ್ನದ ಹತ್ತರ ಘಟಪ್ರಭಾನದಿಗೆ ಒಡ್ಡು ಹಾಕಿ ಕಟ್ಟಿದ ಕಾಲುವೆಯು ೧೪ ಹಳ್ಳಿಗಳಿಗೆ ನೀರನ್ನು ಪೂರೈಸುತ್ತಿದ್ದು, ಈ ಭಾಗದಲ್ಲಿ ಬಹುಶಃ ಬರಗಾಲದ ಭೀತಿಯು ಇಲ್ಲದಂತಾಗಿದೆ. ಇದೇ ತರದ ಮತ್ತೊಂದು ಕಾಲುವೆಯನ್ನು ರಾಜಗೋಳಿಯ (ಬೆಳಗಾಂವ) ಹತ್ತರ ಕಟ್ಟತಕ್ಕವರಿರುವರು. ಒಕ್ಕಲತನವು ಹೊಟ್ಟೆ ಬಟ್ಟೆಗಳನ್ನು ನೋಡಿಕೊಳ್ಳುತ್ತಿರುವದರಿಂದಲೂ, ಇದು ಕರ್ನಾಟಕದ ಮುಖ್ಯ ಹೋರೆಯಾದುದರಿಂದಲೂ, ಈ ವಿಷಯಕ್ಕೆ ಶಕ್ಯವಿದ್ದಷ್ಟು ಪ್ರೋತ್ಸಾಹನವನ್ನು ಕೊಡಲೇ ಬೇಕು. ಸರಕಾರದವರು ಕೆಲವು ಕಡೆಗೆ ಒಕ್ಕಲತನದ ಶಾಲೆಗಳನ್ನೂ ಪ್ರಯೋಗಶಾಲೆಗಳನ್ನೂ ಪ್ರಾರಂಭಿಸಿರುತ್ತಾರೆ. ಎರಡನೆಯದೆಂದರೆ ಕಾರಖಾನೆಗಳೂ. ಗಿರಣಿಗಳೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಬೆಳವಣಿಗೆಯನ್ನು ಹೊಂದಹತ್ತಿವೆ. ತುಸು ದಿವಸಗಳಲ್ಲಿ ವಿದ್ಯುಲ್ಲತೆಯ ದೀಪಗಳು ಮಿಂಚ ತೊಡಗುವವು. ಪ್ರವಾಸಿಕರಿಗಾಗಿ ಮೋಟಾರಿನ ಕಾರ್ಯವು ಸುತ್ತೆಲ್ಲ ಪ್ರಾರಂಭವಾಗಿರುವದರಿಂದ ಉಗಿಬಂಡಿಯಿಂದ ಬಹು ದೂರದಲ್ಲಿದ್ದ ಜನರು ಸಹ ಕನ್ನಡಿಗರೊಡನೆ ಬಳಕೆಯನ್ನಿಡಲಿಕ್ಕೆ ಆಸ್ಪದವಾಗಿದೆ. ಕಾರವಾರ ಜಿಲ್ಹೆಗೆ ಉಗಿಬಂಡಿಯ ಅನುಕೂಲತೆಯಿಲ್ಲ. ಅಳ್ನಾವರ ಸ್ಟೇಶನ್ನದಿಂದ ಹಲ್ಲಿಯಾಳದ ವರೆಗೂ, ಹುಬ್ಬಳ್ಳಿಯಿಂದ ಶಿರ್ಶಿಯ ವರೆಗೂ ಮೋಟಾರಗಳಾಗಿ ಘಟ್ಟದ ಮೇಲಿನ ತಾಲೂಕುಗಳ ಬಳಕೆಗೆ ಆಸ್ಪದವಾಗಿದೆ. ಮಂಗಳೂರ ಜಿಲ್ಹೆಗೆ ಸೌಥ ಇಂಡಿಯನ್ ರೇಲ್ವೆಯ ಸಂಬಂಧವಿದ್ದರೂ, ಬಹು ಸುತ್ತುವರಿದು ಹೋಗುವದರಿಂದ ತಡವಾಗುವದೆಂದು ಶಿವಮೊಗ್ಗೆಯಿಂದ ಮೋಟಾರಗಳು ಪ್ರಾರಂಭವಾಗಿ ಅನುಕೂಲತೆಯನ್ನುಂಟುಮಾಡಿವೆ.

**(೩) ಉಗಿಬಂಡಿಯ ಸಂಬಂಧವು:—** ೧ ಸದರ್ನಮರಾಟಾ, ೨ ಸೌಥಇಂಡಿಯನ್, ೩ ಮೈಸೂರ ಸ್ಟೇಟ ರೇಲ್ವೆ, ೪ ಸೊಲ್ಲಾಪುರ ಭಾಗದಿಂದ ಜಿ. ಆಯ್. ಪಿ. ರೇಲ್ವೆ ಹೀಗೆ ನಾಲ್ಕು ತರದ ಉಗಿಬಂಡಿಯ ಮಾರ್ಗಗಳು

ಇದ್ದು, ಬಹುಶಃ ಎಲ್ಲ ಭಾಗವು, ಉಗಿಬಂಡಿಗೆ ಹೊಂದಿಕೊಂಡಾಗಲಿ ಸಮೀಪದಲ್ಲಾಗಲಿ, ಇದ್ದೇ ಇರುತ್ತದೆ. ಮೈಸೂರ ಸೇಟ ರೇಲ್ವೆಯು ಈಗ ನಂಜನ ಗುಡ್ಡಕ್ಕೆ ನಿಂತಿರುತ್ತದೆ. ತಲಚೇರಿಯ ವರೆಗೆ ಹಾಕತಕ್ಕವರಂತೆ! ಹಾಗಾದರೆ ಕೊಡಗು ಸಹ ಉಗಿಬಂಡಿಯಿಂದ ಸಂಬಂಧಿಸಲ್ಪಡುವದು. ಕಾರವಾರ ಮಂಗಳೂರುಗಳಿಗೆ ಸಮೀಪದ ಉಗಿಬಂಡಿಯ ಮಾರ್ಗಗಳಾದರೆ ಸಿಡಿದು ಬಿದ್ದ ಆ ಜಿಲ್ಹೆಗಳ ಬಳಕೆಯು ಇತರ ಜಿಲ್ಹೆಗಳೊಡನೆ ಬೆಳೆಯಲಿಕ್ಕೆ ಆಸ್ಪದವಾಗುವದು. ಈಗ ಮೋಟಾರಗಳು ಈ ಕೊರತೆಯನ್ನು ತಕ್ಕಮಟ್ಟಿಗೆ ದೂರಮಾಡಿವೆ.

(೪) **ಸಮುದ್ರದ ದಂಡೆಯು:**—ಕಾರವಾರ ಮಂಗಳೂರ ಜಿಲ್ಹೆಗಳು ಬಿಟ್ಟು ಬಿಡದೆ ಹೊಂದಿಕೊಂಡು ಪಶ್ಚಿಮದಲ್ಲಿ ಸುಮಾರು ೨೦೦ ಮೈಲು ಸಮುದ್ರದ ದಂಡೆಯನ್ನು ಕರ್ನಾಟಕಕ್ಕೆ ಒದಗಿಸಿಕೊಟ್ಟಿರುತ್ತವೆ. ಸಮುದ್ರ ಸಾಮಿಪ್ಯವು ರಾಜ್ಯದಾಢಳತೆಯ ಸೌಲಭ್ಯಗಳಲ್ಲಿ ಒಂದು ವಿಶೇಷವಾಗಿರುವದರಿಂದ ಕರ್ನಾಟಕದ ಸುದೈವದಿಂದ ಇಷ್ಟು ಸಮುದ್ರದಂಡೆಯು ಅದರ ಭಾವೀ ಅಭಿವೃದ್ಧಿಗೆ ಸಾಕಾಗಿದೆ. ಬಿಹಾರ ಪ್ರಾಂತಕ್ಕೆ ಹೊಸದಾಗಿ ಪ್ರಾಂತಿಕಸ್ವರೂಪವನ್ನು ಕೊಡುವಾಗ ಓಡಿಸಾ ಪ್ರಾಂತವನ್ನು ಅದಕ್ಕೆ ಜೋಡಿಸಿದರು, ಈ ಪ್ರಾಂತಕ್ಕೆ ಸಮುದ್ರದ ಸಂಬಂಧವನ್ನು ಒದಗಿಸುವದೊಂದು ಉದ್ದೇಶವಾಗಿತ್ತೆಂದು ಹೇಳಬಹುದು. ಕರ್ನಾಟಕದ ಈ ೨೦೦ ಮೈಲಿನ ಸಮುದ್ರ ದಂಡೆಯಲ್ಲಿ ಕಾರವಾರ, ಕುಮಠಾ, ಹೊನ್ನಾವರ, ಮಂಗಳೂರು, ತದಡಿ, ಮಲ್ಪಿ, ಕುಂದಾಪುರ ಮೊದಲಾದ ಬಂದರಗಳು ಬರುತ್ತವೆ. ಕರ್ನಾಟಕದ ವಿಶಿಷ್ಟ ಕಲೆಯಾದ ನೌಕಾನಯನವನ್ನು ಪುನರುಜ್ಜೀವನಗೊಳಿಸಲಿಕ್ಕೆ ಸಾಕಷ್ಟು ಆಸ್ಪದವಿದ್ದು ಸ್ವತಂತ್ರ ಕರ್ನಾಟಕ ಪ್ರಾಂತವಿಲ್ಲದೆ ಈ ಲಾಭವು ಕನ್ನಡಿಗರಿಗೆ ದೊರೆಯುವದು ದುರ್ಲಭವಾಗಿದೆ. ೧೮೭೫ರಲ್ಲಿ ಮಂಗಳೂರ ಬಂದರದಲ್ಲಿ ೨೬೪೦೦೦ ಟನ್ನ ಭಾರವನ್ನೊಯ್ಯುವ ೩೬೦೦ ಹಡಗಗಳು ಬಂದವೆಂದು ಬರೆದದೆ. ಇರಾಣೀ ಆಖಾತ, ಅರಬಸ್ತಾನ ಕಡೆಗೆ ಈ ಬಂದರದಗುಂಟ ವ್ಯಾಪಾರವು ನಡೆಯುತ್ತದೆ. ಇದೇ ರೀತಿ ಉಳಿದ ಬಂದರಗಳಾದರೂ ಕರ್ನಾಟಕದ ಸೇವೆಗಾಗಿ ಸಿದ್ಧವಾಗಿವೆ.

(೫) **ಆಢಳತೆಗೆ ಸೌಲಭ್ಯವು:**—ಭಾವೀ ಕರ್ನಾಟಕ ಪ್ರಾಂತದಲ್ಲಿ ೨ ಭಾಗಗಳಾಗುವವು. ಬೆಳಗಾಂವಿ, ಧಾರವಾಡ, ವಿಜಾಪುರ, ಕಾರವಾರ,

ಬಳ್ಳಾರಿ ಈ ಐದು ಜಿಲ್ಹೆಗಳಿಗೆ ಉತ್ತರಭಾಗವೆಂದೂ, ಅನಂತಪುರ, ಹೊಸೂರು, ನೀಲಗಿರಿ, ಕೊಡಗು, ಮಂಗಳೂರು ಈ ಐದು ಜಿಲ್ಹೆಗಳಿಗೆ ದಕ್ಷಿಣಭಾಗವೆಂದೂ ಹೇಳಬಹುದು. ಈ ಜಿಲ್ಹೆಗಳು ಒಂದಕ್ಕೊಂದು ಹೊಂದಿಕೊಂಡಿರುವದರಿಂದಲೂ ಉಗಿಬಂಡಿ, ಮೋಟಾರಗಳಿಂದ ಪ್ರವಾಸಕ್ಕೆ ಅನುಕೂಲವಾಗಿರುವದರಿಂದಲೂ, ಆಢಳಿತೆಗೆ ಸೌಲಭ್ಯವುಂಟಾಗುವಂತಿದೆ. ಕಾರವಾರ ಮಂಗಳೂರ ಜಿಲ್ಹೆಗಳು ಒಂದಕ್ಕೊಂದು ಹೊಂದಿಕೊಂಡಿರುವದರಿಂದಲೂ ಈಗಲೂ ಅವಕ್ಕೆ ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಹೆಗಳೆಂದು ಕರೆಯುವದರಿಂದಲೂ, ಇವೆರಡು ಕೂಡಿ ಒಂದೇ ಭಾಗದಲ್ಲಿ ಇದ್ದರೆ ಅನುಕೂಲವೆಂದು ಕೆಲವರು ಸೂಚಿಸುವರು. ಗೋಕರ್ಣದ ಸಭೆಯಲ್ಲಿ ಕೆಲವು ಮುಂದಾಳುಗಳ ವಿಚಾರವಾದರೂ ಇದೇ ತರವಾಗಿತ್ತು. ಹಾಗಿದ್ದರೆ ಬೆಳಗಾಂವಿ, ಧಾರವಾಡ, ವಿಜಾಪುರ, ಬಳ್ಳಾರಿ, ಅನಂತಪುರಗಳನ್ನು ಉತ್ತರಭಾಗವೆಂದೂ, ಹೊಸೂರು, ನೀಲಗಿರಿ, ಕೊಡಗು, ಮಂಗಳೂರು, ಕಾರವಾರಗಳನ್ನು ದಕ್ಷಿಣಭಾಗವೆಂದೂ ಮಾಡಬಹುದು.

( ೬ ) **ಶುಭಸ್ವಪ್ನವು**:--ಕರ್ನಾಟಕ ಪ್ರಾಂತವಾದಬಗ್ಗೆ ಒಂದು ಕನಸು ಬಿತ್ತೆಂದು ತಿಳಿಯುವಾ! ಆ ಕನಸಿನಲ್ಲಿ ಕರ್ನಾಟಕ ಪ್ರಾಂತದ ಗವ್ಹರ್ನರರೂ, ಕಾಯದೆ ಮಂಡಳವೂ, ಕರ್ನಾಟಕ ವಿಶ್ವವಿದ್ಯಾಪೀಠವೂ, ಹೈಕೋರ್ಟವೂ, ಹಂಪಿ, ಮಡಿಕೇರಿಯಲ್ಲಿ ಕಾಯದೆಮಂಡಳಕ್ಕಾಗಿ ಸರಕಾರೀ ಮಂದಿರಗಳೂ, ಕಾರವಾರ, ಮಂಗಳೂರಗಳಲ್ಲಿ ಕನ್ನಡಿಗರ ಹಡಗುಗಳೂ, ಕಾಣಿಸುವವಲ್ಲವೇ! ಇಷ್ಟೇ ಏಕೆ? ಈಗ ಇಂಗ್ಲಂಡಿನ ಮಾರ್ಕೆಟಿನಲ್ಲಿ ಮುಂಬೈ ವ್ಯಾಪಾರಸ್ಥರ ಪತ್ತು ಬೆಳೆದಿರುವಂತೆ ನಮ್ಮ ಹುಬ್ಬಳ್ಳಿ, ಗದಗು, ಸೊಲ್ಲಾಪುರ, ಮಂಗಳೂರಗಳ ಪತ್ತು ಬೆಳೆದು ಕರ್ನಾಟಕಕ್ಕೆ ಕಳೆ ಏರುತ್ತಿರುವದು ಸಹ ಕಂಡುಬರುವದು. ಕನ್ನಡಿಗರ ಕೂಡ ಸಹಕಾರವನ್ನಿಡುವದು ಅವಶ್ಯವಾಗಲು, ಯುರೋಪಿಯನ್ ವ್ಯಾಪಾರಸ್ಥರು ಕನ್ನಡವನ್ನು ಕಲಿಯಬಹುದು. ಅವರ ಕೂಡ ಎಷ್ಟೋ ಕನ್ನಡ ಶಬ್ದಗಳೂ, ಕನ್ನಡ ಗ್ರಂಥಗಳೂ ಪರದೇಶಕ್ಕೆ ಹೋಗಿ ನೆಲೆಗೊಳ್ಳಬಹುದು. ಕನ್ನಡ ಬಂಧುಗಳೇ! ಇದು ಸ್ವಪ್ನವೆಂದು ತಿಳಿದು ನಿರಾಶೆಯಾಗಬೇಡಿರಿ. ಇಂಥ ಶುಭ ಸ್ವಪ್ನವು ನಿಮಗೆ ಗೋಚರವಾಗಲಿ. ನಿಮ್ಮ ಪ್ರಯತ್ನದಿಂದ ಈ ಸ್ವಪ್ನವು ನಿಜವಾಗಲಿ.

---

# ಹನ್ನೆರಡನೆಯ ಪ್ರಕರಣ.

## ಆಯ-ವ್ಯಯದ ವಿಚಾರವು.

೧ ಆಯದ ಮಾನದಿಂದ ನ್ಯಾಯವು, ೨ ಆಸಾಮು, ಮಧ್ಯಪ್ರಾಂತಗಳ ಸ್ಥಿತಿ, ೩ ತೆಲಗು-ಉರಿಯಾ ಜನರ ವಿಚಾರ, ೪ ಸರಕಾರದ ಸಹಾಯವು, ೫ ಭಾವೀ ಕರ್ನಾಟಕಪ್ರಾಂತದ ಉತ್ಪನ್ನವು, ೬ ಪ್ರಾಂತಿಕ ಖರ್ಚಿನ ವಿಚಾರವು, ೭ ಉತ್ಪನ್ನ ಬೆಳೆಯುವ ಧೋರಣವು, ೮ ಕೊನೆಯ ಉದ್ಗಾರಗಳು,

**( ೧ ) ಆಯದ ಮಾನದಿಂದ ನ್ಯಾಯವು:—** ಸ್ವತಂತ್ರ ಪ್ರಾಂತವನ್ನು ಬೇಡುವಾಗ ೧ ಕ್ಷೇತ್ರ-ಜನಸಂಖ್ಯೆ, ೨ ಅರ್ಥಳತೆಗೆ ಸೌಲಭ್ಯ, ೩ ಖರ್ಚಿನ ವ್ಯವಸ್ಥೆಯಾಗುವಷ್ಟು ಉತ್ಪನ್ನವು, ಈ ಮೂರು ಸಂಗತಿಗಳು ಮುಖ್ಯವಾಗಿದ್ದರೂ, ಇವುಗಳಲ್ಲಿ ೩ನೆಯದೇ ಅತಿಶಯ ಮಹತ್ವದ್ದು. ಸರಕಾರವು ತನ್ನ ಅನುಕೂಲತೆಗಾಗಿ ಸಣ್ಣದಿದ್ದರೂ, ದೂರಿದ್ದರೂ, ಖರ್ಚು ಸಾಲದಷ್ಟಿದ್ದರೂ ಸ್ವತಂತ್ರಪ್ರಾಂತವನ್ನು ನಿರ್ಮಿಸಿಕೊಂಡಿರುವ ಉದಾಹರಣಗಳುಂಟು. ಈ ತರದ ಕೃಪೆಯು ಕರ್ನಾಟಕ ಪ್ರಾಂತಕ್ಕೆ ದೊರೆಯದಿದ್ದರೂ, ಮೇಲಿನ ೩ ಸಂಗತಿಗಳಿಗೆ ಸಮಾಧಾನಕರವಾದ ಉತ್ತರವು ದೊರೆತ ನಂತರ ಕರ್ನಾಟಕ ಪ್ರಾಂತವನ್ನು ಬೇರೆ ಮಾಡಲು ಅಡ್ಡಿಯಿಲ್ಲ. ಈ ಮೂರರಲ್ಲಿ ಉತ್ಪನ್ನದ ದೃಷ್ಟಿಯಿಂದಲೂ ವಿಚಾರಿಸಿ, ಕರ್ನಾಟಕ ಪ್ರಾಂತವಾಗುವದು ಶಕ್ಯವಾಗಿರುತ್ತದೆಂದು ತೋರಿಸಿದರೆ "ಆಯದ ಮಾನದಿಂದ ನ್ಯಾಯವೆ" ಂಬಂತೆ ನಮ್ಮ ಬೇಡಿಕೆಯು ನ್ಯಾಯವೆನಿಸುವದು.

**( ೨ ) ಆಸಾಮು, ಮಧ್ಯಪ್ರಾಂತಗಳ ಸ್ಥಿತಿ:—** ( ೧೮೮೦-೮೧ ) ರಲ್ಲಿ ( i ) ಆಸಾಮುಪ್ರಾಂತದ ಭೂಮಿಯ ತೆರಿಗೆಯು ೫೭೪೩೬೧೦ ರು. ಒಟ್ಟು ಉತ್ಪನ್ನವು ೮೨೦೫೪೦೦ ರು. ಇದ್ದಿತು. ಈಗ ಆಸಾಮುಪ್ರಾಂತದ ಭೂಮಿಯ ತೆರಿಗೆ ೩೮೮೬೫೫೮ ರು ಇರುತ್ತದೆ.

( ii ) **ಮಧ್ಯಪ್ರಾಂತ:—** ( ೧೮೮೨-೮೩ ) ರಲ್ಲಿ ಮಧ್ಯಪ್ರಾಂತದ ಭೂಮಿಯ ತೆರಿಗೆ ೬೭೯೪೨೧೦ ರು. ಒಟ್ಟು ಉತ್ಪನ್ನವು ೧೨೨೩೦೦೦೦ ರು.

ಇದ್ದಿತು. ಈಗ ವರ್ಹಾಡ ಪ್ರಾಂತ ಸಹಿತವಾಗಿ ಈ ಪ್ರಾಂತದ ಭೂಮಿಯ ತೆರಿಗೆಯು ೧೬೮೪೦೮೬೩ ರು. ಆಗುವದು. ಇವೆರಡು ಪ್ರಾಂತಗಳು ಮೊದಲು ಚೀಫಕಮಿಶರರ ವಶದಲ್ಲಿದ್ದು ೧೯೧೯ರ ಸುಧಾರಣೆಯ ಕಾಯದೆಯಂತೆ ಗವ್ಹರ್ನರರ ಕೈಕೆಳಗೆ ಬಂದಿರುತ್ತವೆ. ಇವೆರಡು ಪ್ರಾಂತಗಳಿಗೂ, ತೆಲಗರೂ, ಉರಿಯಾ ಜನರು ಸಿದ್ಧಪಡಿಸಿರುವ ಅಂದಾಜುಪತ್ರಿಕೆಗಳಿಗೂ ಹೋಲಿಸಿ ನೋಡಲು ಅನುಕೂಲವಾಗಬೇಕೆಂದು ಈಗ ಆಸಾಮ, ಮಧ್ಯಪ್ರಾಂತಗಳ ಸ್ಥಿತಿಯನ್ನು ಹೇಳಿದಂತಾಯಿತು. ಇನ್ನು ತೆಲಗು, ಉರಿಯಾ ಜನರು ಏನೆನ್ನುವರೆಂಬದನ್ನು ವಿಚಾರಿಸುವಾ.

**( ೩ ) ತೆಲಗು-ಉರಿಯಾ ಜನರ ವಿಚಾರ:**— ( i ) ತೆಲಗರು ತಮ್ಮ ಭಾವೀ ಪ್ರಾಂತದಲ್ಲಿ ೧೧ ಜಿಲ್ಹೆಗಳಾಗುತ್ತವೆಂದು ಎಣಿಕೆ ಹಾಕಿರುತ್ತಾರೆ. ಇದರಲ್ಲಿ ಬಳ್ಳಾರಿ, ಅನಂತಪುರಗಳನ್ನು ಹಿಡಿದಿರುತ್ತಾರೆಂಬದನ್ನು ಮರೆಯತಕ್ಕದ್ದಲ್ಲ. ಹೀಗಿದ್ದರೂ ಇವರ ಅಂದಾಜಪತ್ರಿಕೆಯಲ್ಲಿ ತೆಲಗು ಪ್ರಾಂತದ ಉತ್ಪನ್ನವು ೩೩ ಕೋಟಿ ರೂ. ಇರುತ್ತದೆ. ( ii ) ಉರಿಯಾ ಜನರು ತಮ್ಮ ಪ್ರಾಂತದಲ್ಲಿ ೮ ಜಿಲ್ಹೆಗಳಾಗುವವೆಂದು ಹೇಳುತ್ತಾರೆ. ಇವರ ಪ್ರಾಂತದ ಭೂಮಿಯ ತೆರಿಗೆ ೫೭೧೩೬೬೪ ರೂ. ಇವರ ಪ್ರಾಂತದ ಒಟ್ಟು ಉತ್ಪನ್ನವು ೧೦೯೭೪೯೬ ರೂ. ಎಂದು ಕಾಣಿಸಿರುತ್ತಾರೆ.

**( ೪ ) ಸರಕಾರದ ಸಹಾಯವು:**— ಹೊಸದಾಗಿ ಪ್ರಾಂತವನ್ನು ಮಾಡಿದ ಕಾಲಕ್ಕೆ ಪ್ರಾರಂಭದ ಖರ್ಚಿಗಾಗಿ ಸರಕಾರವು ಸಹಾಯಮಾಡಿರುತ್ತದೆಂಬದನ್ನು ಲಕ್ಷದಲ್ಲಿಡತಕ್ಕದ್ದು. ಸರಕಾರಿ ಕಟ್ಟಡ, ನವೀನ ಅಧಿಕಾರಸ್ಥರ ಸಂಬಳಗಳಿಗಾಗಿ ವರಿಷ್ಠ ಸರಕಾರವು ( ಹಿಂದುಸ್ಥಾನ ಸರಕಾರ ) ತನ್ನ ಉಳಿತಾಯದೊಳಗಿಂದ ಆಯಾಪ್ರಾಂತವು ಸ್ವಯಂ ಪೋಷಕವಾಗುವವರೆಗೆ ಪೋಷಿಸಿರುತ್ತದೆ. ವಿಶೇಷ ರಕಮು ಬೇಕಾದಾಗ ಸಾಲವೆಂದೂ ಕೊಟ್ಟು ಅನುಕೂಲವಾದಾಗ ತಕ್ಕೊಂಡಿರುತ್ತದೆ. ಪ್ರಾಂತಿಕ ಉಳಿತಾಯವನ್ನು ಬೇಡದೆ, ಕೆಲವು ವರ್ಷ ಬಿಟ್ಟಿರುತ್ತದೆ. ಖರ್ಚಿನ ಭಾರವೆಲ್ಲ ತೀರ ಮೈಮೇಲೆ ಬೀಳುವಂಥ ಪ್ರಾಂತಗಳನ್ನು ಎತ್ತಿ ಹಿಡಿದು ಪೋಷಿಸಿ ಸದ್ಯಸ್ಥಿತಿಗೆ ಮುಟ್ಟಿಸಿದ ಉದಾಹರಣೆಗಳು ಸಿಗುತ್ತಿರಲು, ವಿಶೇಷವಾಗಿ ಭಾರವನ್ನು ಹಾಕಲಿಚ್ಛಿಸದ ಕರ್ನಾಟಕ ಪ್ರಾಂತವು ಇತರ ಪ್ರಾಂತಗಳಂತೆ ಪ್ರಾರಂಭದ ಸಹಾಯವನ್ನು ಬೇಡಿದರೆ, ಅಲ್ಲಗಳೆಯು

ವದು ಸರಕಾರದಿಂದ ಆಗದ ಮಾತು! ಇರಲಿ. ನಮ್ಮ ಕರ್ನಾಟಕ ಪ್ರಾಂತವು ಉತ್ಪನ್ನದ ದೃಷ್ಟಿಯಿಂದ ಉರಿಯಾ, ಆಸಾಮ ಪ್ರಾಂತಗಳನ್ನು ಮೀರುತ್ತದೆಂದೂ, ತೆಲಗುಪ್ರಾಂತ, ಮಧ್ಯಪ್ರಾಂತಗಳನ್ನು ಸರಿಗಟ್ಟುತ್ತದೆಂದೂ, ಹೇಳಿದರೆ, ಕನ್ನಡಿಗರಿಗೆ ಹಿಡಿಸಲಾರದಷ್ಟು ಆನಂದವಾಗುವದು ಸ್ವಾಭಾವಿಕವು. ಅವರ ಜಿಜ್ಞಾಸೆಯನ್ನು ಜೇಗನೆ ತೃಪ್ತಗೊಳಿಸಲೋಸುಗ ಇದರ ಕೆಳಗೆ ಅದನ್ನು ಚರ್ಚಿಸುವೆನು.

**( ೫ ) ಭಾವೀ ಕರ್ನಾಟಕ ಪ್ರಾಂತದ ಉತ್ಪನ್ನವು**:—ಇದರಲ್ಲಿ ೧ ಮುಂಬಯಿ ಕರ್ನಾಟಕ, ೨ ಮದ್ರಾಸ ಕರ್ನಾಟಕ, ೩ ಕೊಡಗು ಹೀಗೆ ಮೂರು ಭಾಗಗಳನ್ನು ಮಾಡಿ ವಿವರಿಸಿರುತ್ತೇನೆ. ಈ ವಿಷಯದಲ್ಲಿ ಉತ್ಪನ್ನದ ಮುಖ್ಯ ಬಾಬುಗಳನ್ನು ಮಾತ್ರ ಎಣಿಸಿರುತ್ತೇನೆ. ಮುಂಬಯಿ ಕರ್ನಾಟಕದ ಉತ್ಪನ್ನವು ಅಚ್ಚುಕಟ್ಟಾಗಿ ತಿಳಿಯುಬಂದಂತೆ ಮದ್ರಾಸ ಕರ್ನಾಟಕದ ಉತ್ಪನ್ನವು ಪ್ರತಿಯೊಂದು ಬಾಬಿನಿಂದ ತಿಳಿಯುಬರಲಿಲ್ಲ. ಮದ್ರಾಸ ಕರ್ನಾಟಕವು ಬಹಳ ಛಿನ್ನ ವಿಚಿನ್ನವಾಗಿರುವದರಿಂದಲೂ, ತಾಲೂಕು ಹಾಗು ತಾಲೂಕಿನ ಭಾಗಗಳನ್ನು ಜೋಡಿಸಿರುವದರಿಂದಲೂ ಕ್ಷೇತ್ರದ ಮಾನ, ಕಳೆದ ೪೦ ವರ್ಷದಲ್ಲಿ ( ೧೮೮೨ ರಿಂದ೧೯೨೩ ) ಉತ್ಪನ್ನವು ಬೆಳೆದ ಪ್ರಮಾಣ, ಹಾಗು ಪರಿಸ್ಥಿತಿ ಇವುಗಳನ್ನು ನಿರೀಕ್ಷಿಸಿ, ಮದ್ರಾಸ ಕರ್ನಾಟಕದ ಉತ್ಪನ್ನದ ಅಂದಾಜು ಹಾಕಿರುತ್ತೇನೆ. ಈ ಕೆಲಸದಲ್ಲಿ ವಿಶೇಷ ದಕ್ಷತೆಯನ್ನು ವಹಿಸಿರುತ್ತೇನೆ. ೧೮೮೧ ರಲ್ಲಿ ೧೦೦೦ ಚ. ಮೈಲಿಗೆ ೫ ಲಕ್ಷ ರೂ. ಉತ್ಪನ್ನ ಜೀಳುತ್ತಿತ್ತು. ೧೯೨೩ರಲ್ಲಿ ಅಷ್ಟೇ ನೆಲಕ್ಕೆ ೧೦ ಲಕ್ಷ ರೂ. ( ಎಲ್ಲ ಬಾಬುಗಳಿಂದ ಕೂಡಿ ) ಉತ್ಪನ್ನವಾಗುವದೆಂದು ಅಂದಾಜದಿಂದ ತಿಳಿದುಬಂದದೆ. ಅಂದರೆ ಕಳೆದ ೪೦ ವರ್ಷಗಳಲ್ಲಿ ಉತ್ಪನ್ನವು ಸು. ಇಮ್ಮಡಿಯಾಗಿದೆ. ಇಲ್ಲಿ ನೆನಪಿಡತಕ್ಕ ಮತ್ತೊಂದು ಮಾತೆಂದರೆ—ಈ ವರ್ಷ ಬಂದಷ್ಟೇ ಉತ್ಪನ್ನವು ಮುಂದಿನ ವರ್ಷದಲ್ಲಿ ಬರುತ್ತದೆಂಬ ನಿಯಮವಿಲ್ಲ. ತುಸು ಹೆಚ್ಚುಕಡಿಮೆಯಾಗುವ ಸಂಭವವುಂಟು. ಇಷ್ಟು ಸಂಗತಿಗಳನ್ನು ಲಕ್ಷದಲ್ಲಿಟ್ಟು ಮುಂದಿನ ಉತ್ಪನ್ನದ ವಿವರವನ್ನು ನೋಡಬೇಕು.

(i) **ಮುಂಬೈ ಕರ್ನಾಟಕ**:—ಇಲ್ಲಿ ಮೊದಲು ೧೮೮೧-೮೨ ಇ.ಯ ವಿವರವನ್ನು ಮೊದಲು ಕೊಟ್ಟು ೧೯೨೩ ನೆಯ ಇ. ಯ ವಿವರವನ್ನು ಹಿಂದಿನಿಂದ ಕೊಡುವೆನು.

(೧೮೮೧-೮೨).

| | ಭೂಮಿಯ ತೆರಿಗೆ. | ಇತರ ಬಾಬು. | ಒಟ್ಟು. |
|---|---|---|---|
| ೧ ಬೆಳಗಾಂವಿ | ೧೨೯೯೬೮೦ | ೮೧೦೪೯೦ | ೨೧೧೦೧೭೦ |
| ೨ ಧಾರವಾಡ | ೨೨೬೬೦೫೦ | ೮೦೯೬೮೦ | ೩೦೭೫೩೩೦ |
| ೩ ವಿಜಾಪುರ ೧೮೮೨-೮೩ | ೧೧೯೬೦೨೦ | ೪೮೯೧೯೦ | ೧೬೮೫೨೧೦ |
| ೪ ಕಾರವಾರ | ೧೦೦೮೧೦೦ | ೧೧೩೯೩೭೦ | ೨೧೪೭೪೭೦ |

ಟೀಪು:—ಕಾರವಾರ ಜಿಲ್ಹೆಯಲ್ಲಿ ಅರಣ್ಯಖಾತೆಯ ಉತ್ಪನ್ನವು ಬಹಳ ಹೆಚ್ಚಾಗಿರುವದರಿಂದ ಒಟ್ಟು ಉತ್ಪನ್ನವು ಹೆಚ್ಚಿದೆ.

೧೯೨೩ ಸಾಲಿನ ಉತ್ಪನ್ನದ ವಿವರವು.

| ಮುಖ್ಯ ಬಾಬುಗಳು. | ಬೆಳಗಾಂವಿ ಜಿಲ್ಹೆ. | ಧಾರವಾಡ ಜಿಲ್ಹೆ. |
|---|---|---|
| ೧ ಭೂಮಿಯ ತೆರಿಗೆ | ೨೦೩೨೨೧೪ ರು. | ೨೬೩೮೩೩೮ |
| ೨ ಅರಣ್ಯಖಾತೆ | ೬೩೧೬೫೧ | ೯೯೧೨೦ |
| ೩ ಅಬಕಾರಿ | ೧೦೯೯೩೫೦ | ೧೧೯೬೭೫೬ |
| ೪ ನೋಂದಣಿ | ೫೪೧೭೮ | ೫೩೩೫೬ |
| ೫ ಲೋಕಲ್‌ಫಂಡ | ೬೮೪೫೬೪ | ೯೨೩೬೧೫ |
| ೬ ಕರ | ೪೨೯೦೦ | ೬೦೭೪೦ |
| ೭ ಸ್ಟ್ಯಾಂಪು | ೧೨೧೨೬೦ | ೧೦೪೪೪೦ |
| ಒಟ್ಟು | ೪೬೬೬೫೧೭ ರು. | ೫೦೭೬೪೦೫ ರು. |

| ಮುಖ್ಯ ಬಾಬುಗಳು. | ವಿಜಾಪುರ ಜಿಲ್ಹೆ. | ಕಾರವಾರ ಜಿಲ್ಹೆ. |
|---|---|---|
| ೧ ಭೂಮಿಯ ತೆರಿಗೆ | ೧೧೦೦೯೨೦ | ೧೦೮೭೩೪೩ |
| ೨ ಅರಣ್ಯಖಾತೆ | ೯೯೧೨೦ | ೧೯೮೫೩೦೫ |
| ೩ ಅಬಕಾರಿ | ೪೮೮೮೪೦ | ೩೫೦೯೦೭ |
| ೪ ನೋಂದಣಿ | ೩೫೧೯೫ | ೨೦೧೨೫ |
| ೫ ಲೋಕಲ್‌ಫಂಡ | ೬೪೯೨೮೪ | ೩೯೨೫೯೬ |
| ೬ ಕರ | ೨೪೫೦೦ | ೧೯೧೦೦ |
| ೭ ಸ್ಟ್ಯಾಂಪು | ೫೮೯೬೦ | ೬೮೩೪೦ |
| ಒಟ್ಟು | ೨೪೫೬೪೧೯ | ೩೯೨೩೭೧೬ |

| | |
|---|---|
| ನಾಲ್ಕು ಜಿಲ್ಹೆಗಳಿಂದ ಒಟ್ಟು | ೧೬೧೨೩೪೫೭ ರು. |
| ಸೊಲ್ಲಾಪುರ ಜಿಲ್ಹೆಯ ಕನ್ನಡ ಭಾಗದ ಉತ್ಪನ್ನ. ( ಅಂದಾಜು ). | ೯೦೦೦೦೦ ರು. |
| | ೧೭೦೨೩೪೫೭ ರು. |

## ಒಟ್ಟು ಮುಂಬೈ ಕರ್ನಾಟಕದ ಉತ್ಪನ್ನ.

ನೆನಪಿಡಲಿಕ್ಕೆ ಅನುಕೂಲವಾಗಬೇಕೆಂದು ೧ ಕೋಟಿ ೭೦ ಲಕ್ಷ ಎಂದು ತಿಳಿಯಬಹುದು.

ಟೀಪು:—ಕರ ಮತ್ತು ಸ್ಟ್ಯಾಂಪುಗಳ ಉತ್ಪನ್ನವು ೧೯೨೩ ಇಸ್ವಿಯಲ್ಲಿ ಪ್ರತ್ಯೇಕವಾಗಿ ದೊರೆಯದ್ದರಿಂದ (೧೮೮೧) ಇ. ರಕಮನ್ನು ಇಟ್ಟುಕೊಂಡಿರುತ್ತದೆ. ಧಾರವಾಡ, ವಿಜಾಪುರ ಜಿಲ್ಹೆಗಳ ಬಗ್ಗೆ ಅರಣ್ಯಖಾತೆಯ ಉತ್ಪನ್ನವು ಕೂಡಿಯೇ ದೊರಕುತ್ತದೆ. ನೆನಪಿಡಲಿಕ್ಕೆ ಅನುಕೂಲವಾಗಬೇಕೆಂದು ಆಯಾ ಜಿಲ್ಹೆಗೆ ಆ ರಕಮನ್ನು ಸರಿಯಾಗಿ ವಿಭಾಗಿಸಿ ಹಾಕಿರುತ್ತೇವೆ. ಇದರಲ್ಲಿ ತುಸು ಹೆಚ್ಚು ಕಡಿಮೆಯಾದರೂ ನಮ್ಮ ಅಂದಾಜಿಗೇನೂ ಬಾಧೆ ಬರುವಂತಿಲ್ಲ:— ( ಈ ಸಂಖ್ಯೆಗಳು ಸರಕಾರಿ ಲೆಕ್ಕದ ಆಧಾರದಿಂದ ಬರೆಯಲ್ಪಟ್ಟಿವೆ. )

### (ii) ಮದ್ರಾಸ ಕರ್ನಾಟಕ:—

| | ೧೮೮೧ ಇ. | ೧೯೨೩ ಇ. ಅಂದಾಜು. |
|---|---|---|
| ೧ ಬಳ್ಳಾರಿ | ೨೫೩೫೧೩೦ | ೪೫ ಲಕ್ಷ. |
| ೨ ಅನಂತಪುರ ( ಪತ್ತಿಕೊಂಡ ತಾ. ಸ. ) | ಸು. ೧೫ ಲಕ್ಷ. | ೩೦ ಲಕ್ಷ. |
| ೩ ಹೊಸೂರು | ಹೊಸ ಜಿಲ್ಹೆಯು | ಸು. ೨೫ ಲಕ್ಷ. |
| ೪ ನೀಲಗಿರಿ ( ಕೋಯಿಮುತ್ತೂರ ಭಾ. ಸೆ. ) | ಸು. ೧೫ ಲಕ್ಷ. | ೩೦ ಲಕ್ಷ. |
| ೫ ಮಂಗಳೂರು ( ೧೮೭೧ ) | ೨೩೩೭೭೬೦ | ೪೫ ಲಕ್ಷ. |
| | | ಒಟ್ಟು ೧೭೫ ಲಕ್ಷ. |

**ಅಂದರೆ ೧ ಕೋಟಿ ೭೫ ಲಕ್ಷವಾಗುವದು**

(iii) **ಕೊಡಗು** (೧೮೮೧) ಭೂಮಿಯ ತೆರಿಗೆ ೩೦೭೨೪೦ ರು. ಅಬಕಾರಿ ೧೧೯೬೧೦, ಅರಣ್ಯ-೯೯೫೯೦, ನೋಂದಣಿ ೪೨೧೦, ಸ್ಟ್ಯಾಂಪು ೭೬೯೧೦, ಇತರ ಚಿಲ್ಲರ ಬಾಬುಗಳಿಂದ ಕೆಲವು ರಕಮು ಕೂಡಿ ಕೊಡಗದ ಒಟ್ಟು ಉತ್ಪನ್ನವು ೭೦೬೯೬೦ ರು. ಇದ್ದಿತು. ಈಗಿನ ಉತ್ಪನ್ನವು ಬಹಳ ಹೆಚ್ಚಿದೆಯೆಂದು ನಾವು ಕೇಳಿರುತ್ತೇವೆ. ಆದರೂ ಇತರ ಜಿಲ್ಲೆಯ ಪ್ರಮಾಣದಂತೆ ಇದನ್ನು ಸಹ ಇಮ್ಮಡಿ ಮಾಡಿ ಸು. ೧೫ ಲಕ್ಷ ಇಟ್ಟುಕೊಂಡಿರುತ್ತೇವೆ.

ಕರ್ನಾಟಕಪ್ರಾಂತದ ಒಟ್ಟು ಉತ್ಪನ್ನದ ವಿವರ:--

| | | |
|---|---|---|
| (i) | **ಮುಂಬಯಿ ಕರ್ನಾಟಕ** | ೧ ಕೋಟಿ ೭೦ ಲಕ್ಷ. |
| (ii) | **ಮದ್ರಾಸ ಕರ್ನಾಟಕ** | ೧ ಕೋಟಿ ೭೫ ಲಕ್ಷ. |
| (iii) | **ಕೊಡಗು** | ೧೫ ಲಕ್ಷ. |
| | | **ಒಟ್ಟು ೩ ಕೋಟಿ ೬೦ ಲಕ್ಷ ರೂ.** |

ಇದರಲ್ಲಿ ಭೂಮಿಯ ತೆರಿಗೆಯಿಂದ ಸು. ೧ ಕೋಟಿ ೬೦ ಲಕ್ಷ, ಇತರ ೨ ಕೋಟಿ ಎಂದು ನೆನಪಿಡಬಹುದು.

(iv) ಈ ಕರ್ನಾಟಕ ಪ್ರಾಂತದ ತೆರಿಗೆಯನ್ನು ಇತರ ಪ್ರಾಂತಗಳ ತೆರಿಗೆಯೊಡನೆ ಹೋಲಿಸಿ ನೋಡುವ ಇಚ್ಛೆಯುಂಟಾಗುವದು ಸ್ವಾಭಾವಿಕವೆಂದು ತಿಳಿದು ಅದನ್ನು ಇಲ್ಲಿ ಪೂರೈಸುತ್ತೇವೆ.

| | ಪ್ರಾಂತಗಳು | ಭೂಮಿಯ ತೆರಿಗೆ. |
|---|---|---|
| ೧ | ಮುಂಬಯಿ | ೫೬೦೦೦೧೧೫ |
| ೨ | ಮದ್ರಾಸ | ೫೬೩೦೮೯೪೮ |
| ೩ | ಬಂಗಾಲ | ೨೮೦೨೮೫೩೭ |
| ೪ | ಬಿಹಾರ-ಓಡಿಸಾ | ೧೬೩೯೯೧೯೯ |
| ೫ | ಸಂಯುಕ್ತಪ್ರಾಂತ | ೫೯೦೭೮೩೯೪ |
| ೬ | ಪಂಜಾಬ | ೨೬೯೪೩೬೩೧ |
| ೭ | ಬ್ರಹ್ಮದೇಶ | ೪೬೩೦೭೩೭೭ |
| ೮ | ಮಧ್ಯಪ್ರಾಂತ | ೧೬೮೪೦೮೬೩ |
| ೯ | ಆಸಾಮು | ೭೮೮೬೫೫೮ |

೧೦ ಕರ್ನಾಟಕಪ್ರಾಂತ ೧೬೦೦೦೦೦೦
೧೧ ತೆಲಗುಪ್ರಾಂತ ( ಸು ) ೧೬೦೦೦೦೦೦
೧೨ ಓಡಿಸಾ ( ಸ್ವತಂತ್ರ ) ೫೨೧೩೮೬೬

( ೬ ) **ಪ್ರಾಂತಿಕ ಖರ್ಚಿನ ವಿಚಾರವು:**—ಪ್ರಾಂತಿಕ ಖರ್ಚಿನ ಕಲ್ಪನೆಯು ಬರಬೇಕೆಂಬ ಉದ್ದೇಶದಿಂದ ಇಲ್ಲಿ ಮುಂಬೈ ಸರಕಾರದ ಬಜೆಟ್ಟಿನ ( ಅಂದಾಜ ಪತ್ರಿಕೆ ) ೨ ಕೋಷ್ಟಕಗಳನ್ನು ಉದ್ಧರಿಸುತ್ತೇನೆ. ಈ ಸಂಖ್ಯೆಗಳು ಮುಂಬೈಯಂಥ ಸುಧಾರಿಸಿದ ಹಾಗು ಸಂಪೂರ್ಣ ಸ್ವರೂಪದ ಪ್ರಾಂತಿಕ ಖರ್ಚಿನವಿರುತ್ತವೆಂಬದನ್ನು ಮರೆಯಲಾಗದು. ಕೇವಲ ೧೦ ಜಿಲ್ಹೆಗಳಿರುವ ಭಾವೀ ಕರ್ನಾಟಕ ಪ್ರಾಂತದ ಖರ್ಚಿನ ಅಂದಾಜು ಇದಕ್ಕೂ ಕಡಿಮೆಯಾಗುವದೆಂದು ಒಡೆದು ಹೇಳುವ ಕಾರಣವಿಲ್ಲ. ಕರ್ನಾಟಕ ಪ್ರಾಂತಕ್ಕೆ ಲೆ. ಗವ್ಹರ್ನರರ ಯೋಗ್ಯತೆಯು ಗವ್ಹರ್ನರರಾಗಲಿ, ಆಸಾಮಪ್ರಾಂತದ ಗವ್ಹರ್ನರರ ಯೋಗ್ಯತೆಯು ಗವ್ಹರ್ನರರಾಗಲಿ ಇದ್ದರೆ ಸಾಕು! ಇದರ ಹೊರತು ಎಗ್ಝಿಕ್ಯೂಟಿವ್ಹ ಕೌನ್ಸಿಲ್ ದಲ್ಲಿಯೂ ಉಳಿತಾಯವನ್ನು ಹಿಂದೆ ಸೂಚಿಸಿರುತ್ತೇವೆ. ಇನ್ನು ಮುಂಬೈ ಪ್ರಾಂತಿಕ ಖರ್ಚಿನ ಅಂದಾಜು ಕೆಳಗೆ ಬರೆದಂತೆ ಇರುತ್ತದೆ.

**ಮುಂಬೈ ಇಲಾಖೆಯ ರಾಜ್ಯದಾಢಳಿತೆಯ ಖರ್ಚು.**

( ಕಾದಿಟ್ಟ ಹಾಗು ಒಪ್ಪಿಸಿಕೊಟ್ಟ ಖಾತೆಗಳು ).

| ಬಾಬುಗಳು. | ೧೯೨೨-೨೩ರಲ್ಲಾದ ಖರ್ಚು. | ೧೯೨೩-೨೪ ಇ. ಯ ಅಂದಾಜು. |
|---|---|---|
| | (ಈ ಸಂಖ್ಯೆಗಳು ಸಾವಿರವನ್ನು ಸೂಚಿಸುತ್ತವೆ.) | |
| ( ಅ ). | | |
| ೧ ಗವ್ಹರ್ನರರ ಸಂಬಳ | ೧೨೦ | ೧೨೦ |
| ೨ ಸಂಪಚ್ಯುಅರಿ ಅಲಾವನ್ಸ | ೩೩ | ೩೨ |
| ೩ ಸಂಗಡಿಗರಾದ ಅಧಿಕಾರಿಗಳು (ಸ್ಟಾಫ್) | ೫೭೨ | ೭೨೦ |
| ೪ ಕಾಂಟ್ರ್ಯಾಕ್ಟ ಅಲಾವನ್ಸ | ೧೦೦ | ೧೦೦ |
| ೫ ಪ್ರವಾಸದ ಖರ್ಚು | ೧೩೬ | ೮೦ |
| ೬ ಎಗ್ಝಿಕ್ಯೂಟಿವ್ಹ ಕೌನ್ಸಿಲ್ | ೨೭೧ | ೨೬೯ |
| ೭ ಮಿನಿಸ್ಟರ್ಸ ( ಮಂತ್ರಿ ) | ೨೦೪ | ೧೫೪ |
| ಒಟ್ಟು | ೧೪೩೬ | ೧೪೭೫ |

( ಬ ).

| | | |
|---|---|---|
| ೧ ಕಾಯದೆಮಂಡಳದ ಅಧ್ಯಕ್ಷ ಉಪಾಧ್ಯಕ್ಷರ ಸಂಬಳ | ೩೯ | ೩೯ |
| ೨ ಕಾಯದೆಮಂಡಳದ ಬಗ್ಗೆ | ೧೧೩ | ೨೮೪ |
| ಒಟ್ಟು | ೧೫೨ | ೩೨೩ |

( ಕ ).

| | | |
|---|---|---|
| ೧ ಸಿವ್ಹಿಲ್ ಸೆಕ್ರೇಟರಿಯಟ್ | ೧೬೨೮ | ೧೬೨೪ |
| ೨ ಲೋಕಲ್‌ಫಂಡ ಆಡಿಟ್ ಡಿ॥ | ೧೩೮ | ೧೬೯ |
| ೩ ಲ್ಯಾಂಡ ರಿ॥ ಖಾತೆಯ ಡಾಯರೇಕ್ಟರ | ೫೮ | ೬೨ |
| ಒಟ್ಟು | ೧೮೨೪ | ೧೮೫೫ |

( ಡ ).

| | | |
|---|---|---|
| ೧ ಸಿಂಧದ ಕಮಿಶನರರು | ೨೫೫ | ೨೫೮ |
| ೨ ಉಳಿದ ಕಮಿಶನರರು | ೨೮೫ | ೩೩೫ |
| ಒಟ್ಟು | ೫೪೦ | ೫೯೩ |

( ಇ ). ಜಿಲ್ಹೆಯ ಬಗ್ಗೆ:—

| | | |
|---|---|---|
| ಜಿಲ್ಹೆಯ ಹಾಗು ತಾಲೂಕುಗಳ ಆಢಳತೆಗಾಗಿ ಹಾಗು ಇತರ | ೭೩೦೩ | ೭೨೩೬ |
| ಒಟ್ಟು | ೭೩೦೩ | ೭೨೩೬ |

( ಫ ).

| | | |
|---|---|---|
| ಡಿಸ್‌ಕ್ರೀಶನರೀ ಗ್ರ್ಯಾಂಟ್ಸ | ೨೫ | ೧೭ |
| ಎಕ್ಸ ಚೇಂಜ | ೧೪೫ | ೧೫೦ |
| ಇಂಗ್ಲಂಡದಲ್ಲಿ ಖರ್ಚು | ೨೭೫ | ೩೦೨ |
| ಒಟ್ಟು | ೪೪೫ | ೪೬೯ |
| ಎಲ್ಲ ಬಾಬುಗಳ ಒಟ್ಟು | ೧೧೭೦೦ | ೧೧೯೫೧ |

**(೭) ಉತ್ಪನ್ನ ಬೆಳೆಯುವ ಧೋರಣವು:—**

(i) ಮಾಂಟೆಗೂ ಚೇಮ್ಸಫರ್ಡ ರಿಪೋರ್ಟಿನಲ್ಲಿ ಸೂಚಿತವಾದ ಮೇರೆಗೆ ಹಿಂದುಸ್ಥಾನ ಸರಕಾರವು ಇನ್ನು ಕೆಲವು ಖಾತೆಗಳನ್ನು ಪ್ರಾಂತಿಕ ಸರಕಾರಕ್ಕೆ ಒಪ್ಪಿಸಿದರೆ ಪ್ರಾಂತಿಕ ಉತ್ಪನ್ನವು ಬೆಳೆಯುವಂತಿದೆ.

(ii) ಹಿಂದುಸ್ಥಾನದ ನೌಕರರಷ್ಟು ಸಂಬಳವು ಯಾವ ದೇಶದಲ್ಲಿಯೂ ಇರುವದಿಲ್ಲ. ಯುರೋಪಿಯನ್ನರು ಕಡಿಮೆ ಸಂಬಳಕ್ಕೆ ಬರುವದಿಲ್ಲೆಂದರೆ ನೌಕರಿಯಲ್ಲಿ ಕ್ರಮವಾಗಿ ಹಿಂದೀ ನೌಕರರ ಸಂಖ್ಯೆಯನ್ನು ಬೆಳೆಯಿಸುತ್ತ ಹೋದರೆ ಖರ್ಚು ಕಡಿಮೆಯಾಗಿ ಉಳಿತಾಯವಾಗುವದೆಂದು ಮುಂದಾಳುಗಳು ಮೇಲೆ ಮೇಲೆ ಸೂಚಿಸುತ್ತ ಬಂದಿರುತ್ತಾರೆ.

(iii) ಕಾಲುವೆ ಮಾಡಿಕೊಡುವದು, ದೇಶೀಯ ಹಡಗುಗಳಿಗೆ ಉತ್ತೇಜನ ಇವೇ ಮೊದಲಾದ ಬಾಬುಗಳಿಂದ ಭಾವೀ ಕರ್ನಾಟಕ ಪ್ರಾಂತದ ಉತ್ಪನ್ನವನ್ನು ಬೆಳೆಯಿಸಲಿಕ್ಕೆ ಅಸ್ಪದವುಂಟು.

**(೮) ಕೊನೆಯ ಉದ್ಗಾರಗಳು:—** ನಾವು ಎಷ್ಟು ಹಂಬಲಿಸಿದರೂ, ಎಷ್ಟು ಆಧಾರಗಳನ್ನು ಕೊಟ್ಟು ಈ ವಿಷಯವನ್ನು ಸಿದ್ಧಮಾಡಿದರೂ, ಕಟ್ಟಕಡೆಗೆ ನಮ್ಮ ಹಣೆಯ ಬರಹವನ್ನು ಬರೆಯುವ ಲೆಕ್ಕಣಿಕೆಯು ಹಿಂದುಸ್ಥಾನ ಸರಕಾರದ ಕೈಯಲ್ಲಿರುವದರಿಂದ, ಆ ಲೆಕ್ಕಣಿಕೆಗೆ ದಯಹುಟ್ಟುವಂತೆ ದೇವರು ಪ್ರೇರಿಸಲೆಂದೂ, ಕಾಯದೆ ಮಂಡಳಗಳ ಕನ್ನಡ ಸಭಾಸದರು ಈ ವಿಷಯವಾಗಿ ಪರಾಕಷ್ಟದಿಂದ ಪ್ರಯತ್ನಿಸಲೆಂದೂ ಬೇಡಿಕೊಂಡು ಈ ಪ್ರಕರಣವನ್ನು ಇಲ್ಲಿಗೆ ಮುಗಿಸುವೆನು.



# ಹದಿಮೂರನೆಯ ಪ್ರಕರಣ.



## ಸಂಸ್ಥಾನಗಳ ವಿಷಯವಾಗಿ ಭಾವೀಧೋರಣವು.



(೧) ವರ್ಗೀಕರಣ, ೨ ಸದ್ಯಸ್ಥಿತಿಯು, ೩ ಸಾಮಾನ್ಯವಾದ, ಉದ್ಗಾರಗಳು, ೪ ಭಾಷಾಕ್ರಮಗಳ ಭೇದಿಸುವಿಕೆ, ೫ ಶ್ರೀಛತ್ರಪತಿ ಮಹಾರಾಜರ ವಾಗ್ದಾನ, ೬ ಸುಧಾರಣೆಯ ಸಂಸ್ಕಾರವು, ೭ ಭಾವೀಧೋರಣವು, ೮ ಭಾಷೆಯಂತೆ ಪ್ರಾಂತಗಳ ವಿಭಾಗವು, ೯ ಹೊಸತರದ ಆಢಳಿತೆಯು, ೧೦ ನಾಲ್ವರಿಗೂ ಕಲ್ಯಾಣವು,

**(೧) ವರ್ಗೀಕರಣವು:**—ಕರ್ನಾಟಕದ ಸಂಸ್ಥಾನಗಳು ಯಾವ ಯಾವ ಭಾಷೆಯವರ ಅಧಿಕಾರಕ್ಕೆ ಒಳಪಟ್ಟಿವೆಯೆಂಬದನ್ನು ತೋರಿಸಬೇಕಾದರೆ ಕೆಳಗೆ ಕಾಣಿಸಿದಂತೆ ಮೊದಲು ವರ್ಗೀಕರಣ ಮಾಡುವಾ:—

(i) ಮೈಸೂರು, ಸೊಂಡೂರು ಇವೆರಡು ಕನ್ನಡಿಗರ ವಶದಲ್ಲಿ.

(ii) ನಿಜಾಮನ ಕರ್ನಾಟಕ, ಸವಣೂರು. ಇವೆರಡು ಮುಸಲ್ಮಾನರ ವಶದಲ್ಲಿ.

(iii) ಕೊಲ್ಹಾಪುರ, ಮುಧೋಳ, ಜತ್ತ, ಅಕ್ಕಲಕೋಟ ಇವು ನಾಲ್ಕು ಮರಾಠಾ ಜಾತಿಯವರ ವಶದಲ್ಲಿ.

(iv) ಸಾಂಗಲಿ, ಮಿರಜಿ (ಹಿರೇ), ಮಿರಜಿ (ಚಿಕ್ಕ), ಜಮಖಂಡಿ ರಾಮದುರ್ಗ, ಕುರುಂದವಾಡ (ಹಿರೇ) ಕುರುಂದವಾಡ (ಚಿಕ್ಕ) ಔಂಧ, ಇವು ೮ ಮರಾಟೆ ಬ್ರಾಹ್ಮಣರ ವಶದಲ್ಲಿ.

ಭಾಷೆಯಂತೆ ವರ್ಗೀಕರಿಸಿದರೆ ೧ನೆಯ ಗುಂಪು ಕನ್ನಡಿಗರು. ೨ನೆಯ ಗುಂಪು ಮುಸಲ್ಮಾನ ಭಾಷೆಯವರು. ೩-೪ ಗುಂಪುಗಳು ಮರಾಟೆ ಭಾಷೆಯವರು. ಎಂದು ಹೇಳಬಹುದು. ಇವುಗಳಲ್ಲಿ ಮೈಸೂರು, ಗವ್ಹರ್ನರ ಜನರಲ್‌ರ ಮೇಲ್ವಿಚಾರಕ್ಕೆ ಸಂಬಂಧಿಸಿದ ೫ ದೊಡ್ಡ ಸಂಸ್ಥಾನಗಳಲ್ಲಿ ಒಂದಾಗಿದ್ದು, ಉಳಿದವುಗಳು ಪ್ರಾಂತಿಕ ಸರಕಾರಕ್ಕೆ ಸಂಬಂಧಿಸಿರುತ್ತವೆ.

**(೨) ಸದ್ಯಸ್ಥಿತಿಯು:**—ಮೈಸೂರಂತೂ ಕನ್ನಡಿಗರ ಸಂಸ್ಥಾನವಿದ್ದು, ಹಿಂದುಸ್ಥಾನದಲ್ಲಿ ಸುಧಾರಣೆಯನ್ನು ಹೊಂದಿದ ಸಂಸ್ಥಾನಗಳಲ್ಲಿ ವಿಶೇಷ ಪ್ರಸಿದ್ಧ

ವಾಗಿದೆ. ಇದು ಈ ಮೊದಲೆ ತನ್ನ ಪ್ರಜೆಗಳಿಗೆ ಪ್ರತಿನಿಧಿ ಸಭೆಯನ್ನೂ ದಯಪಾಲಿಸಿರುತ್ತದೆ. ಈ ಸಂಸ್ಥಾನದಲ್ಲಿ ಕನ್ನಡಿಗರು ಸುಸ್ಥಿತಿಯಲ್ಲಿರುವದು ಸ್ವಾಭಾವಿಕವು. ಇಷ್ಟಲ್ಲದೆ ಉಳಿದ ಕನ್ನಡಿಗರಿಗೂ ಈ ಸಂಸ್ಥಾನವು ಕೊರಳೊಳಗಿನ ಪದಕದಂತೆ ಅಕ್ಕರತೆಯನ್ನು ಹುಟ್ಟಿಸುತ್ತದೆ. ಸೊಂಡೂರು ತೀರ ಸಣ್ಣ ಸಂಸ್ಥಾನವು. ಸವಣೂರು ಸಂಸ್ಥಾನದ ಅಧಿಪತಿಯು ಮುಸಲ್ಮಾನರಿದ್ದರೂ, ಅವರ ಸಂಸ್ಥಾನವು ಸಂಪೂರ್ಣ ಕನ್ನಡವಿರುವದರಿಂದ ಪ್ರಜೆಗಳ ಜನ್ಮ ಭಾಷೆಯಲ್ಲಿ ಶಿಕ್ಷಣಕೊಡುವ ವ್ಯವಸ್ಥೆಯನ್ನು ಇಟ್ಟಿರುತ್ತಾರೆ. ಜಮಖಂಡಿ ಸಂಸ್ಥಾನದಲ್ಲಿಯೂ, ಇದೇ ತರದ ವ್ಯವಸ್ಥೆಯಾಗಿದೆ. ಇನ್ನು ಎರಡು ಭಾಷೆಗಳು ನಡೆಯುತ್ತಿರುವ ಸಂಸ್ಥಾನಗಳಲ್ಲಿ ಕೆಲವು, ಕನ್ನಡ ಭಾಗಗಳಲ್ಲಿ ಕನ್ನಡ ಶಾಲೆಗಳನ್ನು ಇಟ್ಟದ್ದು ನೆಟ್ಟಗಾಗಿದ್ದರೂ, ಉತ್ತೇಜನದ ಕೊರತೆಯು ಭಾಸವಾಗದಿರದು. ಇನ್ನುಳಿದ ಸಂಸ್ಥಾನಗಳ ಸ್ಥಿತಿಯು ತೀರ ಶೋಚನೀಯವಾಗಿದೆ. ಇಲ್ಲಿ ಕನ್ನಡಿಗರು ಕನ್ನಡ ಶಾಲೆಗಳಿಲ್ಲದ ಮೂಲಕ ಗತ್ಯಂತರವಿಲ್ಲದೆ ಪರಭಾಷೆಯಲ್ಲಿ ಶಿಕ್ಷಣವನ್ನು ಪಡೆಯಬೇಕಾಗುತ್ತದೆ. ಸಂಸ್ಥಾನಿಕರನ್ನು ಕೇಳಹೋದರೆ ಮರಾಠಿಯಲ್ಲಿ ಶಿಕ್ಷಣವನ್ನು ಪಡೆಯುವದು ಹೆಚ್ಚು ಲಾಭದಾಯಕವೆಂದು ಉಪದೇಶವನ್ನು ಕೊಡುತ್ತಾರಂತೆ. ಜನರು ಖಾಸಗೀ ರೀತಿಯಿಂದ ತೆಗೆದ ಕನ್ನಡ ಶಾಲೆಗಳಿಗೆ ಅಡ್ಡಿ ಮಾಡುವವರೂದೊರೆಯುತ್ತಾರಂತೆ!

( ೩ ) **ಸಾಮಾನ್ಯವಾದ ಉದ್ಗಾರಗಳು:**— ಕೆಲವು ಸಂಸ್ಥಾನಗಳು ಬ್ರಿಟಿಶ ಸರಕಾರವನ್ನು ನೋಡಿಕೊಂಡು ಕೂಡಲೆ ತಮ್ಮ ಸಂಸ್ಥಾನಗಳಲ್ಲಿ ಸುಧಾರಣೆಯನ್ನು ಮಾಡಿಯೇ ತೀರುತ್ತವೆಂಬದು ನಿಜವು. ಆದರೂ ಬಹಳ ಸಂಸ್ಥಾನಗಳು, ವಿದ್ಯೆ, ಕಲಾಕೌಶಲ್ಯ, ಸುಧಾರಣೆಗಳಲ್ಲಿ ಬಹಳೇ ಹಿಂದಿರುತ್ತವೆ. ಇನ್ನು ಸಂಸ್ಥಾನಿಕರ ಇಚ್ಛೆಯೇ ಕಾಯದೆಯಾಗುವ ಸ್ಥಳದಲ್ಲಿ ಪ್ರಜೆಗಳ ಸ್ಥಿತಿಯು ಹೇಗೆ ತಾನೆ ಒಳ್ಳೇಯದಾಗಿರಬೇಕು? ನಿಜವಾಗಿ ನೋಡಿದರೆ, ಸಂಸ್ಥಾನಿಕರು ದೇಶೀಯರಿದ್ದು, ತಮ್ಮ ಪ್ರಜೆಗಳಿಗೆ ಬ್ರಿಟಿಶ ಪ್ರಜೆಗಳಿಗಿಂತ ಹೆಚ್ಚು ಅನುಕೂಲತ ಗಳನ್ನು ಒದಗಿಸಿಕೊಡತಕ್ಕದ್ದು. ಇದಂತೂ ಒತ್ತಟ್ಟಿಗೆ ಉಳಿದು ಸಂಸ್ಥಾನಿ ಪ್ರಜೆಗಳು ಬ್ರಿಟಿಶರ ಅಧಿಕಳತೆಯೇ ಒಳ್ಳೇಯದೆಂದು ಇಚ್ಛಿಸತೊಡಗಿದ ಮೇ ಇದೇನು! ಸಂಸ್ಥಾನಿಕರಿಗೆ ಭೂಷಣವೋ?. ದೂಷಣವೋ? ವರ್ಹಾಡ ಪ್ರಾಂ ವನ್ನು ನಿಜಾಮರಿಗೆ ತಿರುಗಿ ಒಪ್ಪಿಸುವ ವಿಚಾರವು ನಡೆದಾಗ ವರ್ಹಾಡ ಜನರು ಸಭೆಗೂಡಿ ಯಾವ ನಿರ್ಣಯವನ್ನು ಮಾಡಿಕೊಂಡರೆಂಬದು ಮೊ

ಮೊನ್ನೆ ವೃತ್ತ ಪತ್ರಗಳಲ್ಲಿ ಎಲ್ಲರೂ ಅರಿತ ವಿಷಯವಾಗಿದೆ. ಓಡಿಸಾ ಪ್ರಾಂತ ವನ್ನು ಬೇಡುವ ಉರಿಯಾ ಜನರು ತಮ್ಮಲ್ಲಿ ೩೧ ಸಂಸ್ಥಾನಗಳು ಬರುವವೆಂದು ಹಳಹಳಿಸಿರುವರು. ಇರಲಿ, ಕಾಲಚಕ್ರಕ್ಕನುಸರಿಸಿ ಸಂಸ್ಥಾನಿಕರು ತಮ್ಮ ದೃಷ್ಟಿ ಕೋನವನ್ನು ಬದಲಿಸಿದರೆ, ಈ ದುಸ್ಥಿತಿಯು ಕ್ಷಿಪ್ರದಲ್ಲಿಯೇ ದೂರಾಗುವದು.

( ೪ ) **ಭಾಷಾಕ್ರಿಮಿಗಳ ಭೇದಿಸುವಿಕೆ**:—ಪ್ರಾಥಮಿಕ ಶಿಕ್ಷಣವು ಪರಭಾಷೆಯಲ್ಲಿ ನಡೆದರೆ, ಆ ಪರಭಾಷೆಯ ಕ್ರಿಮಿಗಳು ರಕ್ತದಲ್ಲಿ ಭೇದಿಸಿ ಮಾತೃಭಾಷಾಭಿಮಾನವನ್ನು ಕಡಿದು ಕೊಲ್ಲುತ್ತವೆ! ಇದಂತೂ ಎಲ್ಲರ ಅನುಭವದ ಮಾತು. ಇದಕ್ಕೆ ಒಂದೆರಡು ಅಪವಾದಗಳಿರಬಹುದು. ಪರಭಾಷೆಯಲ್ಲಿ ಶಿಕ್ಷಣವನ್ನು ಪಡೆದು ಮಾತೃಭಾಷಾವಿರೋಧಕರಾಗಿ ಚಳವಳಿಯನ್ನೆಬ್ಬಿಸಿದ ಹಾಗು ಎಬ್ಬಿಸುತ್ತಿರುವ ಪುಣ್ಯಪುರುಷರ ಉದಾಹರಣೆಗಳು ಅಲ್ಲಲ್ಲಿ ವಿಪುಲವಾಗಿ ದೊರೆಯುತ್ತವೆ. ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆಯಬೇಕೆಂಬ ಪ್ರಜೆಗಳ ಇಚ್ಛೆಯು ನ್ಯಾಯವಾಗಿದ್ದು, ಅದನ್ನು ಪೂರೈಸಬೇಕಲ್ಲದೆ, ಪರಭಾಷೆಯ ( ಇಂಜೆಕ್‌ಶನ್ )ವನ್ನು ಕೊಡತಕ್ಕದ್ದಲ್ಲ. ಇದರಿಂದ ಪರಭಾಷೆಗಳನು ಕಲಿಯಬಾರದೆಂದು ಅರ್ಥವಾಗದು. ಹೆಚ್ಚು ಹೆಚ್ಚು ಭಾಷೆಗಳನ್ನು ಕಲಿತಷ್ಟು ಹೆಚ್ಚು ಹೆಚ್ಚು ಜ್ಞಾನಕೋಶದ ಕೀಲಿಯ ಕೈಗಳು ನಮ್ಮ ವಶವಾಗುವವು. ಆದರೂ ಮಾತೃಭಾಷೆಯ ಸಿಂಹಾಸನವು ಕಂಪಿಸದಂತೆ ಜಾಗರೂಕರಾಗಲೇ ಬೇಕು. ಪ್ರಾಥಮಿಕ ಶಿಕ್ಷಣವಂತೂ ಮಾತೃಭಾಷೆಯಲ್ಲಿಯೇ ನಡೆಯಬೇಕು.

( ೫ ) **ಶ್ರೀಛತ್ರಪತಿ ಮಹಾರಾಜರ ವಾಗ್ದಾನ**:—ಮೇಲೆ ವಿವರಿಸಿದ ಸಂಗತಿಯು ಎಷ್ಟೋ ಸಂಸ್ಥಾನಿಕರ ಕಿವಿಗೆ ಮುಟ್ಟಿರುವದಿಲ್ಲ. ಈಗಿನ ಶ್ರೀಛತ್ರಪತಿ ಮಹಾರಾಜರು ೨೩-೧೨-೧೯೨೫ನೇ ದಿವಸ ಇಲ್ಲಿಯ ಮರಾಠಾ ಶಿಕ್ಷಣ ಪರಿಷದಕ್ಕೆ ಅಧ್ಯಕ್ಷರಾಗಿ ಬಂದಾಗ, ಇಲ್ಲಿಯ ಲಿಂಗವಂತ ಸಮಾಜದವರು ಒಂದು ಮಾನಪತ್ರವನ್ನು ಅರ್ಪಿಸಿದರು. ಆ ಮಾನಪತ್ರದಲ್ಲಿ--( i ) ಕೊಲ್ಹಾಪುರದಲ್ಲಿ ಲಿಂಗಾಯತರ ಸಂಖ್ಯೆಯು ಹೆಚ್ಚುತ್ತಿದ್ದು ಅವರಿಗೆ ಮಾತೃಭಾಷೆಯಲ್ಲಿ ಶಿಕ್ಷಣವನ್ನು ಪಡೆಯಲಿಕ್ಕೆ ಕನ್ನಡ ಶಾಲೆಗಳಿಲ್ಲ. ( ii ) ಲಿಂಗಾಯತರು ವ್ಯಾಪಾರಿ ವರ್ಗದಲ್ಲಿಯೂ ಬರುವದರಿಂದ ಕೊಲ್ಹಾಪುರದಂಥ ಕೇಂದ್ರಸ್ಥಳದಲ್ಲಿ ವ್ಯಾಪಾರಿ ಶಿಕ್ಷಣದ ಶಾಲೆಯೊಂದನ್ನು ಪ್ರಾರಂಭಿಸಬೇಕು. ಇವೆರಡು ಸಂಗತಿಗಳನ್ನು ಬೇಡಿಕೊಂಡಿದ್ದರು. ಈ ಮಾನಪತ್ರಕ್ಕೆ ಉತ್ತರವನ್ನು ಕೊಡುವಾಗ ಮಹಾರಾಜರು:-

" ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳಲ್ಲಿರುವ ಲಿಂಗಾಯತರು ಮರಾಟಿಯನ್ನು ಕಲಿಯುವದು ಹೆಚ್ಚು ಲಾಭಕರವೆಂ "ದು ನುಡಿದಿದ್ದರೂ, " ನಮ್ಮ ಲಿಂಗವಂತ ಪ್ರಜೆಗಳಿಗೆ ಕನ್ನಡದಲ್ಲಿ ಶಿಕ್ಷಣವು ಬೇಕಾಗಿದ್ದರೆ ನಾವು ಲಕ್ಷಪೂರ್ವಕವಾಗಿ ವಿಚಾರಿಸುತ್ತೇವೆ "ಂದು ಅಭಿವಚನವನ್ನು ಕೊಟ್ಟರು. ಇದೇ ರೀತಿ ಉಳಿದ ಸಂಸ್ಥಾನಗಳ ಪ್ರಜೆಗಳು ಜಾಗ್ರತರಾಗಿ ಒತ್ತಾಯ ಪಡಿಸಿದರೆ, ಏನಾದರೂ ಕಾರ್ಯವಾದೀತೆಂಬ ಆಶೆಯುದೆ.

( ೬ ) **ಸುಧಾರಣೆಯ ಸಂಸ್ಕಾರವು:—** ಮರಾಟಿಗರಲ್ಲಿ ಒಂದು ಬಡೋದೆಯ ಸಂಸ್ಥಾನವೂ, ಕನ್ನಡಿಗರಲ್ಲಿ ಒಂದು ಮೈಸೂರು ಸಂಸ್ಥಾನವೂ ಒಳ್ಳೇ ತಿದ್ದುಪಡೆಯನ್ನು ಹೊಂದಿದ್ದು, ದಿನದಿನಕ್ಕೆ ಸುಧಾರಣೆಯ ಕಳೆಯು ಏರುತ್ತ ನಡೆದದೆ, ಉಳಿದ ಕಡೆಗೆ ಆಚಾರ, ವಿಚಾರ, ಆಢಳತೆಗಳಲ್ಲಿ ನವನಾಗರಿಕತೆಯ ಕಂಡುಬರುವದಿಲ್ಲ. ಏನೋ ಒಂದು ಹಳೆಯ ಪದ್ಧತಿಯೇ ಭಾಸವಾಗುತ್ತದೆ. ಸುಧಾರಣೆಯ ಈಗಿನ ಯುಗದಲ್ಲಿ ಬ್ರಿಟಿಶ ಪ್ರಜೆಗಳ ಜೊತೆಗೆ, ಇಲ್ಲವೆ ಅವರ ಹಿಂದಿನಿಂದ ಬೆನ್ನು ಬಿಡದೆ, ಸಂಸ್ಥಾನಿಕ ಪ್ರಜೆಗಳು ಮುಂಬರಿಯಲೇ ಬೇಕು. ನಾವೇನು! ಸಂಸ್ಥಾನಿಕ ಪ್ರಜೆಗಳು, ನಮ್ಮನ್ನು ಯಾರು ಕೇಳುವರು? ಎಂದು ಮೂಲಿಯನ್ನು ಹಿಡಿದರೆ ಯಾರೂ ಕೇಳುವದಿಲ್ಲ, ಮುಂದೆ ಬಂದು ಮುಂಗೈ ಹಿಡಿದು ಮಾತಾಡಿಸಿದರೆ, ಎಲ್ಲರೂ ಕೇಳಿಯೇ ಕೇಳುತ್ತಾರೆ. ನಾಳೆ, ಮಾಧ್ಯಮಿಕ ( ಹೈಸ್ಕೂಲ ) ಶಿಕ್ಷಣವೂ, ಉಚ್ಚ ಶಿಕ್ಷಣವೂ, ದೇಶಭಾಷೆಯ ಮುಖಾಂತರವೇ ಕೊಡಲ್ಪಡಬೇಕೆಂದು ನಿಶ್ಚಯವಾದರೆ, ಸಂಸ್ಥಾನಿಕ ಕನ್ನಡ ಪ್ರಜೆಗಳ ಅವಸ್ಥೆಯು ಏನಾದೀತು?

( ೭ ) **ಭಾವೀಧೋರಣವು:—** ಭಾವೀಸ್ಥಿತಿಯ ಅಜ್ಞಾನದಿಂದಾಗಲಿ, ನಿದ್ರಾವಸ್ಥೆಯಿಂದಾಗಲಿ, ಸಂಸ್ಥಾನಿಕ ಪ್ರಜೆಗಳಲ್ಲಿ ಜಾಗ್ರತೆಯ ಯಾವ ಲಕ್ಷಣಗಳು ತೋರದಿದ್ದರೂ, ಸಂಯುಕ್ತ ಕರ್ನಾಟಕ ಪ್ರಾಂತದ ಚರ್ಚೆಯನ್ನು ಮಾಡುವಕಾಲದಲ್ಲಿ ಅವರನ್ನು ತೀರ ಮರೆತು ಬಿಟ್ಟರೆ ಸಾಗದು. ಬ್ರಿಟಿಶ್ ಪ್ರಜೆಗಳಿಗೂ ಸಂಸ್ಥಾನಿಕ ಪ್ರಜೆಗಳಿಗೂ ಬಳಿಕೆಯು ಬೆಳೆಯುವಂತೆ ಧೋರಣವನ್ನಿಡಬೇಕಾಗಿದೆಯೇ ಹೊರ್ತು ಸಂಸ್ಥಾನಿಕರನ್ನು ತೆಗೆಯಬೇಕೆಂದಾಗಲಿ, ಅವರ ಉತ್ಪನ್ನವನ್ನಾಗಲಿ, ಅಧಿಕಾರವನ್ನಾಗಲಿ ಕಡಿಮೆಮಾಡಬೇಕೆಂದಾಗಲಿ, ಯಾರೂ ಇಚ್ಛಿಸುವಂತಿಲ್ಲ. ನಮ್ಮ ಧೋರಣವು ತೀರ ಸಾಮಾನ್ಯತರದ್ದಿದ್ದು, ಎಲ್ಲರೂ ಒಡಂಬ

ಡುವಂತಿದೆ. ಸಣ್ಣ ಸಣ್ಣ ಸಂಸ್ಥಾನಗಳನ್ನು ಆಯಾ ಸಂಸ್ಥಾನಗಳಿಗೆ ಸಮೀಪಿಸಿದ ಕನ್ನಡ ಜಿಲ್ಹೆಗಳಿಗೆ ಸಂಬಂಧಿಸಿ, ಆ ಜಿಲ್ಹೆಯ ಕಲೆಕ್ಟರರೇ ಆ ಸಂಸ್ಥಾನಗಳ ಪೋಲಿಟಿಕಲ್ ಎಜಂಟರಾಗುವಂತೆ ವ್ಯವಸ್ಥೆಯಾಗತಕ್ಕದ್ದು. ದೊಡ್ಡ ಸಂಸ್ಥಾನಗಳಾದ ಮೈಸೂರು ಹಾಗು ನಿಜಾಮನ ಕರ್ನಾಟಕಗಳನ್ನು ಮಾತ್ರ ಕರ್ನಾಟಕ ಪ್ರಾಂತಕ್ಕೆ ಸಂಬಂಧಿಸಿ, ಈ ಪ್ರಾಂತದ ಮುಖ್ಯಾಧಿಕಾರಿಯೇ (ಗವರ್ನರ, ಲೆ. ಗವರ್ನರ, ಅಥವಾ ಚೀಫ ಕಮೀಶನರ) ಈ ಸಂಸ್ಥಾನಗಳ ರೆಸಿಡೆಂಟರಾಗುವಂತೆ ವ್ಯವಸ್ಥೆಯಾಗತಕ್ಕದ್ದು. ಇಷ್ಟಾದರೆ, ಈಗಿನ ಅನಿಯಮಿತತನವು ಅಳಿದು ಹೋಗಿ ಎಲ್ಲ ಕಡೆಗೂ ಏಕದೇಶಿಯತ್ವವು ಕಂಡುಬರುವದು. ಪರಸ್ಪರರ ಬಳಿಕೆಗೂ ಆಸ್ಪದವಾಗುವದು. ಶಿಕ್ಷಣದ ಉನ್ನತಿಯು ಎಲ್ಲ ಕಡೆಗೂ ಸಮನಾಗಿ ಆಗುವದಲ್ಲದೆ, ಎಲ್ಲೆಡೆಗಳಲ್ಲಿ ಒಂದೇತರದ ಪಠ್ಯಪುಸ್ತಕಗಳನ್ನು ಗೊತ್ತುಪಡಿಸಲಿಕ್ಕೂ ಅನುಕೂಲವಾಗುವದು.

(೮) **ಭಾಷೆಯಂತೆ ಪ್ರಾಂತಗಳ ವಿಭಾಗವು:**—ಒಂದಕ್ಕಿಂತ ಹೆಚ್ಚು ಭಾಷೆಗಳು ನಡೆಯುವಂಥ ಸಂಸ್ಥಾನಗಳಲ್ಲಿ ಭಾಷೆಯಂತೆ ವಿಭಾಗಗಳನ್ನು ಮಾಡಬೇಕಾಗುವದು. ಮೈಸೂರು ಸಂಪೂರ್ಣ ಕನ್ನಡವಾಗಿರುವದರಿಂದ ಅದರ ವಿಷಯವಾಗಿ ಪ್ರಶ್ನವಿಲ್ಲ. ಆದರೆ ನಿಜಾಮನ ರಾಜ್ಯದಲ್ಲಿ ತೆಲಗು, ಮರಾಟಿ, ಕನ್ನಡ ಹೀಗೆ ೩ ಭಾಷೆಗಳು ನಡೆಯುತ್ತಿರುವದರಿಂದ, ಇಡೀ ನಿಜಾಮನ ರಾಜ್ಯವನ್ನು ಕರ್ನಾಟಕ ಪ್ರಾಂತಕ್ಕೆ ಹೇಗೆ ಸಂಬಂಧಿಸಬಹುದು? ಮತ್ತು ಕರ್ನಾಟಕ ಪ್ರಾಂತದ ಮುಖ್ಯಾಧಿಕಾರಿಯು ಇಡೀ ನಿಜಾಮನ ರಾಜ್ಯದ ರೆಸಿಡೆಂಟರು ಹೇಗೆ ಆಗಬಲ್ಲರು? ಎಂದು ಕೇಳಬಹುದು. ಈ ಪ್ರಶ್ನದ ನಿವಾರಣಾರ್ಥವಾಗಿಯೇ ದೊಡ್ಡ ಸಂಸ್ಥಾನಗಳಲ್ಲಿ ಭಾಷೆಯಂತೆ ಪ್ರಾಂತಗಳ ವಿಭಾಗವನ್ನು ಮಾಡಬೇಕೆಂದು ನಾವು ಸೂಚಿಸಿರುತ್ತೇವೆ. ಆಯಾಭಾಗವು ಆಯಾಪ್ರಾಂತದ ಕೂಡ ಬಳಿಕೆಯನ್ನಿಡಲಿಕ್ಕೆ ಆಸ್ಪದವಾಗುವಂತೆ ಧೋರಣವನ್ನಿಡತಕ್ಕದ್ದು. ದೊಡ್ಡ ಭಾಗವು ಯಾವ ಪ್ರಾಂತಕ್ಕೆ ಸಂಬಂಧಿಸುತ್ತದೋ ಆ ಪ್ರಾಂತದ ಮುಖ್ಯಾಧಿಕಾರಿಯು ರೆಸಿಡೆಂಟರಾಗಲು ಅಡ್ಡಿಯಿಲ್ಲ. ಇದರಿಂದ ಉಳಿದ ಭಾಗಗಳ ಬಳಿಕೆಗೆ ಪ್ರತಿಬಂಧವಾಗದಂತೆ ನಡೆಯತಕ್ಕದ್ದು. ಇಲ್ಲಿ ಮುಖ್ಯ ಧೋರಣವನ್ನು ಸಂಕ್ಷೇಪವಾಗಿ ತಿಳಿಸಿದಂತಾಯಿತು. ಮುಂದೆ ಈ ನಿಯಮವನ್ನು ರೂಢಿಯಲ್ಲಿ ತರುವ ಪ್ರಸಂಗವು ಬಂದಾಗ ತುಸು ಹೆಚ್ಚು ಕಡಿಮೆಯನ್ನು ಮಾಡಿಕೊಳ್ಳಲಿಕ್ಕೆ ಅಡ್ಡಿಯಿಲ್ಲ. ಕರ್ನಾ

ಟಕ ಪ್ರಾಂತದ ಗವ್ಹರ್ನರ ಅಥವಾ ಲೆ. ಗವ್ಹರ್ನರರು ಮೈಸೂರು ಸಂಸ್ಥಾನದ ರೆಸಿಡೆಂಟರಾದ ಮಾತ್ರಕ್ಕೆ ಆ. ಸಂಸ್ಥಾನದ ಯೋಗ್ಯತೆಯಲ್ಲಿ ಏನೂ ಕುಂದುಬರುವಂತಿಲ್ಲ. ( ಗವ್ಹರ್ನರ ಜನರಲ್‌ರ ಮೇಲ್ವಿಚಾರಕ್ಕೆ ಸಂಬಂಧಿಸಿ, ಹೀಗೆ ಮಾಡಲು ಅಡ್ಡಿಯಿಲ್ಲ. )

( ೯ ) **ಹೊಸ ತರದ ಆಢಳಿತೆಯು**:—ನೂರಾರು ವರ್ಷದಿಂದ ಒಂದು ತರದ ಹಳೇ ಪದ್ಧತಿಯಲ್ಲಿ ಬಿದ್ದುಕೊಂಡಿರುವ ಹಾಗೂ ಉಳಿದ ತಮ್ಮ ಬಾಂಧವರೊಡನೆ ಸಂಬಂಧವನ್ನು ಮರೆತು ಬಿಟ್ಟ ಸಂಸ್ಥಾನಿಕ ಪ್ರಜೆಗಳಿಗೆ ಈ ಹೊಸ ಆಢಳತೆಯು ವಿಶೇಷವಾಗಿ ರೋಚಿಸಿ, ಅವರಲ್ಲಿ ಒಂದು ಪ್ರಕಾರದ ಚೈತನ್ಯವುಂಟಾದೀತೆಂದು ಆಶಿಸಬಹುದು. ಈಗ ಸಂಸ್ಥಾನಿಕ ಹಾಗೂ ಬ್ರಿಟಿಶ್ ಪ್ರಜೆಗಳು ಒಂದೇ ಭಾಷೆಯವರಿದ್ದರೂ, ಒಬ್ಬರಿಗೊಬ್ಬರು ಭೆಟ್ಟಿಯಾದಾಗ ಮಾತಾಡಿಸಲು ಸಹ ಗರಜಿಲ್ಲದಷ್ಟು ವಿದೇಶೀಯತೆಯು ಕಂಡುಬರುತ್ತದೆ. ನಿಜವಾಗಿ ಈ ವಿದೇಶೀಯತೆಗೆ ಯಾವ ತರದ ಸಂಬಂಧವನ್ನಿಡದ ರಾಜ್ಯಪದ್ಧತಿಯು ಕಾರಣವಾಗಿದೆ. ಹೊಸ ತರದ ಆಢಳತೆಯು ಸುರುವಾದರೆ ಈ ವಿದೇಶೀಯತೆಯು ಲೋಪವಾಗಿ ಏಕದೇಶೀಯತೆಯು ತೋರಬಹುದು. ಇದರಿಂದ ಸಹಕಾರವೂ, ಸ್ನೇಹವೂ ಬೆಳೆದು ಅಖಿಲ ಕರ್ನಾಟಕದ ಐಕ್ಯಕ್ಕೆ ಸಹಾಯವಾಗುವದು.

( ೧೦ ) **ನಾಲ್ವರಿಗೂ ಕಲ್ಯಾಣವು**:—ಬ್ರಿಟಿಶ್ ಸರಕಾರವು, ಬ್ರಿಟಿಶ್ ಪ್ರಜೆಗಳು, ಸಂಸ್ಥಾನಿಕರು, ಸಂಸ್ಥಾನಿಕ ಪ್ರಜೆಗಳು, ಈ ನಾಲ್ವರಲ್ಲಿಯೂ ಪರಸ್ಪರ ಸ್ನೇಹಸಂಬಂಧವೂ, ಸಹಕಾರವೂ, ಬೆಳೆಯುತ್ತ ನಡೆದು, ಒಬ್ಬರಿಗೊಬ್ಬರ ಸಹಾಯದಿಂದ ಅವರವರ ಆಢಳತೆಗೆ ಸೌಲಭ್ಯವುಂಟಾಗುವದು. ಪ್ರಜೆಗಳಲ್ಲಿ ಸುಖಸಂಪತ್ತುಗಳು ಹೆಚ್ಚುವದರಿಂದ ಅನರೂ ಹಾಡಿ ಹರಿಸುವರು. ಆದ್ದರಿಂದ ಹೊಸ ತರವೆಂದು ಬೆದರದೆ, ಮೇಲೆ ಸೂಚಿಸಿದ ಸೌಮ್ಯತರದ ಬದಲಾವಣೆಯನ್ನು ರೂಢಿಯಲ್ಲಿ ತಂದರೆ, ನಾಲ್ವರಿಗೂ ಕಲ್ಯಾಣವುಂಟೆಂದು ಹೇಳಬಹುದು. ದೇವರು ಇಷ್ಟು ಸದ್ಬುದ್ಧಿಯನ್ನು ಎಲ್ಲರಲ್ಲಿಯೂ ಉಂಟು ಮಾಡಲಿ!

———

# ಹದಿನಾಲ್ಕನೆಯ ಪ್ರಕರಣ.

## ಕರ್ನಾಟಕ ವಿಶ್ವವಿದ್ಯಾಪೀಠವು.

೧ ವರ್ಗೀಕರಣ, ೨ ದೇಶಭಾಷೆಯ ಮೂಲಕ ಶಿಕ್ಷಣವು, ೩ ಭಾಷೆಗೊಂದು ವಿಶ್ವವಿದ್ಯಾಪೀಠವು, ೪ ಕರ್ನಾಟಕದಲ್ಲಿ ಶಿಕ್ಷಣಸಂಸ್ಥೆಗಳು, ೫ ವಿಶ್ವವಿದ್ಯಾಪೀಠದ ಅವಶ್ಯಕತೆಯು, ೬ ಬೇರೆ ಉದಾಹರಣೆಗಳು, ೭ ಉಳಿದ ಪ್ರಾಂತದವರ ಪ್ರಯತ್ನ, ೮ ಕರ್ನಾಟಕಕ್ಕೆ ತಳಿಯೇರುವ ಬಗೆ.

( ೧ ) **ವರ್ಗೀಕರಣ:—** ಬಲ್ಲವರು ಈ ವಿಶ್ವವಿದ್ಯಾಪೀಠಗಳನ್ನು ಮೂರು ಬಗೆಯಾಗಿ ವರ್ಗೀಕರಿಸುವರು.

( i ) ಪರೀಕ್ಷೆಯ ವ್ಯಾಪವನ್ನು ಕಡಿಮೆ ಮಾಡಿ, ಉಚ್ಚ ಶಿಕ್ಷಣದ ಸೂತ್ರವನ್ನು ವಹಿಸುವಂಥ ವಿಶ್ವವಿದ್ಯಾಪೀಠಗಳು ( ಪಟ್ಟಣದ ಪೂರ್ತೆ ).

( ii ) ಹೈಸ್ಕೂಲ, ಕಾಲೇಜಗಳನ್ನು ಜೋಡಿಸಿಕೊಂಡು, ಕೇವಲ ಪರೀಕ್ಷೆಯನ್ನು ತೆಗೆದುಕೊಳ್ಳುತ್ತ ಹೋಗುವಂಥವು. ( ಹಿಂದುಸ್ಥಾನದಲ್ಲಿ ಈ ಮಾದರಿಯ ಉದಾಹರಣೆಗಳು ಹೆಚ್ಚಿವೆ. )

( iii ) ಮೇಲಿನ ಎರಡು ತತ್ವಗಳ ಸಮ್ಮಿಶ್ರ ಸ್ವರೂಪದವು. ಈ ಮೂರನೆಯ ಸಮ್ಮಿಶ್ರ ಸ್ವರೂಪದವು ಯೋಗ್ಯವೆಂದು ಬಹುಜನರ ಮತವಿರುತ್ತದೆ. ವಿಶ್ವವಿದ್ಯಾಪೀಠದ ಚಾಲಕರಿಗೂ, ವಿದ್ಯಾರ್ಥಿಗಳಿಗೂ ಯಾವ ತರದ ಸಂಬಂಧವಿಲ್ಲದೆ, ಯಂತ್ರದಂತೆ ಪರೀಕ್ಷೆ ತಕ್ಕೊಂಡು, ಪ್ರಶಸ್ತಿಪತ್ರಿಕೆ ( ಸರಟೀಫಿಕೇಟ ) ಗಳನ್ನು ಕೊಟ್ಟಮಾತ್ರಕ್ಕೆ ವಿಶ್ವವಿದ್ಯಾಪೀಠದ ಉಚ್ಚ ಧ್ಯೇಯವು ಸಾಧ್ಯವಾದಂತಾಗದು.

( ೨ ) **ದೇಶಭಾಷೆಯ ಮೂಲಕ ಶಿಕ್ಷಣವು:—** ಇಂಗ್ಲಿಷ ಭಾಷೆಯನ್ನು ಕಲಿಯತಕ್ಕದ್ದೇ ಸರಿ! ಆದರೆ ಎಲ್ಲ ವಿಷಯಗಳನ್ನು ಆ ಭಾಷೆಯಿಂದಲೇ ಏಕೆ ಕಲಿಯಬೇಕು? ಇದರಿಂದ ಕಾಲಾಪವ್ಯಯ, ದ್ರವ್ಯಾಪವ್ಯಯ, ಶ್ರಮಾಪವ್ಯಯವಾಗುವದಿಲ್ಲವೆ? ದೇಶಭಾಷೆಯ ಮೂಲಕ ಶಿಕ್ಷಣವನ್ನು ಸಾಗಿಸಿದರೆ, ಸ್ವಲ್ಪ ಕಾಲದಲ್ಲಿ, ಸ್ವಲ್ಪ ಹಣದಿಂದ, ಕಡಿಮೆ ಶ್ರಮದಿಂದ ಈಗಿನ ಪದವೀಧರರಷ್ಟು ಯೋಗ್ಯತೆಯ ಜನರು ಸಿದ್ಧರಾಗರೇ? ಇವೇ ಮೊದಲಾದ ವಿಚಾರಗಳು

ಬಹು ದಿವಸದಿಂದ ವಿದ್ಯಾಪಕ್ಷಪಾತಿಗಳಲ್ಲಿ ನಡೆದಿದ್ದು, ಬಹುಶಃ ಈ ತತ್ವವು ಸರ್ವ ಸಮ್ಮತವಾದಂತಾಗಿದೆ. ಒಂದಿಲ್ಲೊಂದು ದಿನ ಈ ಮಾತು ರೂಢಿಯಲ್ಲಿ ಬರತಕ್ಕದ್ದೇ! ಕಲಕತ್ತಾ ವಿಶ್ವವಿದ್ಯಾಪೀಠದ ಉಪಾಧ್ಯಕ್ಷರಾದ ಸರ ಅಶು ತೋಷ ಮುಖರ್ಜಿಯವರು, ಹಿಂದುಸ್ಥಾನದ ಗವ್ಹರ್ನರ ಜನರಲ್‌ರಾಗಿದ್ದ ಲಾರ್ಡ ಚೇಮ್ಸಫರ್ಡ ಸಾ॥ ರು ಈ ತತ್ವವನ್ನು ತಮ್ಮ ಭಾಷಣಗಳಲ್ಲಿ ಪುಷ್ಟೀ ಕರಿಸಿರುವರಲ್ಲದೆ, ಗುರುಕುಲ ವಿಶ್ವವಿದ್ಯಾಪೀಠವು ಈ ತರದ ಒಂದು ಉತ್ತಮ ಉದಾಹರಣವಾಗಿದೆ. ಪುಣೆಯ ಶಿಕ್ಷಣ ಸಂಸ್ಥೆಯು ಈ ಧ್ಯೇಯವನ್ನಿಟ್ಟುಕೊಂಡಿ ರುತ್ತದೆ. ಇದಲ್ಲದೆ ಬೇರೆ ಬೇರೆ ಪ್ರಾಂತದ ವೃತ್ತಪತ್ರಗಳಲ್ಲಿಯೂ, ಮಾಸಪತ್ರಿಕೆಗ ಳಲ್ಲಿಯೂ, ಈ ವಿಷಯದ ಚರ್ವಿತ ಚರ್ವಣವಾಗಿರುತ್ತದೆ. ಇದು ಸರ್ವ ಸಮ್ಮ ತವಾಗಿದೆಯೆಂದು ಹೇಳಲು ಅಡಿಯಿಲ್ಲ.

**( ೩ ) ಭಾಷೆಗೊಂದು ವಿಶ್ವವಿದ್ಯಾಪೀಠವು:**--ಈಗಿನಂತೆ ಮುಂಬೆ ವಿಶ್ವವಿದ್ಯಾಪೀಠವು, ಮದ್ರಾಸ ವಿಶ್ವವಿದ್ಯಾಪೀಠವು ಎಂದಿರದೆ, ಕನ್ನಡ ವಿಶ್ವವಿದ್ಯಾ ಪೀಠ, ತೆಲಗು ವಿಶ್ವವಿದ್ಯಾಪೀಠ, ಮರಾಟಿ ವಿಶ್ವವಿದ್ಯಾಪೀಠ, ಬಂಗಾಲಿ ವಿಶ್ವವಿ ದ್ಯಾಪೀಠ ಎಂದಿರುವದು ಭೂಷಣವೂ, ಶ್ರೇಯಸ್ಕರವೂ ಆಗುವದೆಂಬದು ಈಗ ಎಲ್ಲರಿಗೂ ಮನವರಿಕೆಯಾಗಿದೆ. ಭಾಷೆಯಂತೆ ಪ್ರಾಂತಗಳನ್ನು ವಿಂಗಡಿಸಿದ ಬಳಿಕ ಆ ಭಾಷೆಗೊಂದು ವಿಶ್ವವಿದ್ಯಾಪೀಠವಿರುವದು ಅಪರಿಹಾರ್ಯವಾದ ಸಂಗ ತಿಯು. ಕರ್ನಾಟಕವು ಪ್ರಾಂತಿಕ ಸ್ವರೂಪವನ್ನು ಹೊಂದಿದ ಬಳಿಕ ವಿಶ್ವವಿದ್ಯಾಪೀ ಠಕ್ಕಾಗಿ ಇನ್ನೊಂದು ಪ್ರಾಂತದ ಮೇಲೆ ಅವಲಂಬಿಸುವದೆಂದರೆ ನಗೆಗೀಡಾಗದೇ?

**( ೪ ) ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಗಳು:—**

**(i) ಮುಂಬೈ ಕರ್ನಾಟಕ:**—ಬೆಳಗಾಂವಿ ಜಿಲ್ಹೆಯಲ್ಲಿ ೬ ಹೈಸೂಲ ಗಳೂ, ಧಾರವಾಡ ಜಿಲ್ಹೆಯಲ್ಲಿ ೧ ಕರ್ನಾಟಕ ಕಾಲೇಜವೂ, ೧೦ ಹೈಸ್ಕೂಲ ಗಳೂ, ವಿಜಾಪುರ ಜಿಲ್ಹೆಯಲ್ಲಿ ೫ ಹೈಸ್ಕೂಲಗಳೂ, ಕಾರವಾರ ಜಿಲ್ಹೆಯಲ್ಲಿ ೩ ಹೈಸ್ಕೂಲಗಳೂ ಉಂಟು. ಇವಲ್ಲದೆ ಸಾಂಗಲಿ ೨ ಶಹಾಪೂರ ೧ ( ಒಟ್ಟು ೩ ), ಮಿರಜ ೧, ಜಮಖಂಡಿ ೧, ಮುಧೋಳ ೧, ಸವಣೂರು ೧ ಹೀಗೆ ೭ ಸಂಸ್ಥಾನ ಗಳ ಹೈಸ್ಕೂಲಗಳೂ ಬರುತ್ತವೆ. ಈ ಏಳರಲ್ಲಿ ಸಾಂಗಲಿಯ ೨ ಹೈಸ್ಕೂಲಗಳಲ್ಲಿ ಮರಾಟಿಯ ಬಹುಮತವಿರುವದರಿಂದ ಕರ್ನಾಟಕ ವಿದ್ಯಾಪೀಠಕ್ಕೆ ಕೂಡಲು ಒಲ್ಲೆನ್ನಬಹುದು. ಮಿರಜ ೧ ಜಮಖಂಡಿ ೧ ಮುಧೋಳ ೧ ಸವಣೂರ ೧

ಶಹಾಪೂರ ೧ ಈ ಐದು ಹೈಸ್ಕೂಲಗಳನ್ನು ಕರ್ನಾಟಕ ವಿದ್ಯಾಪೀಠಕ್ಕೆ ಜೋಡಿಸಲು ಅಡ್ಡಿಯಿಲ್ಲ. ಒಟ್ಟು ಮುಂಬೈ ಕರ್ನಾಟಕದಲ್ಲಿ ೧ ಕಾಲೇಜವೂ ೨೯ ಹೈಸ್ಕೂಲಗಳೂ ಸಮಾವೇಶವಾಗುವವು. ಇವುಗಳ ಹೊರ್ತು ಗೋಕಾವಿ, ಐನಾಪುರ ಚಿಕ್ಕೋಡಿಗಳಲ್ಲಿ ತುಸು ದಿವಸಗಳಲ್ಲಿ ಹೈಸ್ಕೂಲಗಳಾಗುವ ಸಂಭವವಿದೆ.

(ii) **ಮದ್ರಾಸ ಕರ್ನಾಟಕ:**—ಬಳ್ಳಾರಿ ಜಿಲ್ಹೆಯಲ್ಲಿ ೪ ಹೈಸ್ಕೂಲಗಳು, ಅನಂತಪುರ ಜಿಲ್ಹೆಯಲ್ಲಿ ೨ ಹೈಸ್ಕೂಲಗಳು, ಮಂಗಳೂರ ಜಿಲ್ಹೆಯಲ್ಲಿ ೧ ಫರ್ಸ್ಟಗ್ರೇಡ ಹಾಗು ೧ ಸೆಕಂಡಗ್ರೇಡ ಹೀಗೆ ೨ ಕಾಲೇಜಗಳೂ, ೫ ಹೈಸ್ಕೂಲಗಳೂ, ಇರುತ್ತವೆ. ಇದಲ್ಲದೆ ನೀಲಗಿರಿ ಜಿಲ್ಹೆಯಲ್ಲಿ ಯುರೋಪಿಯನ್ ವಸತಿಯು ಹೆಚ್ಚಿದ ಪ್ರಭಾವದಿಂದ ಸಣ್ಣದಾದರೂ ಆ ಜಿಲ್ಹೆಯಲ್ಲಿ ವಿದ್ಯಾರ್ಥಿ ಹಾಗು ವಿದ್ಯಾರ್ಥಿನಿಯರಿಗಾಗಿ ೭ ಹೈಸ್ಕೂಲಗಳು ಇರುತ್ತವೆ! ಒಟ್ಟು ಮದ್ರಾಸ ಕರ್ನಾಟಕದಲ್ಲಿ ೨ ಕಾಲೇಜಗಳೂ ೧೮ ಹೈಸ್ಕೂಲಗಳೂ ಬರುವವು. ಇವಲ್ಲದೆ ಇನ್ನೂ ಕೆಲವು ಕಡೆಗೆ ಹೈಸ್ಕೂಲಗಳಾಗುವ ಸಂಭವವಿದೆ.

(iii) **ಕೊಡಗು:**—ಮರಕೇರಾ ಸೆಂಟ್ರಲ್ ಹೈಸ್ಕೂಲ ೧

ಒಟ್ಟು ಕರ್ನಾಟಕದಲ್ಲಿ ೩ ಕಾಲೇಜುಗಳೂ, ೪೮ ಹೈಸ್ಕೂಲಗಳೂ ಬರುವವು. ಇದಲ್ಲದೆ ಕರ್ನಾಟಕ ಲಿಂಗಾಯತ ಏಜ್ಯುಕೇಶನ್ ಸೊಸಾಯಟಿಯು ಪರವಾಗಿ ಧಾರವಾಡದಲ್ಲಾಗಲಿ, ಬೆಳಗಾಂವಿಯಲ್ಲಾಗಲಿ ೧ ಕಾಲೇಜವು ಹೊರಡುವದು ನಿಶ್ಚಿತವಾಗಿದೆ. ಬಳ್ಳಾರಿಯಲ್ಲಿ ಕಾಲೇಜದ ಗೊಂದಲವು ಕೇಳಬರುತ್ತಿತ್ತು. ಕರ್ನಾಟಕ ವಿದ್ಯಾಪೀಠವಾದರೆ ಇವಕ್ಕೆಲ್ಲ ಉತ್ತೇಜನವು ದೊರೆತು ಸುಮಾರು ೫ ಕಾಲೇಜುಗಳೂ ೬೦ ರ ಮೇಲೆ ಹೈಸ್ಕೂಲಗಳೂ ಉಂಟಾಗದಿರವು.

೫ **ವಿಶ್ವವಿದ್ಯಾಪೀಠದ ಅವಶ್ಯಕತೆಯು:**— ಮೇಲಿನ ವಿವರಣೆಯಿಂದ ಕರ್ನಾಟಕಕ್ಕೆ ವಿದ್ಯಾಪೀಠವು ಅವಶ್ಯವಾಗಿದೆಯೆಂಬದು ವಾಚಕರಿಗೆ ಹೊಳೆದಿರಬಹುದು. ಕೆಳಗಿನ ಕಾರಣಗಳೂ ವಿದ್ಯಾಪೀಠದ ಆತುರತೆಯನ್ನು ಹುಟ್ಟಿಸುವವು.

(i) ಮುಂಬಯಿ ವಿದ್ಯಾಪೀಠದ ಕಾರ್ಯಕ್ಷೇತ್ರವು ಅತಿಶಯವಾಗಿ ಬೆಳೆದಿರುವದರಿಂದ ಬೇರೆ ಬೇರೆ ಪ್ರಾಂತಗಳ ಶಿಕ್ಷಣವಿಷಯಕ ಗರಜುಗಳನ್ನು ಪೂರೈಸುವದು ಅದಕ್ಕೆ ಅಶಕ್ಯವಾಗಿದೆ. ಆದ್ದರಿಂದ ಗುಜರಾಥ, ಮಹಾರಾಷ್ಟ್ರ, ಕರ್ನಾ

ಟಕಗಳು ತಮ್ಮ ಸ್ವತಂತ್ರ ವಿದ್ಯಾಪೀಠಗಳನ್ನು ಬೇಡುವ ಪ್ರಸಂಗವು ಒದಗಿದೆ. ಹಾಗು ಇವು ಈಗ ಬೇಡತೊಡಗಿರುತ್ತವೆ.

(ii) ಕರ್ನಾಟಕವು ತುಟ್ಟತುದಿಗೆ ಬಿದ್ದುಕೊಂಡಿರುವದರಿಂದ ಮುಂಬೈ ಮದ್ರಾಸು ವಿದ್ಯಾಪೀಠಗಳಿಗೂ, ಕರ್ನಾಟಕ ವಿದ್ಯಾರ್ಥಿಗಳಿಗೂ ನಿಕಟದ ಸಂಬಂಧವನ್ನಿಡಲು ಆಸ್ಪದವಿಲ್ಲದಂತಾಗಿದೆ. ಸಂಶೋಧನಕಾರ್ಯದಲ್ಲಿ ಕರ್ನಾಟಕವು ಹಿಂದುಳಿಯಲು ಇದೊಂದು ಕಾರಣವಾಗಿದೆ.

(iii) ಮುಂಬೈಪಟ್ಟಣದ ಪರಿಸ್ಥಿತಿಯೂ, ಕರ್ನಾಟಕದ ಪರಿಸ್ಥಿತಿಯೂ ತೀರ ಭಿನ್ನವಾಗಿರುವದರಿಂದ, ಮುಂಬೈಯವರಿಗೆ ಒಂದು ಮಾತು ಅವಶ್ಯಕವೆನಿಸಿದರೆ ಕರ್ನಾಟಕಕ್ಕೆ ಅದು ಶೋಭಿಸುವದೆಂದು ಹೇಳಲಾಗದು. ಉದಾ:— ಮುಂಬೈಯವರ ಲಕ್ಷವು ವ್ಯಾಪಾರ, ಕಾರಖಾನೆಗಳ ಕಡೆಗೆ! ಕರ್ನಾಟಕದ ಮುಖ್ಯ ಉದ್ಯೋಗವು ಒಕ್ಕಲತನವು! ಕರ್ನಾಟಕಕ್ಕೆ ಅವಶ್ಯಕವಾದ ಜ್ಞಾನವನ್ನು ಪಸರಿಸುವದಕ್ಕಾಗಿ ಕರ್ನಾಟಕ ವಿದ್ಯಾಪೀಠವೇಬೇಕು.

(iv) ಮುಂಬೈಗೆ ತೀರ ಸಮೀಪವಿರುವ ಪುಣೆಯವರು ತಮಗೆ ಸ್ವತಂತ್ರ ವಿದ್ಯಾಪೀಠವು ಇರಬೇಕೆಂದು ಯೋಜನೆಯನ್ನು ಸಿದ್ಧಪಡಿಸುತ್ತಿರುವರು. ಡಾ. ಭಾಂಡಾರಕರ ಓರಿಯಂಟಲ್ ರಿಸರ್ಚ ಇನ್‌ಸ್ಟಿಟ್ಯೂಟದಂಥ ಸಂಶೋಧಕ ಸಂಘವೂ ಇವರ ಹತ್ತರವೇ ಇದ್ದು, ಇವರಿಗೆ ಸ್ವತಂತ್ರ ವಿದ್ಯಾಪೀಠವು ಬೇಕಾದರೆ, ಸಂಶೋಧಕ ಸಂಸ್ಥೆಯು ಶೂನ್ಯವಾಗಿರುವ ಕರ್ನಾಟಕಕ್ಕೆ ಎಷ್ಟು ಅವಶ್ಯಕತೆ ಇರಬೇಕೆಂಬದನ್ನು ವಾಚಕರೇ ತರ್ಕಿಸಲಿ.

(v) ನಾಲ್ಕೈದು ಮಾತೃಭಾಷೆಗಳ ಹಣೆಯಬರಹವು ಒಂದೇ ವಿದ್ಯಾಪೀಠದ ಕೈಯಲ್ಲಿದ್ದರೆ ಬಹು ಸಂಖ್ಯಾಕರು ಲಘುಸಂಖ್ಯಾಕರ ಮಾತೃಭಾಷೆಗೆ ಉತ್ತೇಜನ ಕೊಡದೆ ದುರ್ಲಕ್ಷ ಮಾಡುವರು. ಕರ್ನಾಟಕವು ಇದುವರೆಗೆ ಕಳೆಗುಂದಿರಲಿಕ್ಕೆ ಕಾರಣವೇನು? ಸರಕಾರವು ಯಾವುದೊಂದು ಕಾಲೇಜನ್ನು ಸ್ಥಾಪಿಸುವದಿದ್ದರೆ ಪುಣೆಯಲ್ಲಿ ಇಲ್ಲವೆ ಮುಂಬೈಯಲ್ಲಿಯೇ ಸ್ಥಳವನ್ನು ಏಕೆ ಹುಡುಕುತ್ತದೆ? ಅವರೇನು ಚೊಚ್ಚಲ ಮಕ್ಕಳೇ! ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಕನ್ನಡ ವಿದ್ಯಾರ್ಥಿಗಳ ಲಕ್ಷವು ಪುಣೆಯ ಕಡೆಗೆ ಇಲ್ಲವೆ ಮುಂಬೈ ಕಡೆಗೆ ಹತ್ತುವದೇ ಹೊರತು ಕರ್ನಾಟಕದ ಕಡೆಗೆ ಹತ್ತಲಿಕ್ಕೆ ಆಸ್ಪದವನ್ನೇ ಇಟ್ಟಿರುವದಿಲ್ಲ.

( vi ) ಸದ್ಯದ ಪರೀಕ್ಷಾಪದ್ಧತಿಯಲ್ಲಿರುವ ದೋಷಗಳು ದೂರಾಗಬೇಕಾದರೆ ಭಾಷೆಗನುಸರಿಸಿ ವಿದ್ಯಾಪೀಠಗಳು ಸ್ಥಾಪಿಸಲ್ಪಡಬೇಕು. ಈಗ ಒಂದು ವಿದ್ಯಾಪೀಠಕ್ಕೆ ಎಲ್ಲರೂ ಒಟ್ಟುಗೂಡಬೇಕಾಗಿದೆ. ಬೇರೆ ಬೇರೆ ವಿದ್ಯಾಪೀಠಗಳಾದರೆ ವಿದ್ಯಾರ್ಥಿಗಳ ಸಂಖ್ಯೆಯು ಹಂಚಿಹೋಗುವದು. ಹುಡುಗರ ಸಂಖ್ಯೆಯು ಸಣ್ಣದಾದಂತೆ ವಿದ್ಯಾಪೀಠವು ಹೆಚ್ಚು ಲಕ್ಷವನ್ನು ಪೂರೈಸಲಿಕ್ಕೆ ಆಸ್ಪದವಾಗುವದು.

( vii ) ಆಯುವ್ಯಯದ ದೃಷ್ಟಿಯಿಂದಲೂ ಕರ್ನಾಟಕ ವಿದ್ಯಾಪೀಠವು ಶಕ್ಯವಾಗಿದೆಯೆಂಬದನ್ನು ತೋರಿಸಬಹುದು. ಸರಕಾರವು ಮಾತ್ರ ಪ್ರಾರಂಭದಲ್ಲಿ ಉಳಿದ ವಿದ್ಯಾಪೀಠಗಳಿಗೆ ಮಾಡಿದಂತೆ ಸಹಾಯವನ್ನು ಮಾಡಲೇಬೇಕಾಗುವದು.

( viii ) ದೇಶಭಾಷೆಗಳಲ್ಲಿ ಪದವಿಗಳನ್ನು ಕೊಡುವದಕ್ಕಾಗಿ, ಪರೀಕ್ಷೆಗಳನ್ನು ಗೊತ್ತುಪಡಿಸುವದು ಉತ್ತಮ. ಇದಕ್ಕಾದರೂ ಕರ್ನಾಟಕ ವಿದ್ಯಾಪೀಠವು ಅವಶ್ಯವಾಗಿದೆ.

**( ೬ ) ಬೇರೆ ಉದಾಹರಣೆಗಳು:**— ಬನಾರಸ ಹಿಂದು ವಿದ್ಯಾಪೀಠವು ಒಂದೇ ಕಾಲೇಜದ ವ್ಯವಸ್ಥೆ ಮಾಡುತ್ತದೆ. ಪ್ರೋ. ಕರ್ವೆಯವರು ಸ್ಥಾಪಿಸಿದ ಮಹಿಳಾ ವಿದ್ಯಾಪೀಠಕ್ಕೂ ಒಂದೇ ಸಂಸ್ಥೆಯಿರುವದು. ಮೈಸೂರು ವಿದ್ಯಾಪೀಠಕ್ಕೆ ಎರಡೇ ಕಾಲೇಜಗಳಿರುವವು. ಹರಿದ್ವಾರದ ಗುರುಕುಲವಿದ್ಯಾಪೀಠಕ್ಕೂ ಒಂದೇ ಸಂಸ್ಥೆಯಿರುವದು. ಇವೆಲ್ಲವುಗಳನ್ನು ನೋಡಿದರೆ, ೩ ಕಾಲೇಜಗಳೂ, ೪೮ ಹೈಸ್ಕೂಲಗಳೂ ಇರುವ ಕರ್ನಾಟಕಕ್ಕೆ ಸ್ವತಂತ್ರ ವಿದ್ಯಾಪೀಠವು ಏಕೆ ದೊರೆಯಬಾರದು? ( ಇನ್ನೊಂದು ಕಾಲೇಜವೂ, ಕೆಲವು ಹೈಸ್ಕೂಲಗಳೂ ಕ್ಷಿಪ್ರದಲ್ಲಿಯೇ ಆಗುವವು. )

**( ೭ ) ಉಳಿದ ಪ್ರಾಂತದವರ ಪ್ರಯತ್ನ:**— ತೆಲಗು, ಉರಿಯಾ ಜನರು ಸ್ವತಂತ್ರ ವಿದ್ಯಾಪೀಠಗಳಿಗಾಗಿ ಪ್ರಯತ್ನಿಸಿ ತಮ್ಮ ಗರಜನ್ನು ಸರಕಾರಕ್ಕೆ ಮನಗಾಣಿಸಿಕೊಟ್ಟಿರುವರು. ಬಹುದಿವಸದಿಂದ ತೆಲಗರ ಪ್ರಯತ್ನವು ನಡೆದಿದ್ದು, ಮೊನ್ನೆ ಮೊನ್ನೆ ವಿಚಾರಣೆಗಾಗಿ ಒಂದು ಕಮೀಶನ್ನವನ್ನು ನಿಯಮಿಸಿರುತ್ತಾರೆಂದು ಕೇಳುತ್ತೇವೆ. ತೆಲಗರಿಗೆ ತೀವ್ರ ಯಶಸ್ಸು ದೊರೆಯುವ ಸಂಭವವಿದೆ. ಈಗ ಮುಂಬೈ ವಿದ್ಯಾಪೀಠದ ಸುಧಾರಣೆಗಾಗಿ ಒಂದು ಕಮೀಟಿಯನ್ನು ನಿಯಮಿಸಿದ್ದರಿಂದ ಮರಾಟಿಗರು ಪುಣೆಗೆ ಸ್ವತಂತ್ರ ವಿದ್ಯಾಪೀಠವನ್ನು ಪಡೆಯಬೇಕೆಂದು ಒಂದು ಯೋಜನೆಯನ್ನು ಸಿದ್ಧಪಡಿಸಿ, ಈ ಕಮೀಟಿಯ ಮುಂದೆ ಇಡ

ತಕ್ಕವರಿರುವರು. ಪುಣೆಯಲ್ಲಿ ಎಲ್ಲ ತರದ ಕಾಲೇಜುಗಳು ಒಟ್ಟುಗೂಡಿರುವದರಿಂದ ಮಹಾರಾಷ್ಟ್ರಕ್ಕೆ ವಿದ್ಯಾಪೀಠವು ಕ್ಷಿಪ್ರದಲ್ಲಿಯೇ ದೊರೆಯುವ ಆಶೆಯದೆ.

(೮) **ಕರ್ನಾಟಕಕ್ಕೆ ಕಳೆಯೇರುವ ಬಗೆ:—**

(i) ರಾಜಕುಮಾರರ ಕಾಲೇಜ:—ಕರ್ನಾಟಕದ ಸಂಸ್ಥಾನಿಕರು ಕೂಡಿ ಇದನ್ನು ತಮ್ಮ ಸಲುವಾಗಿ ಏರ್ಪಡಿಸಿದರೆ, ಉಳಿದ ಪ್ರಾಂತದವರ ಲಕ್ಷವನ್ನು ಕರ್ನಾಟಕವು ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ಸಮರ್ಥವಾಗುವದು.

(ii) ಮಾಧ್ಯಮಿಕ ಶಿಕ್ಷಕರ ಟ್ರೇನಿಂಗಕಾಲೇಜವು.

(iii) ಬಹು ದಿವಸ ಭರದಿಂದ ಸಾಗಿ, ಈಗ ಕಾಟಕಸರಕ್ಕೆ ಕುಗ್ಗಿ ಹೋದ ಪ್ರಾಥಮಿಕ ಶಿಕ್ಷಕರ ಟ್ರೇನಿಂಗಕಾಲೇಜದ ಪುನರುಜ್ಜೀವನ.

(iv) ಕಮರ್ಶಿಯಲ್ (ವ್ಯಾಪಾರೀ) ಕಾಲೇಜ. (ಕರ್ನಾಟಕಕ್ಕೆ ಆವಶ್ಯಕ).

(v) ಒಕ್ಕಲತನದ ಕಾಲೇಜ. (ಕರ್ನಾಟಕಕ್ಕೆ ಮೊದಲು ಬೇಕು).

(vi) ಲಾ ಕಾಲೇಜವೂ ಇರಲಿ.

(vii) ಫಾರೆಸ್ಟ ಕಾಲೇಜ-ಧಾರವಾಡದಲ್ಲಿ ಪ್ರಾರಂಭವಾಗಿತ್ತು. ಈಗ ಎಲ್ಲಿರುವದು?

(viii) ಮೆಡಿಕಲ್‌ಸ್ಕೂಲ—ಬೆಳಗಾಂವಿಯಲ್ಲಿ ಪ್ರಾರಂಭವಾಗುವದೆಂಬ ವಾರ್ತೆಯು ಕೇಳಬರುತ್ತಿತ್ತು. ಈಗ ಇದರ ಧ್ವನಿಯು ಏಕೆ ಅಡಗಿದೆಯೋ?

(ix) ಹಡಗಕಟ್ಟುವದು (ಶಿಪ್‌ಬಿಲ್ಡಿಂಗ) ಪ್ರಾರಂಭವಾಗಬೇಕು.

(x) ಕಲಾಕೌಶಲ್ಯದ ಶಾಲೆ. (ಕರ್ನಾಟಕಕ್ಕೆ ಬೇಕೇ ಬೇಕು.)

ಈ ಹತ್ತು ಸಂಗತಿಗಳಿಂದ ಕರ್ನಾಟಕಕ್ಕೆ ಕಳೆಯೇರುವಂತಿದೆ. ಇದಲ್ಲದೆ ಡೆಕ್ಕನ್ ಏಜ್ಯುಕೇಶನ್ ಸೊಸಾಯಟಿಯನ್ನು ಬಿಟ್ಟ ಪ್ರೋ. ರಾನಡೆಯವರು ಕರ್ನಾಟಕದಲ್ಲಿ (ವಿಜಾಪುರ ಜಿ॥) ಒಂದು ತತ್ವಜ್ಞಾನಸಂಶೋಧಕ ಸಂಸ್ಥೆಯನ್ನು ಸ್ಥಾಪಿಸತಕ್ಕವರಂತೆ. ಪಾಶ್ಚಿಮಾತ್ಯರ ಲಕ್ಷವನ್ನು ಎಳೆದುಕೊಳ್ಳುವಷ್ಟು ದೊಡ್ಡ ಪ್ರಮಾಣದಿಂದ ಹೊರಡುವದಂತೆ! ಇದನ್ನು ಕನ್ನಡಿಗರು ಪ್ರಯತ್ನಮಾಡಿ ಕರ್ನಾಟಕಕ್ಕೆ ರೂಪಾಂತರಿಸಿಕೊಂಡರೆ, (ಕನ್ನಡಿಗರು ತಮ್ಮ ಕೈಸೇರಿಸಿದರೆ) ಕರ್ನಾಟಕಕ್ಕೆ ಕಳೆಯೇರುವಂಥ ಒಂದು ಪ್ರಸಂಗವು ಅನಾಯಾಸವಾಗಿ ಕೈಗೂಡುವದು.

---

# ಹದಿನೈದನೆಯ ಪ್ರಕರಣ.

## ಶ್ರೇಷ್ಠವಾದ ನ್ಯಾಯಾಸನವು.

೧ ನ್ಯಾಯಾಸನಗಳ ವರ್ಗೀಕರಣ, ೨ ಪ್ರಾಂತಕ್ಕೊಂದು ನ್ಯಾಯಾಸನವು, ೩ ಕರ್ನಾಟಕದ ದುಃಸ್ಥಿತಿಯು, ೪ ನ್ಯಾಯಾಸನದ ವಿಚಾರ, ೫ ಉಳಿದ ಪ್ರಾಂತಗಳ ಸ್ಥಿತಿಗತಿಯು.

**(೧) ನ್ಯಾಯಾಸನಗಳ ವರ್ಗೀಕರಣ:—** ಜಜ್ಜಕೋರ್ಟಿನ ಮೇಲಿರುವ ಕೋರ್ಟುಗಳಿಗೆ ಶ್ರೇಷ್ಠವಾದ ನ್ಯಾಯಾಸನಗಳೆಂದು ಕರೆಯೋಣ. ಯಾಕಂದರೆ ಇವೆಲ್ಲ ಹೈಕೋರ್ಟುಗಳೇ ಇರುತ್ತವೆಂಬದು ನಿಯಮವಿಲ್ಲ. ಈ ನ್ಯಾಯಾಸನಗಳಲ್ಲಿ ೩ ವರ್ಗಗಳನ್ನು ಮಾಡಬಹುದು. (೧) ಹೈಕೋರ್ಟುಗಳು, (೨) ಚೀಫ್‌ಕೋರ್ಟುಗಳು, (೩) ಜ್ಯುಡಿಶಿಯಲ್ ಕಮಿಶನರರ ಕೋರ್ಟುಗಳು. ಇವುಗಳಲ್ಲಿ ಹೈಕೋರ್ಟುಗಳ ನ್ಯಾಯಾಧೀಶರನ್ನು ನಿಯಮಿಸುವ ಕೆಲಸವು ಸಾರ್ವಭೌಮ ಬಾದಶಹರ ಕೈಯಲ್ಲಿರುವದರಿಂದ, ಈ ನ್ಯಾಯಾಧೀಶರು ಹೆಚ್ಚು ಸ್ವತಂತ್ರರು. ಇವರಿಗೆ ಅಧಿಕಾರವೂ ಹೆಚ್ಚು. ಉಳಿದ ಎರಡು ತರಗತಿಯ ನ್ಯಾಯಾಧೀಶರನ್ನು ನಿಯಮಿಸುವ ಅಧಿಕಾರವು ಹಿಂದುಸ್ಥಾನ ಸರಕಾರಕ್ಕೆ ಇರುವದರಿಂದ, ಇವರು ಹೈಕೋರ್ಟಿನ ನ್ಯಾಯಾಧೀಶರಷ್ಟು ಸ್ವತಂತ್ರರೂ, ಅಧಿಕಾರ ಸಂಪನ್ನರೂ ಇರುವದಿಲ್ಲ. ಮುಂಬೈ, ಮದ್ರಾಸಗಳಿಗೆ ಹೈಕೋರ್ಟುಗಳಿರುತ್ತವೆ. ಪಂಜಾಬ, ಬ್ರಹ್ಮದೇಶಗಳಲ್ಲಿ ಚೀಫ್‌ಕೋರ್ಟುಗಳು. (ಈಗ ಪಂಜಾಬದ ಚೀಫ್‌ಕೋರ್ಟವು ಹೈಕೋರ್ಟಾಗಿದೆ.) ಉಳಿದ ಸಣ್ಣ ಪ್ರಾಂತಗಳಲ್ಲಿ ಜ್ಯುಡಿಶಯಲ್ ಕಮಿಶನರರ ಕೋರ್ಟುಗಳಿರುತ್ತವೆ.

**(೨) ಪ್ರಾಂತಕ್ಕೊಂದು ನ್ಯಾಯಾಸನವು:—** ಪ್ರಾಂತಿಕ ಸ್ವರೂಪವು ಪೂರ್ಣವಾಗಬೇಕಾದರೆ, ಆ ಪ್ರಾಂತಕ್ಕೊಂದು ಶ್ರೇಷ್ಠವಾದ ನ್ಯಾಯಾಸನವು ಇರಲೇ ಬೇಕು. ಹೇಗೆ ಪ್ರಾಂತಕ್ಕೊಂದು ವಿದ್ಯಾಪೀಠವೋ, ಹಾಗೆಯೇ ಪ್ರಾಂತಕ್ಕೊಂದು ನ್ಯಾಯಾಸನವೆಂಬದು ಸರ್ವಸಮ್ಮತವಾದ ಮಾತಾಗಿದೆ. ಬಿಹಾರ-ಓಡಿಸಾ ಪ್ರಾಂತವನ್ನು ಬೇರೆಮಾಡಿದಾಗ ಈ ಚರ್ಚೆಯು ನಡೆದು ಪಾಟಣಾದಲ್ಲಿ ಹೈಕೋರ್ಟು ಸ್ಥಾಪಿಸಲ್ಪಟ್ಟಿತು. ಕೆಲವು ಪ್ರಾಂತಗಳಲ್ಲಿ ಹೈಕೋರ್ಟುಗಳಿಲ್ಲ

ದಿದ್ದರೂ ಚೀಫ್‌ಕೋರ್ಟುಗಳಾಗಲಿ, ಜ್ಯುಡಿಶಿಯಲ್ ಕಮಿಶನರರ ಕೋರ್ಟು ಗಳಾಗಲಿ ಇರುವವು. ಹೈಕೋರ್ಟಿನ ಜಜ್ಜರು ಸ್ಥಾನಿಕ ಸರಕಾರಕ್ಕೆ ಸಂಬಂಧಿ ಸದೆ ಸ್ವತಂತ್ರರಿರುವದರಿಂದ ಪರಿಶುದ್ಧವಾಗಿ ನ್ಯಾಯವು ದೊರೆಯಲಿಕ್ಕೆ ಆಸ್ಪದ ವಿರುತ್ತದೆ. ಉಳಿದ ಜಜ್ಜರನ್ನು ಇಲ್ಲಿಯ ಸರಕಾರವೇ ನಿಯಮಿಸುವದರಿಂದ ಅವರು ಸ್ವತಂತ್ರರೀತಿಯಿಂದ ವರ್ತಿಸಲಿಕ್ಕೆ ಆಸ್ಪದವಿಲ್ಲ. ಪ್ರಸಂಗವಿಶೇಷದಲ್ಲಿ ಇವರು ಪ್ರಾಂತಿಕ ಸರಕಾರದ ದಾಕ್ಷಿಣ್ಯಕ್ಕೆ ಒಳಗಾಗಬೇಕಾಗುತ್ತದೆ.

**( ೩ ) ಕರ್ನಾಟಕದ ದುಃಸ್ಥಿತಿಯು:—** ಅಶಿಕ್ಷಿತರಾದ ಹಳ್ಳಿಯ ಜನರಲ್ಲಿ ದ್ವೇಷ, ಬಣಗಳು ವಿಶೇಷವಾಗಿರುತ್ತವೆ. " ಹೈಕೋರ್ಟನ್ನು ಕಂಡೇ ತೀರುತ್ತೇನೆ "ಂದು ಪಂಥವನ್ನು ತೊಡುವ ಅಶಿಕ್ಷಿತ ಜನರನೇಕರು ಪ್ರತಿಯೂರ ಲ್ಲಿಯೂ ಕಂಡುಬರುವರು. ಈ ಹಳ್ಳಿಯ ಜನರ ಬಣ ನ್ಯಾಯಗಳನ್ನು ತೀರಿಸುವ ಧರಲ್ಲಿ ಕೋರ್ಟು ಕಚೇರಿಗಳ ಜನರು ಬೇಸತ್ತಿರುವರು. ಈ ವೃತ್ತಿಯಲ್ಲಿ ಬೇಗ ಬದಲಾವಣೆಯಾಗುವದು ಉತ್ತಮವು! ಆದರೆ ಕರ್ನಾಟಕದಲ್ಲಿ ಬೇಗ ಬದಲಾ ವಣೆಯಾಗುವ ಲಕ್ಷಣವಿಲ್ಲ. ಜನರಲ್ಲಿ ವಿದ್ಯಾಪ್ರಸಾರವಾಗುವವರೆಗೆ ವಿಶೇಷ ಬದಲಾವಣೆಯಾಗುವ ಆಶೆಯೂ ಇಲ್ಲ. ಕರ್ನಾಟಕದ ತುಂಡುಗಳು ತುಟ್ಟತುದಿಗೆ ಬಿದ್ದುಕೊಂಡಿರುವದರಿಂದ ಮೇಲೆ ಮೇಲೆ ಹೈಕೋರ್ಟಿನವರೆಗೆ ಹೋಗಿಬರುವ ದೆಂದರೆ ಮನೆಮಾರಿನ ಸುಲಿಗೆಯಾಗುವದು! ದೂರಾಗುವದೆಂದಾಗಲಿ, ಖರ್ಚು ವಿಶೇಷವಾಗುವದೆಂದಾಗಲಿ ಮುಂದಿನ ಈರ್ಷೆಯನ್ನು ಬಿಟ್ಟು ಸುಮ್ಮನೆ ಕೂಡ್ರ ಬೇಕಾದರೆ ಕೆಳಗಿನ ಕೋರ್ಟಿನ ಅನ್ಯಾಯವನ್ನು ಭೋಗಿಸಬೇಕಾಗುವದು. ಇತ್ತ ಕೆರೆ! ಅತ್ತ ಬಾವಿಯು!! ಹೀಗಾಗಿ ಬಡರೈತರಿಗೆ ಎರಡೂ ಕಡೆಯಿಂದ ಸಂಕಟವೇ ಇರುವದು. ಸಣ್ಣ ಪುಟ್ಟ ಕಾರಣಗಳಿಗಾಗಿ ಮನೆಮಾರುಗಳನ್ನು ಒತ್ತೆ ಹಾಕಿ, ಹತ್ತೆಂಟು ವರ್ಷ ಕೋರ್ಟು ಕಚೇರಿಗಳಲ್ಲಿ ಹೊಡೆದಾಡಿ, ಕೊನೆಗೆ ಏನೂ ದೊರಕದ್ದರಿಂದ, ಭಿಕ್ಷೆಗೀಡಾದ ಜನರನ್ನು ಎಲ್ಲ ಕಡೆಗೂ ಕಾಣಬಹುದು. ಕರ್ನಾಟಕ ಪ್ರಾಂತವು ಸ್ವತಂತ್ರವಾದರೆ, ಜನರಲ್ಲಿ ವಿದ್ಯಾಪ್ರಸಾರವಾಗಲಿಕ್ಕೆ ಆಸ್ಪದವಿದೆ. ಹಾಗು ನ್ಯಾಯಾಸನವು ದೊರೆಯುವದರಿಂದ ಸದ್ಯಕ್ಕೆ ಬಡ ರೈತ ರಿಗೆ ಲಾಭಕರವಾಗುವದು. ಈ ರೀತಿಯಿಂದ ವಿಚಾರಿಸಲು ಬಡ ಜನರ ಶ್ರಮ, ಧನಾಪವ್ಯಯಗಳು ಕಡಿಮೆಯಾಗುವವು. ಹಾಗು ಮುಂದೆ ಜನರಲ್ಲಿ ವಿದ್ಯಾಪ್ರಸಾ ರವಾಗಿ, ಈ ಜಗಳಾಡುವ ವೃತ್ತಿಯಲ್ಲಿ ಬದಲಾವಣೆಯಾಗುವದು. ಆದ್ದರಿಂದ

ಕರ್ನಾಟಕ ಪ್ರಾಂತವು ಬೇರೆಯಾಗಿ ಅದಕ್ಕೊಂದು ಶ್ರೇಷ್ಠತರದ ನ್ಯಾಯಾಸನವು ದೊರೆಯುವದು ಅತ್ಯಂತ ಇಷ್ಟವಾಗಿದೆ.

**( ೪ ) ನ್ಯಾಯಾಸನದ ವಿಚಾರವು:—** ೩ ತರದ ಶ್ರೇಷ್ಠವಾದ ನ್ಯಾಯಾಸನಗಳಲ್ಲಿ ಕರ್ನಾಟಕ ಪ್ರಾಂತಕ್ಕೆ ಯಾವುದು ಇಷ್ಟವೂ ಯೋಗ್ಯವೂ ಆಗಿದೆಯೆಂಬದನ್ನು ವಿಚಾರಿಸಬೇಕಾಗಿದೆ. ಪ್ರಾಂತದ ಕ್ಷೇತ್ರ, ಜನಸಂಖ್ಯೆ ಹಾಗು ಉತ್ಪನ್ನಗಳನ್ನು ಲಕ್ಷಿಸಿ ಇದರ ವಿಚಾರವನ್ನು ಮಾಡುವದುಂಟು. ಹಾಗಾದರೆ ಕರ್ನಾಟಕಕ್ಕೆ ಹೈಕೋರ್ಟವೇ ಇರಬೇಕೆಂದು ಹೇಳಬಹುದು. ಇದು ಸದ್ಯಕ್ಕೆ ಶಕ್ಯವಾಗಿಲ್ಲೆಂದು ಹೇಳುವದಾದರೆ-ಮಧ್ಯಮತರದ ಚೀಫ್‌ಕೋರ್ಟನ್ನು ದಯಪಾಲಿಸಿ, ಮುಂದೆ ಹೈಕೋರ್ಟನ್ನು ಮಾಡುವ ಧ್ಯೇಯವನ್ನು ಇಟ್ಟುಕೊಳ್ಳಬಹುದು. ಪ್ರಾರಂಭಕ್ಕೆ ಇದೇ ಲೇಸೆಂದು ಹೇಳಬಹುದು. ಯಾಕಂದರೆ ಹೈಕೋರ್ಟಿಗಿಂತ ಚೀಫ್‌ಕೋರ್ಟಿಗೆ ಖರ್ಚು ಕಡಿಮೆ! ಪ್ರಾರಂಭಕ್ಕೆ ಕಡಿಮೆ ಖರ್ಚಿನ ಮಾರ್ಗವನ್ನು ಅನುಸರಿಸುವದು ಲೇಸು. ಇನ್ನು ೩ನೆಯ ತರದ ಕೋರ್ಟಿನಿಂದ ಕರ್ನಾಟಕದ ಗರಜು ಪೂರೈಸುವಂತಿಲ್ಲ. ಹಾಗು ಅದು ಇಷ್ಟವಾಗಿಲ್ಲ. ಈಗ ದೂರಿದ್ದರೂ ಕರ್ನಾಟಕದ ಜಿಲ್ಹೆಗಳು ಹೈಕೋರ್ಟಿನ ನ್ಯಾಯಸುಖವನ್ನು ಅನುಭೋಗಿಸುತ್ತಿರುತ್ತವೆ. ಆದ್ದರಿಂದ ಶ್ರೇಷ್ಠಪ್ರತಿಯ ನ್ಯಾಯಸುಖವನ್ನು ಅನುಭೋಗಿಸುತ್ತಿದ್ದ ಕರ್ನಾಟಕವು ಕನಿಷ್ಠಪ್ರತಿಯ ನ್ಯಾಯಾಸನವನ್ನು ಇಚ್ಛಿಸಲಾರದು.

**( ೫ ) ಉಳಿದ ಪ್ರಾಂತಗಳ ಸ್ಥಿತಿಗತಿಯು:—** ಸ್ವತಂತ್ರ ಪ್ರಾಂತಗಳನ್ನು ಬೇಡುವ ಜನರಲ್ಲಿ ನ್ಯಾಯಾಸನದ ವಿಚಾರವನ್ನು ಉರಿಯಾ ಪ್ರಾಂತದವರು ಮಾತ್ರ ಮಾಡಿರುತ್ತಾರೆ. ಉಳಿದವರು ಸದ್ಯಕ್ಕೆ ಇದರ ಗೊಡವೆಗೆ ಹೋದಂತೆ ಕಾಣುವದಿಲ್ಲ. ಉರಿಯಾ ಪ್ರಾಂತದ ಕ್ಷೇತ್ರ, ಜನಸಂಖ್ಯೆ, ಉತ್ಪನ್ನಗಳು ಭಾವೀ ಕರ್ನಾಟಕಪ್ರಾಂತದ ಕ್ಷೇತ್ರ, ಜನಸಂಖ್ಯೆ, ಉತ್ಪನ್ನಗಳಿಗಿಂತ ಕಡಿಮೆಯಾಗಿವೆ. ಹೀಗಿದ್ದು ಅವರು ಉರಿಯಾ ಪ್ರಾಂತಕ್ಕೆ ಹೈಕೋರ್ಟನ್ನು ಇಚ್ಛಿಸುವರು. ಅದಾಗದಿದ್ದರೆ ಚೀಫ್‌ಕೋರ್ಟನ್ನು ದಯಪಾಲಿಸಬೇಕೆಂದು ಬೇಡುವರು. ಇದನ್ನು ವಿಚಾರಿಸಿದರೆ ಕರ್ನಾಟಕ ಪ್ರಾಂತದ ಬಗ್ಗೆ ಮೇಲೆ ವಿವರಿಸಿದ ಯೋಜನೆಯು ಅನ್ಯಾಯವಾಗಲಾರದು. ಇಷ್ಟೇಕೆ! ಹೈಕೋರ್ಟಿನ ಆಗ್ರಹವನ್ನೇ ಕರ್ನಾಟಕ ಪ್ರಾಂತವು ಹಿಡಿದರೆ ಸಾಗುವಂತಿದೆ.

---

# ಹದಿನಾರನೆಯ ಪ್ರಕರಣ.

## ಸಾಂಪತ್ತಿಕ ಸ್ಥಿತಿಯ ಸುಧಾರಣೆ.

೧ ಸುಸಂಪನ್ನತೆ, ೨ ಬರಗಾಲದ ಭೀತಿ, ೩ ಒಕ್ಕಲತನದ ಸುಧಾರಣೆ, ೪ ಉದ್ಯೋಗಾಭಿವೃದ್ಧಿ, ೫ ವ್ಯಸನಗಳ ಪರಿಣಾಮ.

**(೧) ಸುಸಂಪನ್ನತೆ:**—ಕರ್ನಾಟಕದ ಭೂಮಿಯು ಚನ್ನಾಗಿರುವದೆಂದೂ, ಒಕ್ಕಲತನಕ್ಕೆ ಯೋಗ್ಯವಾಗಿರುವದೆಂದೂ ಹಿಂದೆ ನಾವು ಹೇಳಿರುತ್ತೇವೆ. ಕಾಲಕ್ಕೆ ಸರಿಯಾಗಿ ತಕ್ಕ ಪ್ರಮಾಣದಿಂದ ಮಳೆಯಾದರೆ ಎಲ್ಲ ತರದ ಧಾನ್ಯಗಳೂ, ಹತ್ತಿ, ಕಬ್ಬು ಮೊದಲಾದವುಗಳು ಉತ್ತಮವಾಗಿ ಬೆಳೆದು ಒಕ್ಕಲಿಗನು ೩।೪ ವರ್ಷದ ಅನ್ನವನ್ನು ಸಂಗ್ರಹಿಸುತ್ತಾನೆ. ಆದರೆ ಕರ್ನಾಟಕದ ಬೈಲು ಪ್ರದೇಶದಲ್ಲಿ ಮಳೆಯು ಬಹಳ ಕಡಿಮೆ. ತಕ್ಕ ಕಾಲಕ್ಕೆ ಮಳೆಯಾಗದಿದ್ದರೆ ಭೂಮಿ ಏನು ಮಾಡೀತು? ಒಕ್ಕಲಿಗನೇನು ಮಾಡುವನು? ಮಳೆಗಾಲದಲ್ಲಿ ನದಿಗಳು ತುಂಬಿಬರುವದರಿಂದ ನದಿಯ ದಂಡೆಯ ಭೂಮಿಗಳು, ಹಾಗು ಕಾಲುವೆ ನೀರಿನಿಂದ ತೊಯ್ಯುವ ಭೂಮಿಗಳು, ಒಂದು ಬೆಳೆಯನ್ನು ಪೂರೈಸಿಕೊಟ್ಟು ಅಂತೂ ಇಂತೂ ಒಕ್ಕಲಿಗರನ್ನು ಬದುಕಿಸುತ್ತವೆ. ಒಕ್ಕಲತನವು ಕರ್ನಾಟಕದ ಮುಖ್ಯ ಹೋರೆಯಾಗಿರುವದರಿಂದ ಇದು ಕರ್ನಾಟಕದಲ್ಲಿ ಮಳೆಯ ಕೊರತೆಯಿಂದ ಚನ್ನಾಗಿ ಸಾಗದಿದ್ದರೆ, ಕಾಲುವೆಯ ನೀರನ್ನು ಪೂರೈಸಿಕೊಡುವದು ಅತ್ಯಂತಾವಶ್ಯವಾಗಿದೆ. ಹೀಗಾದರೆ ಕರ್ನಾಟಕದ ಸುಸಂಪನ್ನತೆಗೆ ಯಾವ ತರದಿಂದಲೂ ತಡೆಯುಂಟಾಗದು. ಮಳೆಯು ಕಟ್ಟಾದ ವರ್ಷ ಒಕ್ಕಲಿಗರ ಮೋರೆಯ ಮೇಲೆ ಕಳೆಯಿಲ್ಲದಂತಾಗುವದು. ೨ ವರ್ಷ ಒಂದೇ ಸವನೆ ಮಳೆ ಹೋದರಂತೂ ಜನರ ಗೋಳಾಟವು ಮಿತಿಮೀರುವದು. ಎಲ್ಲರ ಉದರನಿರ್ವಾಹಕ್ಕೆ ಆಧಾರವಾಗಿರುವಂಥ ಒಕ್ಕಲತನದ ವಿಷಯವಾಗಿಯೂ, ಆ ಒಕ್ಕಲತನದ ಹೋರೆಯನ್ನು ಹಗಲಿರುಳು ಶ್ರಮಬಟ್ಟು ಸಾಗಿಸುತ್ತಿರುವ ಒಕ್ಕಲಿಗರ ವಿಷಯವಾಗಿಯೂ ಎಲ್ಲರು ಸಹಾನುಭೂತಿಯುಳ್ಳವರಾಗಿರಬೇಕು. ಸರಕಾರವು ತಕ್ಕ ಅನುಕೂಲತೆಗಳನ್ನು ಒದಗಿಸಿಕೊಡಬೇಕು.

**( ೨ ) ಬರಗಾಲದ ಭೀತಿ:**—ಹಿಂದಕ್ಕೆ ಕರ್ನಾಟಕದಲ್ಲಿ ಭಯಂಕರವಾದ ಬರಗಳು ತಲೆದೋರಿದವು. ಅವುಗಳಲ್ಲಿ ಡವಗೀಬರ, ರಾಗೀಬರ ಮೊದಲಾದವು ಪ್ರಸಿದ್ಧವಿರುತ್ತವೆ. ಕೂಳಿಲ್ಲದೆ ಸತ್ತುಬಿದ್ದ ಜನರ ತಲೆಬುರುಡೆಗಳು ಉರುಳಾಡಿದ್ದರಿಂದ ಡವಗೀಬರವೆಂತಲೂ, ಒಮ್ಮೆ ಜನರು ರಾಗಿಯನ್ನೇ ತಿಂದು ಬದುಕಿದ್ದರಿಂದ ರಾಗೀಬರವೆಂತಲೂ ಹೆಸರು ಬಿದ್ದವೆ. ಇಂಥ ಭಯಂಕರ ಪ್ರಸಂಗದಲ್ಲಿ ತಮ್ಮ ಮಕ್ಕಳುಮರಿಗೆ ಹೊಟ್ಟೆಗೆ ಹಾಕಲಿಕ್ಕೆ ಗತಿಯಿಲ್ಲದೆ ಚಲ್ಲಿಕೊಟ್ಟಹೋದ ತಾಯಿತಂದೆಗಳ ಉದಾಹರಣೆಗಳು ಅನೇಕವಾಗಿವೆ. ಹುಣಸಿಯ ಬೀಜಗಳನ್ನೂ, ಜಾಲಿಯ ಬೀಜಗಳನ್ನೂ ಹುರಿದುತಿಂದ ಕಥೆಗಳನ್ನು ಜನರು ಹೇಳುತ್ತಾರೆ. ಪಡಗಳ್ಳಿಯ ಹಣ್ಣುಗಳೂ, ಹಚ್ಚಗಿನ ಚಿಗರೆಲೆಗಳೂ ಸಾಲದೆಹೋದವು. ಆಗಿನ ಕಾಲದಲ್ಲಿ ಉಗಿಬಂಡಿಯ ದಾರಿಯಿದ್ದಿಲ್ಲ. ಲೈನಮಾರ್ಗದ ಕೊರತೆಯು ವಿಶೇಷವಾಗಿತ್ತು. ಆದ್ದರಿಂದ ಬೆಳೆದ ಪ್ರದೇಶಗಳಿಂದ ಧಾನ್ಯವನ್ನು ಪೂರೈಸುವದು ಅಸಾಧ್ಯವೆನಿಸಿತು. ಈಗ ತುಸು ಸುಧಾರಣೆಯಾಗಿರುವದರಿಂದ ಭಯಂಕರ ಸ್ವರೂಪದ ಬರಗಳು ಬೀಳದಿದ್ದರೂ ಕೆಲಕೆಲವು ಭಾಗಗಳಲ್ಲಿ ಸಣ್ಣ ಸಣ್ಣ ಬರಗಳು ಸೊನ್ನೆಯ ಪೆಟ್ಟನ್ನು ಕೊಡುತ್ತಲೇ ಇವೆ. ಈ ದುಸ್ಥಿತಿಯನ್ನು ದೂರಮಾಡಬೇಕಾದರೆ ಮೇಲೆ ಹೇಳಿದಂತೆ ಕಾಲುವೆಯ ನೀರನ್ನು ಪೂರೈಸುವದೂ, ಉಗಿಬಂಡಿ ಹಾಗು ಲೈನಮಾರ್ಗಗಳನ್ನು ಹೆಚ್ಚಿಸುವದೂ ಅವಶ್ಯವಾಗಿವೆ. ಕರ್ನಾಟಕ ಪ್ರಾಂತವು ಸ್ವತಂತ್ರವಾದರೆ ಇತ್ತಕಡೆಗೆ ವಿಶೇಷ ಲಕ್ಷಕೊಡಲಿಕ್ಕೆ ಆಸ್ಪದವುಂಟಾಗುವದು.

**( ೩ ) ಒಕ್ಕಲತನದ ಸುಧಾರಣೆ:**—ಹಳೇಪದ್ಧತಿಯ ಒಕ್ಕಲಿಗರು ತಮ್ಮ ಅಜ್ಜ ಮುತ್ತಜ್ಜರ ಕಾಲದ ಬೆಳೆಗಳನ್ನೇ ಬೆಳೆದುಕೊಳ್ಳುತ್ತಿದ್ದಾರೆ. ಸುಧಾರಿಸಿದ ಪದ್ಧತಿಯ ಜ್ಞಾನವು ಅವರಿಗೆ ಇರುವದಿಲ್ಲ. ಅಜ್ಞಾನದಿಂದಲೂ, ಭಾವಿಕತನದಿಂದಲೂ ಸುಧಾರಿಸಿದ ಪದ್ಧತಿಯನ್ನು ಸ್ವೀಕರಿಸಲಿಕ್ಕೂ ಸಿದ್ಧರಾಗುವದಿಲ್ಲ. ಆದ್ದರಿಂದ ಒಕ್ಕಲಿಗರಲ್ಲಿ ಶಿಕ್ಷಣದ ಪ್ರಸಾರವಾಗಲೇಬೇಕು. ಸರಕಾರದವರು ದೇವಿಹೊಸೂರಲ್ಲಿ ಒಕ್ಕಲತನದ ಶಾಲೆಯನ್ನು ತೆಗೆದಿರುತ್ತಾರೆ. ಇದಲ್ಲದೆ ಒಕ್ಕಲಿಗರ ಮಾಹಿತಿಯ ಸಲುವಾಗಿ ಸ್ವತಃ ಹೊಲವನ್ನು ಮಾಡಿತೋರಿಸುತ್ತಾರೆ. ಈ ಮಾದರಿಯ ಹೊಲಗಳು ಧಾರವಾಡ, ಅರಭಾವಿಗಳಲ್ಲಿ ಇರುತ್ತವೆ. ಇದರ ಹೊರ್ತು ಒಕ್ಕಲತನದ ಪ್ರದರ್ಶನಗಳನ್ನಿಟ್ಟು ಒಕ್ಕಲಿಗರಿಗೆ ಬೇರೆ ಬೇರೆ ವಿಷ

ಯುಗಳ ಮಾಹಿತಿಯನ್ನು ಮಾಡಿಕೊಡುತ್ತಾರೆ. ಅಮೇರಿಕೆಯಲ್ಲಿ ಈ ವಿಷಯವಾಗಿ ಬಹಳ ಶೋಧಗಳು ನಡೆದವೆ. ಬೀಜಿಲ್ಲದ ಪೇರಲಹಣ್ಣುಗಳನ್ನೂ ಒಂದು ಗಿಡಕ್ಕೆ ಮತ್ತೊಂದು ಗಿಡದ ಕಲಮು ಮಾಡಿ ವಿಶ್ರಹಣ್ಣುಗಳನ್ನೂ ಹುಟ್ಟಿಸುತ್ತಿದ್ದಾರೆ. ಫಡಗಳ್ಳಿಗೆ ಮುಳ್ಳಾಗದಂತೆ ಮಾಡಿ ದನಗಳಿಗೆ ಮೇವಿಗಾಗಿ ಉಪಯೋಗಿಸುತ್ತಿದ್ದಾರೆ. ಇದರಿಂದ ಅವರ ದನಗಳಿಗೆ ಹನ್ನೆರಡು ತಿಂಗಳವರೆಗೆ ಹಚ್ಚಗಿನ ಮೇವು ದೊರೆತಂತಾಗುವದು. ಕೃತ್ರಿಮ ರೀತಿಯಿಂದ ಮಳೆ ಸುರಿಸುವ ಪ್ರಯೋಗವನ್ನು ಒಬ್ಬನು ಮಾಡಿತೋರಿಸಿದನಂತೆ! ಇವೆಲ್ಲ ಸಂಗತಿಗಳ ಜ್ಞಾನವನ್ನು ಗ್ರಹಿಸಲಿಕ್ಕೆ ತಕ್ಕಮಟ್ಟಿಗೆ ಒಕ್ಕಲಿಗರಲ್ಲಿ ಶಿಕ್ಷಣಪ್ರಸಾರವು ಆಗಲೇಬೇಕು. ಇಲ್ಲದಿದ್ದರೆ ಇಂಥ ಸಂಗತಿಗಳನ್ನು ಅವರು ನಂಬುವದಿಲ್ಲ. ಅದ್ಭುತ ಸಂಗತಿಗಳೆಂದಾಗಲಿ, ಪವಾಡಗಳೆಂದಾಗಲಿ ಅವರು ತಿಳಿಯುವರು. ಕುಟುಂಬದ ಜನಸಂಖ್ಯೆಯು ಬೆಳೆದಂತೆ ನಮ್ಮ ಹೊಲಗಳು ಬೆಳೆಯುವಂತಿಲ್ಲ. ಇದ್ದ ತುಸು ಭೂಮಿಯಲ್ಲಿಯೇ ಹೆಚ್ಚು ಬೆಳೆಯನ್ನು ತೆಗೆದುಕೊಳ್ಳಲಿಕ್ಕೆ ಕಲಿಯುವದೇ ಸುಧಾರಣೆಯು. ಒಕ್ಕಲತನದ ಪಕ್ಷಪಾತಿಗಳು ಇತ್ತಕಡೆಗೆ ಲಕ್ಷವನ್ನು ಕೊಡಬೇಕು. ಒಕ್ಕಲಿಗರಿಗೆ ಈ ಸಂಗತಿಗಳನ್ನು ತಿಳಿಸಿ ಹೇಳಬೇಕು. ಸರಕಾರದವರಾದರೂ ಒಕ್ಕಲಿಗರ ಅನಾನುಕೂಲತೆಗಳನ್ನು ದೂರಮಾಡಲಿಕ್ಕೆ ಪ್ರಯತ್ನಿಸತಕ್ಕದ್ದು. ಇಷ್ಟಾದರೆ ನಮ್ಮ ಸಾಂಪತ್ತಿಕ ಸ್ಥಿತಿಯು ಸುಧಾರಣೆಯು ಪ್ರಾರಂಭವಾಗುವದು.

(೪) **ಉದ್ಯೋಗಾಭಿವೃದ್ಧಿ**:--ಹೊಸ ಹೊಸ ಕೈಗಾರಿಕೆಯ ಕೆಲಸಗಳು ಪ್ರಾರಂಭವಾಗಬೇಕು. ಇಂಗ್ಲಂಡ, ಅಮೇರಿಕಾ, ಜಪಾನ ಮೊದಲಾದ ದೇಶಗಳಿಗೆ ಹೋಗಿ, ಬೇರೆ ಬೇರೆ ಕಲೆಯ ಜ್ಞಾನವನ್ನು ಸಂಪಾದಿಸಿ, ನಮ್ಮ ದೇಶದಲ್ಲಿ ಅಂಥ ಕಾರಖಾನೆಗಳನ್ನು ತೆಗೆದರೆ ವಿಶೇಷ ಲಾಭವಾಗುವದು. ಈಗಿನ ನಮ್ಮ ವರ್ತಕರು ಪರದೇಶದ ಸರಕುಗಳ ದಲಾಲರಾಗಿರುತ್ತಾರೆ. ಮುಖ್ಯ ಲಾಭವು ಪರದೇಶಕ್ಕೆ ಹೋಗಿ ೧ ರುಪಾಯಿಗೆ ೧ ಬಿಲ್ಲಿ ಅಥವಾ ೨ ಬಿಲ್ಲಿ ಸಿಗುವ ಚಿಲ್ಲರ ಲಾಭಕ್ಕಾಗಿ ಗುದ್ದಾಡುವರು. ಇವರು ೧ ರುಪಾಯಿಗೆ ೧ ಆಣೆ ಲಾಭವನ್ನೆಬ್ಬಿಸಿದರೂ ಅದು ನಮ್ಮವರ ಕಿಸೆಯೊಳಗಿಂದಲೇ ಹೊರ್ತು ಪರದೇಶದವರ ಕಿಸೆಯೊಳಗಿನದಲ್ಲ. ಪರದೇಶಿಯರ ಕಿಸೆಯೊಳಗಿಂದ ಹಣವನ್ನೆಬ್ಬಿಸುವ ಕಲೆಯೇ ಉದ್ಯೋಗದ ಬೀಜವು. ಚಿಮಣಿ ಎಣ್ಣೆ, ಕಡ್ಡಿಯ ಪೆಟ್ಟಿಗೆ, ಚಹ, ಸಕ್ಕರೆಗಳನ್ನು ನೋಡಿರಿ! ಹಳ್ಳಿಯ ಊರೊಳಗಿನ ಎಂಥ ಸಣ್ಣ ಅಂಗಡಿಗಳಲ್ಲಿಯೂ

ಈ ಸರಕುಗಳು ಸಿಗುತ್ತವೆ. ಜಗತ್ತಿಗೆ ಪೂರೈಸುವ ಆ ಕಾರಖಾನೆಯವನ ಉದ್ಯೋಗ, ಸಾಹಸ, ಬಂಡವಲಗಳನ್ನು ನೋಡಿ ಕೆಲಹೊತ್ತು ಮನಸ್ಸು ಸ್ತಬ್ಧವಾಗುತ್ತದೆ. ಪರದೇಶಿಯ ಉದ್ಯೋಗಸ್ಥರು ಗಡಿಯಾಳದಂತೆ ತಮ್ಮ ಉದ್ಯೋಗಗಳನ್ನು ಸಾಗಿಸಿರುತ್ತಾರೆ. ಪ್ರತಿಯೊಂದು ಸೇಕಂಡವು ಅವರಿಗೆ ರೊಕ್ಕವನ್ನು ಹುಟ್ಟಿಸಿಕೊಡುತ್ತದೆ. ಅವರಲ್ಲಿ ಒಕ್ಕಟ್ಟೂ ಪತ್ತೂ ವಿಶೇಷವಾಗಿವೆ. ಪ್ರಾರಂಭದಲ್ಲಿ ಬಂಡವಲವನ್ನು ಸೂರೆಗೊಳ್ಳುವ ಬಂಟರು ಇವರೇ! ಒಂದು ರೇಲ್ವೆಕಂಪನಿಯ ಉದಾಹರಣೆಯನ್ನು ನೋಡಿದರೆ ಸಾಕು. ಮಾಲಕರು ಎಲ್ಲಿರುತ್ತಾರೋ, ಕೇವಲ ನೌಕರರಿಂದಲೇ ಹೇಗೆ ಅಚ್ಚುಕಟ್ಟುತನದಿಂದಲೂ ವ್ಯವಸ್ಥೆಯಿಂದಲೂ ಕೆಲಸವು ಸಾಗಿರುವದು! ನಮ್ಮಲ್ಲಿ ಇಬ್ಬರು ಅಣ್ಣತಮ್ಮಂದಿರು ಕೂಡಿ ಒಂದು ಅಂಗಡಿಯನ್ನು ಹಾಕಿದರೆ, ಬಡಿದಾಟದಿಂದ ಒಂದು ವರ್ಷದಲ್ಲಿಯೇ ಅಂಗಡಿಯು ದಿವಾಳಿಯನ್ನು ತೆಗೆಯುತ್ತದೆ! ಇನ್ನು ಹೊರಗಿನವರನ್ನು ಕೂಡಿಕೊಂಡು ಒಂದು ಸಂಘದಿಂದ ಏನಾದರೂ ಕಾರ್ಯವನ್ನು ಮಾಡುವದಂತೂ ಒತ್ತಟ್ಟಿಗಿರಲಿ. ಕರ್ನಾಟಕದಲ್ಲಿ ಲಿಂಗವಂತರೂ, ವೈಶ್ಯರೂ, ಜೈನರೂ, ವ್ಯಾಪಾರದಲ್ಲಿ ವಿಶೇಷವಾಗಿ ಲಕ್ಷವನ್ನು ಹಾಕುತ್ತಿರುವರು. ಆದರೆ ಕರ್ನಾಟಕದಲ್ಲಿ ವ್ಯಾಪಾರೀ ಶಿಕ್ಷಣದ ಬಗ್ಗೆ ಅಥವಾ ಔದ್ಯೋಗಿಕ ಶಿಕ್ಷಣದ ಬಗ್ಗೆ ಯಾವ ವ್ಯವಸ್ಥೆಯಿರುವದಿಲ್ಲ. ಕರ್ನಾಟಕ ಪ್ರಾಂತವು ಸ್ವತಂತ್ರವಾದರೆ ಈ ದಿಶೆಯಲ್ಲಿಯೂ ಪ್ರಯತ್ನವಾಗಿ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸುವ ಎರಡನೆಯ ಮಾರ್ಗವೂ ಹಸ್ತಗತವಾಗಬಹುದು.

( ೩ ) **ವ್ಯಸನಗಳ ಪರಿಣಾಮ**:— ಮನುಷ್ಯನು ಸಂಪತ್ತನ್ನು ಕಾದುಕೊಳ್ಳಬೇಕಾದರೆ ವ್ಯಸನಗಳಿಂದ ಮುಕ್ತನಾಗಬೇಕು. ವ್ಯಸನಕ್ಕೂ, ದುಡ್ಡಿಗೂ ವಿರೋಧಸಂಬಂಧವುಂಟು. ಇತ್ತ ಒಂದೊಂದು ವ್ಯಸನವು ಬಂದು ಸೇರುತ್ತ ಹೋದಂತೆ, ಅತ್ತ ಒಂದೊಂದು ಪೆಟ್ಟಿಗೆಯೊಳಗಿನ ದುಡ್ಡು ಹಾಳಾಗುತ್ತ ಹೋಗುತ್ತದೆ. ಈಗ ಬಹು ಜನರು ಒಂದಿಲ್ಲೊಂದು ವ್ಯಸನಕ್ಕೆ ಅಧೀನರಾಗಿರುತ್ತಾರೆ. ಸಾದಾವೃತ್ತಿಯಿಲ್ಲದ್ದರಿಂದ ಮಿತಿಮೀರಿ ಖರ್ಚುಮಾಡಿ ಗೋಳಾಡುತ್ತಿರುವದು ಕಂಡುಬರುತ್ತದೆ. “ ವಿಪರೀತ ಕಾಲವು ಬಂದಿತು! ಇದೆಲ್ಲ ನಮ್ಮ ದುರ್ದೈವವು. ನಮ್ಮ ಹಿರಿಯರ ಕಾಲದಲ್ಲಿ ಹೀಗೆ ಇರಲಿಲ್ಲ” ಎಂದು ಅಜ್ಞಾನದಿಂದ ಕಾಲವನ್ನು ಹಳಿಯುವರು. ಆದರೆ ಕಾಲವೇನು ಮಾಡೀತು! ಇದೆಲ್ಲ ನಮ್ಮ

ವ್ಯಸನಗಳ ಪರಿಣಾಮವು. ಈಗ ದ್ರವ್ಯಸಂಗ್ರಹ ಮಾಡಬೇಕೆನ್ನುವ ಪ್ರತಿಯೊಬ್ಬ ಮನುಷ್ಯನು ಒಂದೊಂದು ವ್ಯಸನವನ್ನು ಬಿಟ್ಟುಕೊಡುತ್ತ ಹೋಗಬೇಕು ಗಟ್ಟಿ ಮನಸ್ಸುಮಾಡಿ ಒಂದು ವ್ಯಸನವನ್ನು ಬಿಟ್ಟು ಅದರ ಉಳಿತಾಯದಿಂದ ಒಂದು ಹೊಲವನ್ನು ಕೊಂಡಂಥ, ಮದುವೆಯನ್ನು ಮಾಡಿಕೊಂಡಂಥ, ತಮ್ಮ ಮಕ್ಕಳ ಸಲುವಾಗಿ ಠೇವು ಇಟ್ಟಂಥ ಉದಾಹರಣೆಗಳು ಇವೆ. ಒಂದು ಉದಾಹರಣೆಯನ್ನು ನೋಡಿರಿ. ಒಂದೇ ಮುಂಬಯಿ ಪಟ್ಟಣದಲ್ಲಿ ದಿನಕ್ಕೆ ೫೦,೦೦೦ ರು. ಗಳ ಶಿಗಾರೇಟಗಳು ಮಾರಲ್ಪಡುತ್ತವಂತೆ! ಸೇದಿ ಒಗೆದ ಶಿಗಾರೇಟಗಳನ್ನು ಒಟ್ಟುಗೂಡಿಸಿ ಅವುಗಳಲ್ಲಿ ಉಳಿದಿರುವ ತಂಬಾಕವನ್ನು ಕೂಡಿಸಿ ಮಾರಿದರೆ ದಿನಕ್ಕೆ ೧೦,೦೦೦ ರು. ಗಳು ಬರುವವಂತೆ! ದಿವಸದಲ್ಲಿ ಖರ್ಚಾಗುವ ಶಿಗಾರೇಟಗಳನ್ನು ಒಂದಕ್ಕೊಂದು ಕೂಡಿಸಿದರೆ ೮೦ ಮೈಲು ಉದ್ದವಾಗುವದಂತೆ! ಒಂದೇ ಮುಂಬಯಿ ಪಟ್ಟಣದವರು ಈ ವ್ಯಸನವನ್ನು ಬಿಟ್ಟರೆ ದಿನಾಲು ೫೦,೦೦೦ ರು. ಗಳನ್ನು ಗಳಿಸುವರು. ಇದನ್ನು ಸತ್ಕಾರ್ಯಕ್ಕೆ ಉಪಯೋಗಿಸಬಾರದೇ? ಅಥವಾ ಸೇದಿ ಒಗೆಯುವ ಮಹಾಶಯರಾದರೂ ಒಂದೇ ಕಡೆಯಲ್ಲಿ ಒಗೆಯುವ ಸಂಕೇತವನ್ನು ಮಾಡಿದರೆ ಒಂದೇ ಮುಂಬಯಿ ಪಟ್ಟಣದವರು ದಿನಾಲು ೧೦,೦೦೦ ರು. ದಾನಧರ್ಮಮಾಡಲಿಕ್ಕೆ ಸಮರ್ಥರಾಗಲಿಕ್ಕಿಲ್ಲವೇ? ಇನ್ನು ಈ ಉಳಿತಾಯವನ್ನು ಒಂದು ವರ್ಷ ಕೂಡಹಾಕಿದರೆ ಏನಾದೀತು! ಹತ್ತು ವರ್ಷ ಕೂಡಿಟ್ಟರೆ ಏನಾದೀತು! ಎಂಬ ಬಗ್ಗೆ ವಾಚಕರೇ ತಮ್ಮ ಮನಸ್ಸಿನಲ್ಲಿ ಲೆಕ್ಕವನ್ನು ಹಾಕತಕ್ಕದ್ದು. ದಿನಾಲು ೨|೩ ಆಣೆ ಚಹದ ಸಲುವಾಗಿ, ೧ ಆಣೆ ಬೀಡಿಕಡ್ಡಿಗಳ ಸಲುವಾಗಿ ಹೀಗೆ ನಾಲ್ಕು ಆಣೆ ಖರ್ಚುಮಾಡುವನೊಬ್ಬನು ಈ ವ್ಯಸನವನ್ನು ಬಿಟ್ಟರೆ ಏನಾಗುವದೆಂಬದನ್ನು ಒಮ್ಮೆ ಶಾಂತಮನಸ್ಸಿನಿಂದ ವಿಚಾರಮಾಡಲಿ. ಈತನು ೧ ವರ್ಷಕ್ಕೆ ೯೦ ರು. ಗಳನ್ನು ಉಳಿಸುತ್ತಾನೆ. ಹತ್ತುವರ್ಷದಲ್ಲಿ ೯೦೦ ರು. ಗಳು ಆಗುವವು. ಇದಕ್ಕೆ ದೊರೆಯುವ ಬಡ್ಡಿಯನ್ನು ಕೂಡಿಸಿದರೆ ಕನಿಷ್ಟ ೧೦೦೦ ರು. ಗಂಟಾಗುವದು. ಈ ಹಣದಿಂದ ಮನೆತನದ ಯಾವದೊಂದು ಸತ್ಕಾರ್ಯವನ್ನು ಮಾಡಲಿಕ್ಕೆ ಸಮರ್ಥನಾಗುವದಿಲ್ಲವೇ? ಉಳಿದ ವ್ಯಸನಗಳ ಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಬೇಕೆನ್ನುವ ಪ್ರತಿಯೊಬ್ಬನು ಇಂಥ ದುರ್ವ್ಯಸನಗಳನ್ನು ದೂರೀಕರಿಸಲೇಬೇಕು.

---

# ಹದಿನೇಳನೆಯ ಪ್ರಕರಣ.

## ಈ ತರದ ಚಳವಳಿಗಳ ಸಂಕ್ಷಿಪ್ತ ಇತಿಹಾಸವು.

೧ ಬಂಗಾಲಿಗಳು, ೨ ಉರಿಯಾಜನರು, ೩ ತೆಲಗರು, ೪ ಮರಾಟಿಗರು, ೫ ಇತರರು.

**(೧) ಬಂಗಾಲಿಗಳು**:-ಲಾರ್ಡ ಕರ್ಝನ್ನರವರು ಪೂರ್ವ ಬಂಗಾಲದ ಕೆಲವು ಜಿಲ್ಹೆಗಳನ್ನು ಆಸಾಮಕ್ಕೆ ಜೋಡಿಸಿ ಬಂಗಾಲವನ್ನು ಇಬ್ಭಾಗಮಾಡಿದ್ದರಿಂದ ಈ ಚಳವಳಿಯು ಪ್ರಾರಂಭವಾಯಿತು. ಈ ತರದ ಚಳವಳಿಗಳಲ್ಲಿ ಬಂಗಾಲಿಗಳ ಚಳವಳಿಯೇ ಪ್ರಥಮಸ್ಥಾನವನ್ನು ಪಡೆಯುವದು. ಕನ್ಯಾಕುಮಾರೀ ಭೂಶಿರದಿಂದ ಹಿಮಾಲಯದವರೆಗೆ ಪ್ರತಿಯೊಬ್ಬನಲ್ಲಿಯೂ ವಿದ್ಯುಲತೆಯ ಪ್ರವಾಹವನ್ನು ಹರಿಬಿಟ್ಟು, ತಮ್ಮ ಪ್ರಾಂತಿಕ ಚಳವಳಿಯನ್ನು ಇಡೀ ದೇಶದ ಚಳವಳಿಯೆನಿಸುವಂತೆ ಮಾಡಿ, ೫-೬ ವರುಷ ಪ್ರಚಂಡವಾದ ಚಳವಳಿಯನ್ನೆಬ್ಬಿಸಿ, ಕೊನೆಗೆ ೧೯೧೨ ರಲ್ಲಿ ಲಾರ್ಡ ಹಾರ್ಡಿಂಜರವರ ಕಾಲದಲ್ಲಿ ತಮ್ಮ ಧ್ಯೇಯವನ್ನು ಸಾಧಿಸಿಕೊಂಡ ವೀರ ಬಂಗಾಲಿಗಳು ಏನೇನು ಮಾಡಿದರೆಂಬದನ್ನು ತಿಳಿದುಕೊಳ್ಳಲಪೇಕ್ಷಿಸುವವರು ಆಕಾಲದ ವೃತ್ತ ಪತ್ರಗಳನ್ನು ನೋಡುವದು ಉತ್ತಮವು. ಈ ಚಳವಳಿಗೆ ಲೊ. ಮಾ. ಟಿಳಕರೂ ಅಧ್ವರ್ಯರಾಗಿದ್ದರು. ನೋಡಿರಿ! ಬಂಗಾಲಿಗಳು ತಮ್ಮ ಪ್ರಾಂತಿಕ ಪ್ರಶ್ನಕ್ಕೆ ಇಡೀ ದೇಶವೇ ಒಂದಾಗುವಂತೆ ಯಾವ ಕುಶಲತೆಯನ್ನು ಯೋಜಿಸಿರಬೇಕು? ವಂಗಭಂಗ ಚಳವಳಿಯನ್ನೆತ್ತಿಕೊಂಡು ಕುಣಿದ ಕನ್ನಡಿಗರು ಅನೇಕರಿರುವರು! ಈಗ ಕನ್ನಡಿಗರು ಇದೇ ಪ್ರಶ್ನವನ್ನೆತ್ತಿದರೆ, ಬಂಗಾಲಿಗಳು ಸಹಾಯ ಮಾಡುವದಂತೂ ಒತ್ತಟ್ಟಿಗಿರಲಿ, ನಮ್ಮ ಕನ್ನಡ ಬಂಧುಗಳ ಸಹಾನುಭೂತಿಯನ್ನು ದೊರಕಿಸುವದು ಪರಾಕಷ್ಟವೆನಿಸಹತ್ತಿದೆ. ಇದಕ್ಕೇನು ಕಾರಣವಿರಬಹುದು? ಈ ಒಗಟಿನ ಉತ್ತರವನ್ನು ವಾಚಕರೇ ಊಹಿಸಬೇಕು.

**(೨) ಉರಿಯಾಜನರು**:-- ಬಂಗಾಲವನ್ನು ಇಬ್ಭಾಗಮಾಡಿದ ಲಾರ್ಡ ಕರ್ಝನ್ನರವರು ಉರಿಯಾಜನರನ್ನು ಏಕೀಕರಿಸುವ ಇಚ್ಛೆಯುಳ್ಳವರಾಗಿದ್ದರು. ಬಂಗಾಲಿಗಳಿಗೆ ಕರ್ಝನ್ನರವರು ಬೇಡಾಗಿದ್ದರೆ, ಉರಿಯಾಜನರಿಗೆ

ಅವರು ಬೇಕಾಗಿದ್ದರು. ಮದ್ರಾಸ, ಮಧ್ಯಪ್ರಾಂತ, ಬಂಗಾಲ ಹಾಗು ಕೆಲವು ಸಂಸ್ಥಾನಗಳು ಇವುಗಳಲ್ಲಿ ಹರಿದು ಹಂಚಿಹೋದ ಓಡಿಸಾಪ್ರಾಂತವನ್ನು ಏಕೀಕರಿಸಿ ಒಂದೇ ಅಧಳತೆಯ ಕೆಳಗೆ ತರುವದಕ್ಕಾಗಿ ಉರಿಯಾಜನರು ಚಳವಳಿಯನ್ನು ಎಬ್ಬಿಸಿದರು. ನಾಮದಾರ ಎಮ್. ಎಸ್. ದಾಸರು. ( ಸಿ. ಆಯ್. ಈ. ) ಇವರೇ ಮೊದಲಾದವರು ಈ ಚಳವಳಿಯ ಪುರಸ್ಕರ್ತರು! ಕೌನ್ಸಿಲದಲ್ಲಿ ಪ್ರಶ್ನ, ಅಧಿಕಾರಿಗಳ ಕಡೆಗೆ ಶಿಷ್ಟಮಂಡಳ, ಉತ್ಕಲಯುನಿಯನ್ ಕಾನ್‌ಫರನ್ಸ್‌ಗಳಿಂದ ಇವರ ಚಳವಳಿಯು ಇಂಗ್ಲಂಡಿನ ವರೆಗೂ ಮುಟ್ಟಿತು. ಲಾರ್ಡ ಕರ್ಝನ್ನರವರು ಪಾರ್ಲಮೆಂಟಿನಲ್ಲಿಯೂ ಒಮ್ಮೆ ಉರಿಯಾಜನರ ಪಕ್ಷವನ್ನು ಕಟ್ಟಿ ಭಾಷಣಮಾಡಿದರು. ಆಗ ಉರಿಯಾಜನರಿಗೆ ಹಾಗೆಯೇ ಚಳವಳಿಯನ್ನು ಮುಂದೆ ಸಾಗಿಸುವದಕ್ಕಾಗಿ ಉಪದೇಶ ಕೊಟ್ಟಿರುವರು. ಉರಿಯಾಜನರನ್ನು ಏಕೀಕರಿಸಿ ಓಡಿಸಾಪ್ರಾಂತವನ್ನು ಬೇರೆ ಮಾಡಬೇಕೆಂಬುದೇ ಇವರ ಇಚ್ಛೆಯು. ಈ ಇಚ್ಛೆಯು ಪೂರ್ಣವಾಗಿ ಕೈಗೂಡದಿದ್ದರೂ, ಲಾರ್ಡ ಹಾರ್ಡಿಂಜರವರ ಕಾಲದಲ್ಲಿಯೇ ಬಿಹಾರ-ಓಡಿಸಾ ಪ್ರಾಂತಗಳನ್ನು ಕೂಡಿಸಿ ಒಂದೇ ಅಧಳತೆಯ ಕೆಳಗೆ ತಂದಿರುತ್ತಾರೆ. ಉರಿಯಾಜನರ ಇಚ್ಛೆಯಂತೆ ಆ ಜನರ ಏಕೀಕರಣವಾಗಿರುವದಿಲ್ಲ. ಆದರೂ ಸರ್ವ ಪ್ರಕಾರದಿಂದ ಸರಕಾರವನ್ನು ಮನಗಾಣಿಸಿ ಬಿಟ್ಟಿರುವದರಿಂದ ಇಂದಿಲ್ಲ ನಾಳೆಯಾದರೂ ಅದು ಈಡೇರುವಂತಿದೆ. ಭಾಷೆಯಂತೆ ಪ್ರಾಂತಗಳನ್ನು ಮಾಡುವ ಪ್ರಸಂಗವು ಬಂದಾಗ ಸರಕಾರವು ಉರಿಯಾಜನರ ಕಡೆಗೆ ದುರ್ಲಕ್ಷ ಮಾಡುವಂತಿಲ್ಲ. ಇವರ ಚಳವಳಿಯಲ್ಲಿ ಮತ್ತೊಂದು ವಿಶೇಷವೆಂದರೆ ಉತ್ಕಲ ಪ್ರಾಂತಿಕ ಕಾಂಗ್ರೇಸ ಕಮಿಟಿಯ ಸಭಾಸದರೇ ಈ ಚಳವಳಿಯ ಪುರಸ್ಕರ್ತರು! ಇವರು ಸ್ಥಾಪಿಸಿದ ಶಾಖಾಸಂಘಗಳು ೩೮೧ ಇರುತ್ತವೆ. ಸಂಸ್ಥಾನಿಕರು ಸಹ ಆಸ್ಥೆಯಿಂದ ಭಾಗತಕ್ಕೊಳ್ಳುತ್ತಿದ್ದರು. ಹಾಗು ಕೆಲವು ಸಭೆಗೆ ಅಧ್ಯಕ್ಷರಾಗಿದ್ದರು.

( ೩ ) **ತೆಲಗರು:**—ಆಂಧ್ರರು ( ತೆಲಗರು ), ತಮಗೂ ಸ್ವತಂತ್ರವಾದ ಪ್ರಾಂತವಿರಬೇಕೆಂದು ಚಳವಳಿಯನ್ನೆಬ್ಬಿಸಿದರು. ವೃತ್ತಪತ್ರಗಳಿಂದ, ವ್ಯಾಖ್ಯಾನಗಳಿಂದ ಈ ವಿಚಾರವು ಜನರು ವಾಸಿಸುವ ಪ್ರತಿಯೊಂದು ಮೂಲಿಗೂ ಮುಟ್ಟುವಂತೆ ಮಾಡಿದರು. ಶ್ರೀಯುತ ಬಿ. ಎನ್. ಶರ್ಮಾ, ಬಿ. ಪಟ್ಟಾಭಿ-ಸೀತಾರಾಮಯ್ಯ, ಕೇ. ಹನುಮಂತರಾವ, ಎನ್. ಸುಬ್ಬರಾವ ಮೊದಲಾದ ೧೦।೧೨ ಜನ

ಮುಂದಾಳುಗಳು ಪುರಸ್ಕೃತರಾಗಿದ್ದರು. ಇಂಪೀರಿಯಲ್ ಕೌನ್ಸಿಲದಲ್ಲಿ ಭಾಷೆಯಂತೆ ಪ್ರಾಂತಗಳ ವಿಭಾಗವಾಗಬೇಕೆಂದು ಠರಾವನ್ನು ತಂದ ಬಿ. ಎನ್. ಶರ್ಮಾ ಎಂಬವರು ಇವರೇ! ಉರಿಯಾ ಜನರಂತೆ ಇವರೂ ನಿಕರದಿಂದ ಹೋರಾಡಿದರು. ಹಾಗು ಹೋರಾಡುತ್ತಿರುವರು. ಇವರ ಚಳವಳಿಯಲ್ಲಿಯೂ ಉರಿಯಾ ಜನರಂತೆ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಸಭಾಸದರು ಪುರಸ್ಕೃತರಿದ್ದು, ಜಿಲ್ಹಾ ಹಾಗು ಪ್ರಾಂತಿಕ ಕಾಂಗ್ರೇಸ ಸಭೆಗಳಲ್ಲಿಯೇ ಇವರ ಸ್ವತಂತ್ರ ಪ್ರಾಂತದ ಬಗ್ಗೆ ಚರ್ಚೆಯಾಗಿ, ಚಳವಳಿಯ ದಿಸೆಯೂ ನಿಶ್ಚಿತವಾಗುತ್ತಿತ್ತು. ಮರಾಟಿಗರಂತೆ ಇವರಲ್ಲಿ ತಮ್ಮ ನಾಡಿನ ಹಾಗು ನುಡಿಯ ಅಭಿಮಾನವು ವಿಶೇಷವಾಗಿದೆ. ಸ್ವತಂತ್ರ ವಿದ್ಯಾಪೀಠವನ್ನು ದೊರಕಿಸುವ ಇವರ ಚಳವಳಿಗೆ ಯಶಸ್ಸು ದೊರೆಯುವ ಲಕ್ಷಣವಿದೆ. ಇರಲಿ. ಕರ್ನಾಟಕ ಪ್ರಾಂತದ ಚಳವಳಿಯನ್ನು ಈ ಮೊದಲೇ ಪೂರ್ವಪೀಠಿಕೆಯಲ್ಲಿ ಕೊಟ್ಟಿರುತ್ತೇವೆ. ಅದಕ್ಕೂ ಇವರ ಚಳವಳಿಗೂ ಹೋಲಿಸಿ ನೋಡುವ ಕಾರ್ಯವನ್ನು ವಾಚಕರಿಗೆ ಬಿಟ್ಟುಬಿಡುತ್ತೇವೆ. ಇನ್ನು ಮುಂದಿನ ವಿಸ್ತೃತವಾದ ಚಳವಳಿಯಲ್ಲಿ ಕನ್ನಡಿಗರೂ ಕರ್ನಾಟಕ ಪ್ರಾಂತಿಕ ಕಾಂಗ್ರೇಸ ಕಮೀಟಿಯು ಸಭಾಸದರೂ ಏನು ಮಾಡುವರೆಂಬದನ್ನು ನೋಡಬೇಕಾಗಿದೆ ಈಗಳೇ ಈ ವಿಷಯವಾಗಿ ಯಾವ ಅಭಿಪ್ರಾಯವನ್ನೂ ಕೊಡಲಿಕ್ಕಾಗದು.

( ೪ ) **ಮರಾಟಿಗರು**:—ಉಳಿದವರಂತೆ ಇವರು ಪ್ರಚಂಡವಾದ ಚಳವಳಿಯನ್ನು ಎಬ್ಬಿಸದಿದ್ದರೂ, ಮಹಾರಾಷ್ಟ್ರದ ಏಕೀಕರಣದ ವಿಚಾರವನ್ನು ನಡೆಯಿಸಿರುತ್ತಾರೆ. ಉಳಿದವರಷ್ಟು ಇವರು ಆತುರವನ್ನು ತೋರಿಸದಿರುವದಕ್ಕೆ ಉಳಿದವರಷ್ಟು ಇವರ ಪ್ರಾಂತವು ಛಿನ್ನವಿಚ್ಛಿನ್ನವಾಗದಿರುವದೇ ಕಾರಣವು. ವರ್ಹಾಡವನ್ನು ಬಿಟ್ಟುಕೊಟ್ಟರೆ, ಮುಂಬೈ, ಮಧ್ಯಪ್ರಾಂತಗಳು ಹೊಂದಿಕೊಳ್ಳುತ್ತವೆ. ಬಳಿಕೆಯು ತಪ್ಪುವದಿಲ್ಲ. ಆಯಾ ಸರಕಾರದ ಕೌನ್ಸಿಲ್‌ದಲ್ಲಿ ಇವರ ಬಹುಮತವೂ ಆಗುವಂತಿದೆ. ಇವರಲ್ಲಿ ತಮ್ಮ ನಾಡಿನ ಹಾಗು ನುಡಿಯ ಅಭಿಮಾನವು ವಿಶೇಷವಾಗಿರುವದು. ಇದಲ್ಲದೆ ಯಾವದೊಂದು ಚಳವಳಿಯನ್ನು ಪದ್ಧತಿಗನುಸರಿಸಿ ಸಾಗಿಸುವ ಇವರ ಕುಶಲತೆಯನ್ನು ನಾವು ವರ್ಣಿಸಲೇಬೇಕು. ಇದು ೪೦ ವರ್ಷ ಲೋ. ಮಾ. ಟಿಳಕರಂಥ ವಿಖ್ಯಾತ ರಾಷ್ಟ್ರಪುರುಷರ ಶಿಕ್ಷಣದ ಹಾಗು ನಿಕಟಸಂಬಂಧದ ಪರಿಣಾಮವಾಗಿರುತ್ತದೆ. ಒಬ್ಬ ಮರಾಟಿಗನು

ಒಂದು ಯುಕ್ತಿಯನ್ನು ತೆಗೆದು, ಒಬ್ಬ ಮುಂದಾಳಿನ ಸಹಾನುಭೂತಿಯನ್ನು ದೊರಕಿಸಿದರೆ ಸಾಕು. ವಿದ್ಯುಲ್ಲತೆಯಂತೆ ಎಲ್ಲರಲ್ಲಿಯೂ ಆ ಸುದ್ದಿಯು ಪ್ರಸಾರವಾಗುವದಲ್ಲದೆ, ಎಲ್ಲರೂ ತಮ್ಮದೆಂದು ಅಭಿಮಾನವನ್ನು ತಾಳುವರು. ಇದಕ್ಕೆನ್ನ ಬೇಕು ಐಕ್ಯವೆಂದು! ಈಗ ತುಸು ಮತಭೇದವು ಕಂಡುಬಂದರೂ, ಅಭಿಮಾನವು ಇವರ ಮುಖ್ಯ ಗುಣವಾಗಿದೆ.

( ೫ ) **ಇತರರು:**—ಕರ್ನಾಟಕ ಸಹಿತವಾಗಿ ಇದುವರೆಗೆ ಸ್ವತಂತ್ರ ಪ್ರಾಂತಗಳನ್ನು ಬೇಡುವ ಮುಖ್ಯಜನರ ಚಳವಳಿಗಳ ವಿಷಯವಾಗಿ ಸಂಕ್ಷೇಪವಾಗಿ ತಿಳಿಸಿದೆವು. ಇವರಲ್ಲದೆ ಸ್ವತಂತ ಪ್ರಾಂತಗಳನ್ನು ಯಾರು ಬೇಡುವರೆಂಬದನ್ನು ಇಲ್ಲಿ ಹೇಳುವೆವು. ಮುಂಬೈ ಇಲಾಖೆಯಲ್ಲಿ ಸಿಂದೀ ಜನರು ತಮಗೆ ಸ್ವತಂತ್ರ ವಾದ ಪ್ರಾಂತವಿರಬೇಕೆಂದು ಇಚ್ಛಿಸುತ್ತಿರುವರು. ಗುಜರಾಥಿಗಳೂ ಈ ವಿಚಾರ ವನ್ನು ಬಿಟ್ಟಿರುವರೆಂತಲ್ಲ. ಗುಜರಾಥಿಗಳಲ್ಲಿ ಒಕ್ಕಟ್ಟೂ, ವಾಙ್ಮಯವೂ ಭರದಿಂದ ಬೆಳೆಯತೊಡಗಿವೆ. ಆಂಧ್ರರ ಚಳವಳಿಯನ್ನು ನೋಡಿ ತಮಿಳರೂ ಜಾಗ್ರತರಾ ಗಿರುವರು. ವಾಯವ್ಯ ಸರಹದ್ದಿಯ ಪ್ರಾಂತಕ್ಕೆ ಪಂಜಾಬದ ಕೆಲವು ಭಾಗವನ್ನು ಹಂಚಿಕೊಟ್ಟಿರುವರು. ಈ ಭಾಗದಲ್ಲಿ ಪಠಾಣರ ದಂಗೆಗಳು ಬಹಳ! ಆದ್ದರಿಂದ ಕಠಿಣ ತರದ ಕಾಯದೆಗಳನ್ನು ಗೊತ್ತುಪಡಿಸಬೇಕಾಗುವದು. ಈ ಕಠಿಣ ತರದ ಕಾಯದೆಗಳಿಗೆ ಕಾರಣವಿಲ್ಲದೆ ನಾವೇಕೆ ಗುರಿಯಾಗಬೇಕೆಂದು ಈ ಭಾಗದವರು ಕೇಳುತ್ತಿರುವರಲ್ಲದೆ ತಮ್ಮ ಭಾಗವನ್ನು ಪಂಜಾಬಕ್ಕೆ ಜೋಡಿಸಬೇಕೆಂದು ಅನ್ನು ತ್ತಿರುವರು. ಒಟ್ಟಿನ ಮೇಲೆ ತಮ್ಮ ನಾಡಿನ ಹಾಗು ನುಡಿಯ ಕಡೆಗೆ ಜನರ ಒಲವು ಸ್ವಾಭಾವಿಕವಾಗಿ ತಿರಗುವದೆಂಬದು ಇದರಿಂದ ಸ್ಪಷ್ಟವಾಗುತ್ತದೆ. ಒಂದು ಭಾಷೆಯ ಜನರು ಒಂದೇ ಆಢಳತೆಯ ಕೆಳಗೆ ಇರಬೇಕೆಂದು ಇಚ್ಛಿಸು ತ್ತಿರುವದೂ ಕಂಡುಬರುತ್ತದೆ. ಇಷ್ಟೆಲ್ಲ ಜನರಿಗೆ ಸುಖ ಸಮಾಧಾನಗಳು ಹೆಚ್ಚು ವಂತೆ, ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವ ಕಾರ್ಯವನ್ನು ಸರಕಾರವು ಒಮ್ಮೆ ಕೈಕೊಳ್ಳುವದು ಲೇಸಾಗಲಿಕ್ಕಿಲ್ಲವೆ? ಒಂದು ಸಮಾರಾಧನೆಯಲ್ಲಿ ಅಡು ಗೆಯ ಕೆಲಸವು ನಡೆಯತಕ್ಕದ್ದಿರುವದೆಂದು ತಿಳಿಯುವಾ. ಅಡುಗೆಯವನ ಮುಂದೆ ಕೋಠಿಯ ಕೋಣೆಯಿಂದ ಸಾಹಿತ್ಯಗಳನ್ನು ತಂದು ಅಸ್ತವ್ಯಸ್ತವಾಗಿ ಚೆಲ್ಲಿಬಿಡುವರು. ಅಡುಗೆಯವನು ಜಾಣನಿದ್ದರೆ ಆಯಾ ಸಾಹಿತ್ಯಗಳನ್ನು ತಕ್ಕ ಸ್ಥಳದಲ್ಲಿ ಹೊಂದಿಸಿ ಇಟ್ಟುಕೊಳ್ಳುವನು. ಹಾಗು ತನ್ನ ಕೆಲಸದಲ್ಲಿ ಸೌಲಭ್ಯ

ವನ್ನು ಂಟುಮಾಡುವನು. ಹಾಗಿಲ್ಲದಿದ್ದರೆ, ಮುಂದೆ ಸಾಹಿತ್ಯವಿದ್ದರೂ, ಅಸ್ತವ್ಯಸ್ತ ವಾಗಿ ಬಿದ್ದಿರುವ ಅನೇಕ ಸಾಹಿತ್ಯಗಳಲ್ಲಿ ನೋಡದೆ, ಆ ಸಾಮಾನು ಎಲ್ಲಿದೆ? ಈ ಸಾಹಿತ್ಯವೆಲ್ಲಿದೆ? ಎಂದು ಕ್ಷಣಕ್ಷಣಕ್ಕೆ ಒದರುತ್ತ ಕೂಡಬೇಕಾಗುವದಲ್ಲವೆ? ಇದೇ ರೀತಿ ಸರಕಾರವು ಬೇರೆ ಬೇರೆ ಭಾಗಗಳನ್ನು ಗೆದೆಯುವಾಗ ಹೊಂದಿಸುವ ಕಾರ್ಯ್ಯವನ್ನು ಮಾಡದಿದ್ದರೂ, ಈಗ ಆ ಕೆಲಸವು ತೀರಿ ನೂರಾರು ವರ್ಷಗಳಾ ಗಿರಲು, ಇನ್ನೂ ಅವುಗಳನ್ನು ಒಂದು ಸ್ವಾಭಾವಿಕ ಪದ್ಧತಿಗನುಸರಿಸಿ ಹೊಂದಿಸ ದಿದ್ದರೆ ಹೊಂದಿಸುವ ಮುಹೂರ್ತವು ಎಂದಿರುವದು?

---

# ಹದಿನೆಂಟನೆಯ ಪ್ರಕರಣ.



## ರಾಜಕೀಯ ವಿಭಾಗಗಳ ವಿಚಾರವು.



೧ ಸದ್ಯದ ವಿಭಾಗಗಳು, ೨ ಉರಿಯಾಜನರು ಸೂಚಿಸಿದ ವಿಭಾಗಗಳು, ೩ ಶ್ರೀ ಘೋಸ ಟಕರರು ಸೂಚಿಸಿನ ವಿಭಾಗಗಳು, ೪ ಭಾರತ ರಾಷ್ಟ್ರೀಯ ಸಭೆಯು ಮಾಡಿದ ವಿಭಾಗಗಳು, ೫ ಕನ್ನಡ ಕ್ರಮಿಕ ಪುಸ್ತಕಕಾರರ ವಿಚಾರ, ೬ ಕೊನೆಯ ಸೂಚನೆಯು.

**( ೧ ) ಸದ್ಯದ ವಿಭಾಗಗಳು:**— ನಮ್ಮ ಸರಕಾರವು ಸದ್ಯಕ್ಕೆ ಬ್ರಿಟಿಶ ಹಿಂದುಸ್ಥಾನದಲ್ಲಿ ೧೫ ವಿಭಾಗಗಳನ್ನು ಮಾಡಿರುತ್ತದೆಂಬದನ್ನು ಹಿಂದೆ ಸೂಚಿಸಿ ರುತ್ತೇವೆ. ಅವು:—೧ ಮುಂಬೈ ಇ', ೨ ಮದ್ರಾಸ ಇ॥, ೩ ಬಂಗಾಲ, ೪ ಬಿಹಾ ರ-ಓಡಿಸಾ; ೫ ಪಂಜಾಬ, ೬ ಸಂಯುಕ್ತಪ್ರಾಂತ, ೭ ಮಧ್ಯಪ್ರಾಂತ, ೮ ಬ್ರಹ್ಮ ದೇಶ, ೯ ಆಸಾಮ, ೧೦ ಬಲುಚಿಸ್ತಾನ, ೧೧ ಅಜಮೀರ, ೧೨ ಅಂದಮಾನ, ೧೩ ವಾಯವ್ಯ ಸರಹದ್ದಿಯ ಪ್ರಾಂತ, ೧೪ ಕೊಡಗು, ೧೫ ದಿಲ್ಲಿ. ಹೀಗೆ ಇರು ತ್ತವೆ. ಇವು ಅಸ್ವಾಭಾವಿಕವಾಗಿರುವದರಿಂದ, ಭಾಷೆಯಂತೆ ಪ್ರಾಂತರಚನೆಯಾ ಗಬೇಕೆಂಬುದೇ ಈ ಚಳವಳಿಯ ಸಾರವಿರುತ್ತದೆ. ಈ ದೃಷ್ಟಿಯಿಂದ ವಿಚಾರಿ ಸಲು ಬೇರೆ ಬೇರೆ ಜನರ ಸೂಚನೆಯು ಏನಿರುತ್ತದೆಂಬದನ್ನು ಇಲ್ಲಿ ತಿಳಿಸುವದು ಇಷ್ಟವಾಗಿದೆ.

**( ೨ ) ಉರಿಯಾ ಜನರು ಸೂಚಿಸಿದ ವಿಭಾಗಗಳು:**— ೧ ಅಜಮೀರ, ೨ ಅಂದಮಾನ, ೩ ಆಸಾಮ, ೪ ಬಲುಚಿಸ್ತಾನ, ೫ ಬಂಗಾಲ,

೬ ಒಡಿಸಾ, ೭ ಬಿಹಾರ, ೮ ಮಹಾರಾಷ್ಟ್ರ, ೯ ಗುಜರಾಥ, ೧೦ ಸಿಂಧ, ೧೧ ಕೊಡಗು, ೧೨ ಆಂಧ್ರ ( ತೆಲಗು ), ೧೩ ದ್ರವಿಡ (ತಮಿಳು ), ೧೪ ಮಲಿಯಾಳ, ೧೫ ಕರ್ನಾಟಕ, ೧೬ ವಾಯುವ್ಯ ಸರಹದ್ದಿಯ ಪ್ರಾಂತ, ೧೭ ಪಂಜಾಬ, ೧೮ ಸಂಯುಕ್ತಪ್ರಾಂತ, ೧೯ ದಿಲ್ಲಿ. ತುಸು ಹೆಚ್ಚುಕಡಿಮೆಯಾಗಿ ತೆಲಗರ ಸೂಚನೆಯೂ ಹೀಗೆಯೇ ಇರುತ್ತದೆಂದು ಉರಿಯಾ ಜನರು ಅನ್ನುವರು. ಆದರೆ ಕೊಡಗನ್ನು ಕರ್ನಾಟಕದಿಂದ ಬೇರೆಯಾಗಿಡುವ ಈ ಮಹಾಶಯರ ಉದ್ದೇಶವೇನು? ಅಜ್ಞಾನವಲ್ಲದೆ ಮತ್ತೇನು?

**( ೩ ) ಶ್ರೀ ಭೋಪಟಕರರು ಸೂಚಿಸಿದ ವಿಭಾಗಗಳು:—** ಇವರು ತಮ್ಮ “ ಸ್ವರಾಜ್ಯದ ಮೀಮಾಂಸೆ ” ಎಂಬ ಪುಸ್ತಕದ ೩೮ ನೆಯ ಪುಟದಲ್ಲಿ ಪ್ರಾಂತವಾಗತಕ್ಕ ಮುಖ್ಯ ಭಾಷೆಗಳ ಪಟ್ಟಿಯನ್ನು ಕೊಟ್ಟಿರುವರು. ಅವು:- ೧ ಹಿಂದೀ, ೨ ಬಂಗಾಲಿ, ೩ ತೆಲಗು, ೪ ಮರಾಟಿ, ೫ ತಮಿಳು, ೬ ಪಂಜಾಬೀ, ೭ ರಾಜಸ್ಥಾನೀ, ಪ. ಹಿಂದೀ, ೯ ಗುಜರಾಥೀ, ೧೦ ಕನ್ನಡ, ೧೧ ಓರಿಯಾ, ೧೨ ಬ್ರಹ್ಮೀ, ೧೩ ಮಲಯಾಳೀ, ೧೪ ಪ. ಪಂಜಾಬೀ, ೧೫ ಸಿಂಧೀ, ೧೬ ಪೂ. ಹಿಂದೀ, ೧೭ ಸಂತಾಲೀ, ೧೮ ಪಸ್ತು, ೧೯ ಆಸಾಮೀ, ೨೦ ಗೊಂಡ. ಹೀಗೆ ಇರುತ್ತವೆ. ಇವುಗಳನ್ನು ಜನಸಂಖ್ಯೆಯ ಮಾನದಿಂದ ಕ್ರಮವಾಗಿ ಹೊಂದಿಸಿರುವರು. ನಮ್ಮ ಕರ್ನಾಟಕದ ನಂಬರು ೧೦ ನೆಯದಿದ್ದು ಉರಿಯಾಪ್ರಾಂತಕ್ಕಿಂತ ದೊಡ್ಡದಾಗಿದೆ. ಇದಲ್ಲದೆ ಇವರು ಆಯಾ ಭಾಷೆಯ ಪ್ರದೇಶಗಳನ್ನೂ ಸೂಚಿಸಿರುವರು. ಅದರಲ್ಲಿ ಕೊಡಗನ್ನು ಕರ್ನಾಟಕಕ್ಕೆ ಸೇರಿಸಿರುವದನ್ನು ನೋಡಿದರೆ, ಈ ಪಟ್ಟಿಯನ್ನು ವಿಚಾರಿಸಿ ಬರೆದಂತೆ ಕಂಡುಬರುತ್ತದೆ.

**( ೪ ) ಭಾರತರಾಷ್ಟ್ರೀಯ ಸಭೆಯು ಮಾಡಿದ ವಿಭಾಗಗಳು:—** ರಾಷ್ಟ್ರೀಯ ಸಭೆಯು ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಿ ತನ್ನ ಕೆಲಸದ ಅನುಕೂಲತೆಗಾಗಿ ೨೧ ಪ್ರಾಂತಗಳನ್ನು ಮಾಡಿಕೊಂಡಿರುತ್ತದೆ. ಮತ್ತು ಅವುಗಳ ಜನಸಂಖೆಯನ್ನೂ ಸೂಚಿಸಿರುತ್ತದೆ. ಮುಂದಿನ ಕಂಸಿನಲ್ಲಿರುವ ಸಂಖ್ಯೆಯು ಅಷ್ಟು ದಶಲಕ್ಷ ಸಂಖ್ಯೆಯನ್ನು ಸೂಚಿಸುತ್ತವೆಂದು ತಿಳಿಯಬೇಕು. ಮುದ್ರಾಸ, ( ೨೦ ), ಆಂಧ್ರ ( ೨೧ ), ಕರ್ನಾಟಕ ( ೧೨ ), ಕೇರಳ ( ೭ ), ಮುಂಬೈ ( ೧ ), ಮಹಾರಾಷ್ಟ್ರ ( ೧೨ ), ಗುಜರಾಥ ( ೧೧ ), ಸಿಂಧ ( ೪ ), ಸಂಯುಕ್ತಪ್ರಾಂತ ( ೪೯ ), ಪಂಜಾಬ ( ೨೭ ), ವಾಯುವ್ಯ ಸರಹದ್ದಿಯ ಪ್ರಾಂತ ( ೩ ), ದಿಲ್ಲಿ (೧),

ಅಜಮೀರ (೧೯), ಹಿಂದೀ ಮಧ್ಯಪ್ರಾಂತ (೯), ಮರಾಟಿ ಮಧ್ಯಪ್ರಾಂತ (೩) ವರ್ಹಾಡ (೩), ಬಿಹಾರ (೨೯), ಉತ್ಕಲ (೨೫), ಬಂಗಾಳ (೪೭), ಆಸಾಮು (೪), ಬ್ರಹ್ಮದೇಶ (೧೨). ಇವುಗಳಲ್ಲಿ ಉತ್ಕಲ (ಓಡಿಸಾ) ಪ್ರಾಂತದ ಜನಸಂಖ್ಯೆಯು ತಪ್ಪಿ ಬಿದ್ದಂತೆ ಕಂಡುಬರುತ್ತದೆ. ಯಾಕಂದರೆ—ಸ್ವತಃ ಉರಿಯಾ ಜನರು ತಮ್ಮ ಜನಸಂಖ್ಯೆಯನ್ನು–(ಬ್ರಿಟಿಶಪ್ರದೇಶ– ೧೦೩೧೧೪೯೭, ಸಂಸ್ಥಾನಗಳು– ೪೯೩೮೭೬೧, ಒಟ್ಟು– ೧೫೨೫೦೧೫೮) ಎಂದು ತೋರಿಸಿರಲು, ೨ ೧/೨ ಕೋಟಿ ಜನರನ್ನು ರಾಷ್ಟ್ರೀಯ ಸಭೆಯು ಎಲ್ಲಿಂದ ತಂದಿರುವದೋ? ರಾಷ್ಟ್ರೀಯ ಸಭೆಯು ಕೆಲವು ಕನ್ನಡ ಪ್ರದೇಶಗಳನ್ನು ಸದ್ಯಕ್ಕೆ ಬಿಟ್ಟುಕೊಟ್ಟಿರುವದರಿಂದ ಇಲ್ಲಿ ತೋರಿಸಿರುವ ಸಂಖ್ಯೆಗಿಂತ ಕರ್ನಾಟಕದ ಜನಸಂಖ್ಯೆಯು ಹೆಚ್ಚಾಗುವದು.

**(೫) ಕನ್ನಡ ಕ್ರಮಿಕ ಪುಸ್ತಕಕಾರರ ವಿಚಾರ:**—ಮುಂಬೈ ಇಲಾಖೆಯಲ್ಲಿ ಗೊತ್ತುಪಡಿಸಿದ ಕನ್ನಡ ಕ್ರಮಿಕ ಪುಸ್ತಕಗಳಲ್ಲಿ ೬ನೆಯ ಪುಸ್ತಕದ ೫ನೆಯ ಪಾಠದಲ್ಲಿ ತುಸು ಈ ವಿಚಾರವು ಬಂದಿದೆ. ಈ ಪುಸ್ತಕದ ೧೨ನೆಯ ಪುಟದ ಮೇಲೆ ಭಾಷೆಯಂತೆ ಪ್ರಾಂತವಿಭಾಗ ಮಾಡಿದ ೧ ನಕ್ಷೆಯನ್ನು ಕೊಟ್ಟಿರುವರು. ಇದರಿಂದ ಎಷ್ಟು ಭಾಷೆಗಳು ಪ್ರಾಂತವಾಗಲು ಶಕ್ಯವಾಗಿರುತ್ತವೆಂಬದು ತಿಳಿಯುಬರುವದು. ಅದನ್ನು ಇಲ್ಲಿ ಕೊಡುವೆನು. ೧ ಕನ್ನಡ, ೨ ತೆಲಗು ೩ ತಮಿಳ, ೪ ಮಲಿಯಾಳು, ೫ ಮಹಾರಾಷ್ಟ್ರ, ೬ ಗುಜರಾಥ, ೭ ಸಿಂಧ, ೮ ಬಲುಚಿಸ್ತಾನ, ೯ ಪಸ್ತು, ೧೦ ಕಾಶ್ಮೀರ, ೧೧ ಪಂಜಾಬ, ೧೨ ರಾಜಸ್ಥಾನೀ, ೧೩ ಹಿಂದೀ, ೧೪ ಪಹಾಡೀ, ೧೫ ಬಿಹಾರ, ೧೬ ಓಡಿಸಾ, ೧೭ ಬಂಗಾಲಿ, ೧೮ ಆಸಾಮೀ, ೧೯ ಬ್ರಹ್ಮದೇಶ ಹೀಗೆ ೧೯ ಪ್ರದೇಶಗಳು ಮುಖ್ಯವಾಗಿದ್ದು ಇವುಗಳಲ್ಲಿ—೧ ಕಾಶ್ಮೀರ, ೨ ರಾಜಸ್ಥಾನಗಳನ್ನು ಬಿಟ್ಟರೆ ಬ್ರಿಟಿಶ ಪ್ರದೇಶದಲ್ಲಿ ೧೭ ಪ್ರಾಂತಗಳಾಗುವವು. ಇವುಗಳ ಹೊರತು ೧ ತುಳು, ೨ ಭಿಲ್ಲ, ೩ ಗೊಂಡ, ೪ ಕಾಂಡ, ೫ ಸಂಥಾಲೀ ಹೀಗೆ ೫ ಚಿಲ್ಲರ ಭಾಷೆಯ ಪ್ರದೇಶಗಳನ್ನು ಕಾಣಿಸಿರುವರು.

**(೬) ಕೊನೆಯ ಸೂಚನೆಯು:**— ಕ್ಷೇತ್ರ, ಜನಸಂಖ್ಯೆ, ಆಯವ್ಯಯ, ಆಧಳತೆಗೆ ಸೌಲಭ, ಇವುಗಳನ್ನು ವಿಚಾರಿಸಿ, ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದು ಉತ್ತಮವು. ೧ ಗವ್ಹರ್ನರರ ಆಧಳತೆಗೆ ಯೋಗ್ಯವಾಗಿರುವ, ೨ ಲೆ. ಗವ್ಹರ್ನರರ ಆಧಳತೆಗೆ ಯೋಗ್ಯವಾಗಿರುವ, ೩ ಚೀಫ್‌ಕಮಿ

ಶನರರ ಅಧ್ಥಳತೆಗೆ ಯೋಗ್ಯವಾಗಿರುವ, ಹೀಗೆ ಮೂರು ವರ್ಗಗಳನ್ನು ಮಾಡಿ ಆಯಾ ಪ್ರಾಂತದ ಯೋಗ್ಯತೆಯಂತೆ ಅದಕ್ಕೆ ಪ್ರಾಂತಿಕ ಸ್ವರೂಪವನ್ನು ಕೊಡ ತಕ್ಕದ್ದು. “ಗವ್ಹರ್ನರರ ಅಧ್ಥಳತೆಗೆ ಯೋಗ್ಯವಾದರೆ ಪ್ರಾಂತವಾಗುವದು. ಇಲ್ಲದಿದ್ದರೆ ಇಲ್ಲ” ಎಂದರೆ ಮಧ್ಯಮ ತರದ ತೆಲಗು, ಮಹಾರಾಷ್ಟ್ರ, ಕರ್ನಾಟಕ ಪ್ರಾಂತಗಳು ಕಡೆಗೂ ಜೋತಾಡುತ್ತ ಬಿದ್ದುಕೊಂಡಿರಬೇಕಾಗುವದು. ಸುಧಾರಣೆಯ ಕಾಯದೆಯ ಮೊದಲು ಮೇಲೆ ವಿವರಿಸಿದ ೩ ತರದ ಅಧ್ಥಳತೆಗಳಿದ್ದವು. ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸುವದಾದರೆ, ಈ ೩ ತರಗಳೇ ಯೋಗ್ಯವಾಗುವವೆಂದು ಎಲ್ಲರಿಗೂ ಕಂಡಬರುವಂತಿದೆ. ಅನೇಕರು ತಮಗೆ ಇಷ್ಟವಾಗಿರುವಂತೆ ಪ್ರಾಂತದ ಗಡಿಗಳನ್ನು ಸೂಚಿಸಿದ್ದರೂ, ಸರಕಾರವು ವಿಚಾರಣೆಯ ಕಮಿಟಿಯನ್ನು ನಿಯಮಿಸಬೇಕಾಗುವದು. ಯಾರಿಗೂ ಅನ್ಯಾಯವಾಗದಂತೆ ಪ್ರಾಂತದ ಗಡಿಗಳು ಒಮ್ಮೆ ಗೊತ್ತಾಗಿ ಹೋಗುವದು ಲೇಸು. ಈಗಿನ ದ್ವೇಷಾಸೂಯೆಗಳು ಅಡಗಿಹೋಗಿ ಪರಸ್ಪರರಲ್ಲಿ ಸಹಾನುಭೂತಿಯೂ ಸಹಕಾರವೂ ಬೆಳೆಯಬೇಕಾದರೆ ಭಾಷೆಯಂತೆ ಪ್ರಾಂತವಿಭಾಗದ ಕಾರ್ಯವು ಅವಶ್ಯವಾಗಿ ಆಗಲೇಬೇಕು. ಒಬ್ಬನನ್ನು ಕಂಡು ಇನ್ನೊಬ್ಬನು ಮೂಗುಮುರಿಯುವ ಸದ್ಯದ ಅನಿಷ್ಟಪದ್ಧತಿಯು ಬೇಗ ಕಟ್ಟಾದಷ್ಟು ಉತ್ತಮವು. ಇದಕ್ಕೆ ಭಾಷೆಯಂತೆ ಪ್ರಾಂತವಿಭಾಗದ ಹೊರತು ಗತ್ಯಂತರವಿಲ್ಲ.

---

# ಹತ್ತೊಂಬತ್ತನೆಯ ಪ್ರಕರಣ.

## ಕಟ್ಟಕಡೆಯ ಗುಟ್ಟು

೧ ಈ ಗ್ರಂಥದ ಸದುಪಯೋಗವು, ೨ ಏಕೀಕರಣಕ್ಕಾಗಿ ಕೃತಿಯು, ೩ ಪ್ರತಿಯೊಬ್ಬನ ಕರ್ತವ್ಯ, ೪ ಕರ್ನಾಟಕ-ಏಕೀಕರಣ ಸಂಘವು, ೫ ಈ ಸಂಘದ ಕಾರ್ಯಗಳು, ೬ ದುಡ್ಡಿನವನು ದೊಡ್ಡಪ್ಪ. ೭ ಗಂಭೀರ ಗರ್ಜನೆಯು, ೮ ಕೊನೆಯ ಉದ್ಗಾರಗಳು

**(೧) ಈ ಗ್ರಂಥದ ಸದುಪಯೋಗವು**:—ಮನಸ್ಸಿಗೆ ಬಂದಾಗ ಅಲ್ಲಿಗೊಂದು ಇಲ್ಲಿಗೊಂದು ಪುಟವನ್ನು ಓದಿ ಕಡೆಗೆ ಪುಸ್ತಕಕ್ಕೆ ಮೂಲಿಯನ್ನು ತೋರಿಸುವವರೇ ಬಹಳ! ಈ ಪುಸ್ತಕದ ವಿಷಯವಾಗಿ ಹೀಗೆ ಆಗಬಾರದೆಂಬ

ದೇ ನಮ್ಮ ಪ್ರಾರ್ಥನೆಯು. ಪ್ರತಿಯೊಬ್ಬನು ಮನಸ್ಸುಗೊಟ್ಟು ಒಮ್ಮೆ ಓದಿಯೇ ತೀರಬೇಕು. ಹಾಗುತನ್ನ ಆಪ್ತೇಷ್ಟರಲ್ಲಿಯೂ, ಪುತ್ರಮಿತ್ರರಲ್ಲಿಯೂ ಈ ವಿಚಾರ ವನ್ನು ಹಬ್ಬಿಸಲೇಬೇಕು. ಕರ್ನಾಟಕದ ರೂಪರೇಷೆ, ಆದರ ಕ್ಷೇತ್ರ, ಜನಸಂಖ್ಯೆ, ರೇಲ್ವೆಮಾರ್ಗ, ಜಿಲ್ಹೆಗಳು, ತಾಲೂಕುಗಳು ಇವೆಲ್ಲ ಪ್ರತಿಯೊಬ್ಬನ ಕಣ್ಣುಮುಂದೆ ಕಟ್ಟುವಂತೆ ಈ ವಿಷಯವನ್ನು ಮನನಮಾಡಿಕೊಳ್ಳಬೇಕು. ಕರ್ನಾಟಕದಲ್ಲಿ ಜನ್ಮ ತಾಳಿದ ಪ್ರತಿಯೊಬ್ಬನು ಈ ವಿಷಯದಲ್ಲಿ ತನಗೆ ಏನಾದರೂ ಕರ್ತವ್ಯವಿರುತ್ತದೆಂಬ ದನ್ನು ಧೃಡವಾಗಿ ನಂಬಿ, ಇದರ ವಾಚನವನ್ನು ಮುಗಿಸಿದ ನಂತರ ಶಕ್ಯವಿದ್ದ ರೀತಿಯಿಂದ ತನ್ನ ಕರ್ತವ್ಯವನ್ನು ಜರಗಿಸಲಿಕ್ಕೆ ಪ್ರಯತ್ನಿಸಬೇಕು.

( ೨ ) **ಏಕೀಕರಣಕ್ಕಾಗಿ ಕೃತಿಯು**:—ಕರ್ನಾಟಕದಲ್ಲಿ ವಿದ್ಯಾಪ್ರ ಸಾರವು ಕಡಿಮೆಯಾಗಿರುವದರಿಂದ ವರ್ತಮಾನಪತ್ರದಲ್ಲಾಗಲಿ, ಮಾಸಿಕಪುಸ್ತ ಕದಲ್ಲಾಗಲಿ ಏಕೀಕರಣದ ಬಗ್ಗೆ ಎಷ್ಟೇ ಸ್ಫೂರ್ತಿದಾಯಕವಾದ ಲೇಖಗಳನ್ನು ಬರೆದರೂ, ಬಹುಸಂಖ್ಯಾಕರಾದ ಅಶಿಕ್ಷಿತ ವರ್ಗಕ್ಕೆ ಅದರ ಗಂಧವು ಸಹ ಮುಟ್ಟುವಂತಿಲ್ಲ. ಶಿಕ್ಷಣಪ್ರಸಾರವಾಗುವವರೆಗೆ ಈ ವಿಷಯವನ್ನು ತಡೆಯು ವಂತಿಲ್ಲ. ಆದ್ದರಿಂದ ಹಳ್ಳಿಹಳ್ಳಿಗೆ ಹೋಗಿ, ಸಾಮಾನ್ಯ ಜನರೊಡನೆ ಕೂಡಿ ಕೊಂಡು ಅವರಿಗೆ ಈ ವಿಷಯವನ್ನು ತಿಳಿಸಿ ಹೇಳುವ ಕೆಲಸವನ್ನು ಕೈಕೊಳ್ಳು ವಂಥ ಸ್ವಯಂಸೇವಕರು ಅವಶ್ಯವಾಗಿಬೇಕು. ಒಂದು ದೊಡ್ಡ ಮಾಸಿಕ ಪುಸ್ತಕ ವನ್ನು ತೆಗೆಯುವೆವೆಂದಾಗಲಿ, ವರ್ತಮಾನಪತ್ರದ ಪುಟಗಳನ್ನು ಬೆಳೆಯಿಸುವೆ ವೆಂದಾಗಲಿ ಹೇಳಿದ ಮಾತ್ರಕ್ಕೆ ಕರ್ನಾಟಕದ ಏಕೀಕರಣವಾದಂತಾಗುವದಿಲ್ಲ. ಆಡಂಬರದ ವ್ಯಾಖ್ಯಾನಗಳ ಹಾಗೂ ಲೇಖಗಳ ಕಾಲವು ಹೋಗಿ ಪ್ರತ್ಯಕ್ಷ ಕೃತಿ ಮಾಡುವ ಕಾಲವು ಬಂದಿರುತ್ತದೆ. ಹೆಗಲಿಗೆ ಹಾಸಿಗೆಯನ್ನು ಕಟ್ಟಿ ಹಳ್ಳಿಹಳ್ಳಿಗೆ ತಿರುಗುತ್ತ ಜಾಗೃತೆಯನ್ನುಂಟುಮಾಡುವ ಸ್ವಯಂಸೇವಕನು ಹೆಚ್ಚು ಮಾನನೀಯ ನಾದ ದೇಶಸೇವಕನೆನಿಸುತ್ತಾನೆ. ಆದ್ದರಿಂದ ಆಡಂಬರದ ಮಾತುಗಳನ್ನು ಆಡುವ ದಕ್ಕಿಂತ ತಮಗೆ ಶಕ್ಯವಿದ್ದ ಯಾವದೊಂದು ಕೃತಿಯನ್ನು ಮಾಡಿ ಕರ್ನಾಟಕದ ಸೇವೆಮಾಡುವದರಲ್ಲಿ ಕನ್ನಡಿಗರು ಯಾವಾಗಲೂ ತತ್ಪರರಾಗಿರಬೇಕು.

( ೩ ) **ಪ್ರತಿಯೊಬ್ಬನ ಕರ್ತವ್ಯವು**:—.ಕರ್ನಾಟಕದ ಜಾಗೃತೆ ಗಾಗಿ ಪ್ರತಿಯೊಬ್ಬನಿಗೂ ಕರ್ತವ್ಯವುಂಟು. ತಮ್ಮ ತಾಯ್ನಾಡಿನ ಹಾಗು ತಾಯ್ನು ಡಿಯ ಅಭ್ಯಾಸವನ್ನು ಮನಗೊಟ್ಟು ಮಾಡುವದು ವಿದ್ಯಾರ್ಥಿಗಳ ಕರ್ತವ್ಯವಾಗಿ

ರುತ್ತದೆ. ಪ್ರಾಯದವರು ತಮ್ಮ ತನುಮನ ಧನಗಳಿಂದ ಸಹಾಯ ಮಾಡಬೇಕಾಗುವದು. ಮುಪ್ಪಿನವರು ತರುಣರನ್ನು ಹುರುಪುಗೊಳಿಸುವದರಲ್ಲಿ ತಮ್ಮ ಕರ್ತವ್ಯವನ್ನು ತೋರಿಸಬಹುದು. ಸ್ತ್ರೀಯರು ಸಹ ತಮ್ಮ ಪಾಲಿಗೆ ಬರುವ ಕರ್ತವ್ಯವನ್ನು ಜರಗಿಸಲಿಕ್ಕೆ ಹಿಂಜರಿಯಬಾರದು. ಬುದ್ಧಿವಂತನಾದ ಮನುಷ್ಯನು ಒಂದು ವಿಚಾರ ಪರಿಪೂರ್ಣವಾದ ಯೋಜನೆಯನ್ನು ಸಿದ್ಧಪಡಿಸಿದರೆ, ಶ್ರೀಮಂತನಾದವನು ಹಣದ ಸಹಾಯವನ್ನು ಮಾಡಿ ತಮ್ಮ ತಮ್ಮ ಕರ್ತವ್ಯಗಳನ್ನು ನೀಗಿಸಬಹುದು. ಮ್ಯುನಿಸಿಪಾಲ್ಟಿ, ಲೋಕಲ್‌ಬೋರ್ಡ, ಕಾಯದೆಕೌನ್ಸಿಲ್‌ಗಳಿಗೆ ಮತವಿರುವ ಜನರು ಕರ್ನಾಟಕದ ಜಾಗೃತೆಗಾಗಿ ತಮ್ಮ ಮತಗಳನ್ನು ಯೋಗ್ಯವಾಗಿ ಉಪಯೋಗಿಸಿಕೊಂಡರೆ ತಮ್ಮ ಕರ್ತವ್ಯವನ್ನು ಜರಗಿಸಿದಂತಾಗುವದು. ಇದೇ ರೀತಿ ವಿದ್ಯಾಪೀಠದ ಕನ್ನಡ ಸಭಾಸದರೂ, ಕಾಯದೆಮಂಡಳಗಳ ಕನ್ನಡ ಸಭಾಸದರೂ ತಮ್ಮ ಕರ್ತವ್ಯವನ್ನು ತೋರಿಸಬೇಕಾಗಿದೆ. ಹೀಗೆ ಪ್ರತಿಯೊಬ್ಬನಿಗೂ ಒಂದಿಲ್ಲೊಂದು ಕರ್ತವ್ಯವಿರುವದನ್ನು ಮರೆಯಲಾಗದು.

**( ೪ ) ಕರ್ನಾಟಕ ಏಕೀಕರಣ ಸಂಘವು:**—ಕರ್ನಾಟಕ ಏಕೀಕರಣ ಸಂಘವನ್ನು ಸ್ಥಾಪಿಸಿ ಆ ಸಂಘದ ಮುಖಾಂತರ ಈ ಕರ್ನಾಟಕ ಚಳವಳಿಯನ್ನು ಸಾಗಿಸುವದು ಉಚಿತವಾಗಿ ತೋರುತ್ತದೆ. ಪ್ರತಿಯೊಂದು ಜಿಲ್ಹೆಯಲ್ಲಿ ಈ ಮುಖ್ಯ ಸಂಘದ ಶಾಖಾ ಸಂಘವು ಸ್ಥಾಪಿಸಲ್ಪಡಬೇಕು. ಅವಶ್ಯವಿದ್ದರೆ ತಾಲೂಕಿನ ಸ್ಥಳಗಳಲ್ಲಿಯೂ, ದೊಡ್ಡ ಊರುಗಳಲ್ಲಿಯೂ ಇಂಥ ಶಾಖಾ ಸಂಘಗಳನ್ನು ಸ್ಥಾಪಿಸಬೇಕು. ೧೯೨೦ರಲ್ಲಿ ಕರ್ನಾಟಕ ಸಭೆಯೊಂದು ಸ್ಥಾಪನೆಯಾಗಿತ್ತು. ಶ್ರೀಯುತ ರಾಘವೇಂದ್ರರಾವ ಕಡಪಾ ಇವರು ಅದರ ಕಾರ್ಯದರ್ಶಿಗಳಾಗಿದ್ದರು. ಮೊದಲನೇ ಪರಿಷತ್ತನ್ನು ಜರಗಿಸಿದ ಕೂಡಲೇ ಇದು ಅಸ್ತಂಗತವಾಯಿತು. ಈ ಸಭೆಯನ್ನೇ ಪುನರುಜ್ಜೀವನಗೊಳಿಸಿಯಾಗಲಿ, ಅಥವಾ ಕರ್ನಾಟಕ ಏಕೀಕರಣ ಸಂಘವನ್ನು ಸ್ಥಾಪಿಸಿಯಾಗಲಿ, ಈ ಕಾರ್ಯವನ್ನು ಪ್ರಾರಂಭಿಸತಕ್ಕದ್ದು. ಸಂಸ್ಥಾನಗಳಲ್ಲಿಯೂ ಶಾಖಾಸಂಘಗಳು ಸ್ಥಾಪಿಸಲ್ಪಟ್ಟು ಅಲ್ಲಿಯೂ ಜಾಗೃತೆಯ ಕಾರ್ಯವು ಆರಂಭವಾಗಲೇಬೇಕು. ಮುಂದೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸಕಮೀಟಿಯು ಈ ವಿಷಯವನ್ನು ಕೈಕೊಂಡರೂ, ಕರ್ನಾಟಕ ಏಕೀಕರಣ ಸಂಘವು ಬೇರೆಯಾಗಿ ಇರಲೇಬೇಕಾಗುವದು. ಯಾಕಂದರೆ ರಾಜಕೀಯ

ಗೊಂದಲದಲ್ಲಿ ಸೇರಲೊಲ್ಲದ ಜನರಿಗೆ ಇಲ್ಲಿ ಕಾರ್ಯಮಾಡಲು ಆಸ್ಪದವು ದೊರೆಯುವದು.

**(೫) ಈ ಸಂಘದ ಕಾರ್ಯಗಳು**:—(೧) ಮ್ಯುನಸಿಪಾಲ್ಟಿ ಲೋಕಲ್‌ಬೋರ್ಡ ಮತ್ತು ಕಾಯದೆಕೌನ್ಸಿಲ್‌ಗಳಿಗೆ ಈ ಮತದ ಪುರಸ್ಕರ್ತ ರನ್ನೇ ಉಮೇದವಾರರನ್ನಾಗಿ ನಿಲ್ಲಿಸುವದು; ಹಾಗು ಅವರ ಕಾರ್ಯದ ದಿಶೆ ಯನ್ನು ಗೊತ್ತುಪಡಿಸುವದು. (೨) ಸಂಯುಕ್ತ ಕರ್ನಾಟಕ (ಯುನಾಯಿಟೆಡ್ ಕರ್ನಾಟಕ) ಎಂಬ ಹೆಸರಿನ ಒಂದು ಇಂಗ್ಲಿಷ (ಅಥವಾ ಅರ್ಧ ಇಂಗ್ಲಿಷ, ಅರ್ಧ ಕನ್ನಡ) ವಾರಪತ್ರವನ್ನು ಹೊರಡಿಸುವದು. ಸಂಯುಕ್ತ ಕರ್ನಾಟಕ ಪ್ರಾಂತವನ್ನು ಪಡೆಯುವದೇ ಇದರ ಧ್ಯೇಯವಿರಬೇಕು. (೩) ಏಕೀಕರಣ ಸಂಘವು ಕರ್ನಾಟಕದೊಳಗಿನ ಪ್ರಸಿದ್ಧ ವ್ಯಾಖ್ಯಾನಕಾರರ, ಕೀರ್ತನಕಾ ರರ, ಹಾಗು ಸ್ವಯಂಸೇವಕರ ಹೆಸರುಗಳನ್ನು ನಮೂದಿಸಿಕೊಂಡು ಅವರ ಪ್ರವಾಸದ ವೆಚ್ಚಕ್ಕಾಗಿ ಹಣವನ್ನು ಕೊಟ್ಟು, ನಿದ್ರಾವಸ್ಥೆಯಲ್ಲಿರುವ ಜನರನ್ನು ಎಬ್ಬಿಸಿ ಅವರನ್ನು ಕಾರ್ಯತತ್ಪರರನ್ನಾಗಿ ಮಾಡುವದಕ್ಕಾಗಿ ಅಟ್ಟುವದು. (೪) ವರ್ಷಕ್ಕೊಮ್ಮೆ ಬೇರೆ ಬೇರೆ ಜಿಲ್ಹೆಗಳಲ್ಲಿ ಈ ಸಂಘದ ವತಿಯಿಂದ ಕರ್ನಾ ಟಕದ ವಾರ್ಷಿಕ ಸಮ್ಮೇಲನವನ್ನು ಕೂಡಿಸುವದು. ಹಿಂದಿನ ವರ್ಷದಲ್ಲಾದ ಕಾರ್ಯಗಳನ್ನು ಪರೀಕ್ಷಿಸಿ, ಈ ಸಭೆಯು ಮುಂದಿನ ಮಾರ್ಗವನ್ನು ನಿಶ್ಚಯಿಸು ವದು. (೫) ಪ್ರಸಂಗವಶದಿಂದ ಅವಶ್ಯ ಕಂಡುಬರುವ ಕರ್ನಾಟಕದ ಯಾವ ದೊಂದು ಹಿತದ ಪ್ರಶ್ನವನ್ನು ಕೈಕೊಳ್ಳುವದು. ಇವೇ ಮುಖ್ಯವಾದ ಐದು ಕಾರ್ಯಗಳಾಗಿರುತ್ತವೆ.

**(೬) ದುಡ್ಡಿದ್ದವನು ದೊಡ್ಡಪ್ಪ**:—"ದುಡ್ಡಿಲ್ಲದೆ ಕಡ್ಡಿಯಲ್ಲಾ ಡದು" ಎಂಬದು ಸರ್ವರ ಅನುಭವದ ಮಾತಾಗಿದ್ದು, ಹೊಸಯೋಜನೆಯ ಕಾಲ ದಲ್ಲಿ ಈ ಅನುಭವವು ವಿಶೇಷವಾಗಿ ಭಾಸವಾಗುವದು ಸ್ವಾಭಾವಿಕವಾಗಿದೆ. ಇಂಥ ವಿಸ್ತೃತವಾದ ಚಳವಳಿಯನ್ನೆಬ್ಬಿಸುವ ಯೋಜನೆಯಲ್ಲಿಯಂತೂ ದುಡ್ಡಿಲ್ಲದೆ ಗತ್ಯಂತರವಿಲ್ಲೆಂಬುವದು ನಿಜವು. ಇದಕ್ಕೊಂದು ಉಪಾಯವುಂಟು. ವರ್ಷ ಕ್ಕೊಂದು ರುಪಾಯಿ ಕೊಡುವವನು ಏಕೀಕರಣಸಂಘದ ಸಭಾಸದನೆಂದು ತಿಳಿಯುತಕ್ಕದ್ದು. ವರ್ಷಕ್ಕೊಂದು ರುಪಾಯಿಯೆಂದರೆ ಯಾರಿಗೂ ಭಾರವಾಗು ವಂತಿಲ್ಲ. ಇಂಥ ಸಭಾಸದನು ಒಂದು ಊರಿಗೆ ಒಬ್ಬನೇ ಹೊರಟರೂ ತಾಲೂ

ಶಿಗೆ ನೂರು ಜನರಾಗುವರು. ಒಂದು ಜಿಲ್ಹೆಗೆ ಸರಾಸರಿ ಸಾವಿರ ಜನರಾಗುವರು. ಪ್ರತಿಯೊಂದು ಜಿಲ್ಹೆಯಿಂದ ಪ್ರತಿವರ್ಷ ಸಂಘಕ್ಕೆ ಒಂದು ಸಾವಿರ ರು. ಉತ್ಪನ್ನವು ದೊರೆತಂತಾಗುವದು. ಕರ್ನಾಟಕದಲ್ಲಿ ಹತ್ತು ಜಿಲ್ಹೆಗಳು ಬರುವದರಿಂದ ಸಂಘದ ವರ್ಷದ ಉತ್ಪನ್ನವು ಹತ್ತು ಸಾವಿರ ರು. ಆಗುವದು. ಇದರಲ್ಲಿ ಐದು ಸಾವಿರ ರು. ಕೈಗೆ ಬಂದರೂ ಸಂಘದ ಕಾರ್ಯವು ನಿರ್ವಿಘ್ನದಿಂದ ಸಾಗುವದು. ಇದರ ಹೊರ್ತು ಸಂಘದ ಸ್ತುತ್ಯವಾದ ಕಾರ್ಯವನ್ನು ನೋಡಿ ಉದಾರ ಬುದ್ಧಿಯಿಂದ ಹೆಚ್ಚು ಸಹಾಯವನ್ನು ಮಾಡುವ ಮಹನೀಯರು ಕರ್ನಾಟಕದಲ್ಲಿ ಹೊರಡಬಹುದು. ಇವು ಗಣಿತ ಶಾಸ್ತ್ರದ ಅಂಕಿಗಳೆಂದು ತಿಳಿದು ದುಡ್ಡಿನ ಬಗ್ಗೆ ಯಾರೂ ಭೀತಿಪಡುವ ಕಾರಣವಿಲ್ಲ. ಹುರುಪಿನಿಂದ ಪ್ರಯತ್ನಪಟ್ಟರೆ ಈ ಅಂದಾಜಿಗಿಂತ ಹೆಚ್ಚು ಹಣವು ದೊರೆಯಬಹುದು. ದುಡ್ಡಿನ ವ್ಯವಸ್ಥೆಯಾದ ಮೇಲೆ ಇನ್ನೇತರ ಕೊರತೆ? ಹುರುಪಿನ ಕೊರತೆಯಾಗದಿದ್ದರೆ ತೀರಿತು.

**(೭) ಗಂಭೀರ ಗರ್ಜನೆಯು:**—ಲಷ್ಕರೀ ಖಾತೆಯಲ್ಲಿ ಮುಖ್ಯಸ್ಥನು ಸೂಚನೆಯನ್ನು ಕೊಟ್ಟಕೂಡಲೆ ಹೇಗೆ ಚಲನವಲನಗಳು ನಡೆಯುತ್ತವೆಯೋ, ಹಾಗೆಯೇ ಕರ್ನಾಟಕ ವೃತ್ತಪತ್ರಗಳೂ, ಮಾಸಿಕ ಪುಸ್ತಕಗಳೂ, ಕರ್ನಾಟಕ ರಾಷ್ಟ್ರೀಯ ಸಭೆಯ ಶುಭ ಮುಹೂರ್ತದ ಸೂಚನೆಯನ್ನೇ ಗ್ರಹಿಸಿ ಇನ್ನು ಮೇಲೆ ಈ ವಿಷಯದ ಗರ್ಜನೆಯನ್ನು ಎಬ್ಬಿಸಲಿಕ್ಕೆ ಪ್ರಾರಂಭಿಸಬೇಕು. ಪ್ರತಿಸಂಚಿಕೆಯಲ್ಲಿ (೧ ಕಾಲಮ್) ತಪ್ಪದೆ ಈ ವಿಷಯಕ್ಕಾಗಿ ಕಾದಿಡುವ ಸಂಕಲ್ಪವನ್ನು ಮಾಡಬೇಕು. ಕರ್ನಾಟಕ ಏಕೀಕರಣ ಸಂಘವು ಸ್ಥಾಪಿಸಲ್ಪಟ್ಟು "ಸಂಯುಕ್ತ ಕರ್ನಾಟಕ" ಎಂಬ ವಾರ ಪತ್ರವು ಹೊರಟರಂತೂ ಈ ವಿಷಯದ ಗಂಭೀರ ಗರ್ಜನೆಯು ಕೇಳಬರಲಿಕ್ಕೆ ಆಸ್ಪದವಾಗುವದು. ಅಲ್ಲಿಯ ವರೆಗೆ ಈಗಿರುವ ವೃತ್ತಪತ್ರಗಳು ಕೆಲಸವನ್ನು ಸಾಗಿಸಿದರೆ ಉತ್ತಮವು. ಕರ್ನಾಟಕ ಪತ್ರಕಾರರಿಗೂ ಈ ವಿಷಯದಲ್ಲಿ ಕರ್ತವ್ಯವಿರುವದೆಂಬದನ್ನು ಮರೆಯಲಾಗದು. ಕರ್ನಾಟಕದಲ್ಲಿ ಏಕೀಕರಣದ ಬಗ್ಗೆ ಏನು ನಡೆದದೆಂಬದನ್ನು ಸುಶಿಕ್ಷಿತರಿಗೆ ಮೊದಲು ತಿಳಿಸುವ ಕಾರ್ಯವು ವೃತ್ತಪತ್ರಗಳಿಂದಾದರೆ, ಎಷ್ಟೋ ಕಾರ್ಯವಾಗುವದು. ಏಕೀಕರಣ ಸಂಘವು ಸ್ವಯಂಸೇವಕರನ್ನು ಸಿದ್ಧಪಡಿಸಿ ಪ್ರತಿಯೊಂದು ಹಳ್ಳಿಗೂ ಈ ಗರ್ಜಸೆಯನ್ನು ಮುಟ್ಟಿಸಲಿಕ್ಕೆ ಹಿಂಜರಿಯಲಿಕ್ಕಿಲ್ಲ. **ಆದ್ದರಿಂದ ಕನ್ನಡಿಗರೇ! ಜಾಗ್ರತರಾಗಿರಿ! ನಿಮ್ಮ ದುಂದುಭಿಯ ಧ್ವನಿ**

**ಯಿಂದ ಕವಿಗಳು ಗಡಚಿಕ್ಕುವಂತೆ ಮಾಡಿರಿ!! ಒಮ್ಮೆ ಏಳಿರಿ ನೋಡುವಾ!!!**

(೮) **ಕೊನೆಯ ಉದ್ಗಾರಗಳು:**—ಈ ಚಳವಳಿಯು ಶುದ್ಧವಾದದ್ದೂ, ಪವಿತ್ರವಾದದ್ದೂ, ಇದೆ. ಇದರಲ್ಲಿ ಎರಡನೆಯವರ ದ್ವೇಷ ಮಾಡಬೇಕೆಂಬ ಭಾವನೆಯು ಇರುವದಿಲ್ಲ. ಕರ್ನಾಟಕಕ್ಕೆ ತನ್ನದೊಂದು ಸ್ವತಂತ್ರ ಕಟ್ಟಡವನ್ನು ಕಟ್ಟಬೇಕಾಗಿದೆಯೇ ಹೊರತು ಮರಾಟಿಗರ, ಅಥವಾ ತೆಲಗರ ಕಟ್ಟಡವನ್ನು ಮುರಿಯುವ ಧ್ಯೇಯವಿಲ್ಲ. ಮರಾಟಿಗರೂ, ತೆಲಗರೂ, ನಮ್ಮ ಬಾಂಧವರೇ ಇದ್ದು, ನಾವೆಲ್ಲರೂ, ಭರತಖಂಡದ ಉನ್ನತಿಗಾಗಿ ಪ್ರಯತ್ನಿಸಬೇಕಾಗಿದೆ. ಮೊದಲು ನಾವು ಸಮರ್ಥರಾದರೆ, ಇನ್ನೊಬ್ಬರನ್ನು ಸಮರ್ಥಗೊಳಿಸಬಲ್ಲೆವು. ಕ್ರಿಕೆಟ್ ಆಟದಲ್ಲಿ ಬಡಿದತ್ತ ಹೋಗುವ ಚೆಂಡಿನಂತೆ ನಮ್ಮ ಸ್ಥಿತಿಯಾದರೆ, ನಮಗೆ ಸ್ಥೈರ್ಯವು ಹೇಗೆ ಬಂದೀತು? ನಮಗೇ ಸ್ಥೈರ್ಯವಿಲ್ಲದಿರಲು, ಇನ್ನೊಬ್ಬರಿಗೆ ಧೈರ್ಯವನ್ನು ಹೇಗೆ ಕೊಡಬಲ್ಲೆವು? ಈ ವಿಚಾರದಿಂದಲೇ ಈ ಚಳವಳಿಯನ್ನು ಪ್ರಾರಂಭಿಸತಕ್ಕದ್ದು. ಹಾಗು ಭರತಖಂಡದ ಉನ್ನತಿಗಾಗಿ ನಡೆದಿರುವ ಮುಖ್ಯ ಚಳವಳಿಗೆ ನಮ್ಮ ಚಳವಳಿಯಿಂದ ಅಡ್ಡಿಯಾಗದಂತೆ ಎಚ್ಚರಪಡತಕ್ಕದ್ದು. ಇಷ್ಟು ಶುದ್ಧಾಂತಕರುಣದಿಂದ ನಾವು ಸಾಗಿದರೆ, ದೇವರು ನಿಶ್ಚಯವಾಗಿ ಯಶಸ್ಸನ್ನು ಕೊಡುವನು. **ಜಯಾಪಜಯಗಳ ಕಡೆಗೆ ಲಕ್ಷವನ್ನಿಡದೆ, ಕರ್ತವ್ಯಕರ್ಮದ ಕಡೆಗೆ ಲಕ್ಷವನ್ನಿಡಬೇಕು. ಅದರಲ್ಲಿಯೇ ಸಂತೋಷವನ್ನೂ, ಧನ್ಯತೆಯನ್ನೂ ಭಾವಿಸಬೇಕು-**

**" ಕರ್ನಾಟಕಕ್ಕೆ ಗೆಲವಿರಲಿ. "**

---

# ಇಪ್ಪತ್ತನೆಯ ಪ್ರಕರಣ.

## ಪರಿಶಿಷ್ಟಗಳು.

### ನಂಬರ ೧.

### ಸಂಯುಕ್ತ ಕರ್ನಾಟಕದ ಸ್ಥಳವರ್ಣನೆಯ ಪಟ್ಟಿಯು.

( ಕಂಸಿನೊಳಗಿನ ಅಕ್ಷರವು ಜಿಲ್ಹೆಯುನ್ನು ಸೂಚಿಸುತ್ತದೆ. )

**ಅ**ಂಕಲಿಗಿ:—( ಬೆ ) ದೊಡ್ಡ ಊರು, ಅಂಕಲಿಗಿ ಮಠವು ಪ್ರಸಿದ್ಧ.

ಅಂಕೋಲಾ:—( ಕಾ ) ತಾಲೂಕಿನ ಸ್ಥಳ, ವ್ಯಾಪಾರ.

ಅಕ್ಕಲಕೋಟೆ:—( ಸಂಸ್ಥಾನ ).

ಅಣ್ಣೀಗೇರಿ:—( ಧಾ ) ದೊಡ್ಡ ಊರು, ೬ ಶಿಲಾಲಿಪಿಗಳಿವೆ.

ಅಥಣಿ:—( ಬೆ ) ತಾಲೂಕಿನ ಸ್ಥಳ, ಪ್ರಸಿದ್ಧ ವ್ಯಾಪಾರಸ್ಥಳ.

ಅನಂತಪುರ:—( ಅ ) ಜಿಲ್ಹೆಯ ಸ್ಥಳ, ವ್ಯಾಪಾರ.

ಅರಭಾವಿ:—( ಬೆ ) ಸರಕಾರಿ ಹೊಲ ( ಫಾರ್ಮ ), ಶ್ರೀದುರದುಂಡೇಶ್ವರಮಠ.

ಅವಿನಾಶಿ:—( ಕೊಯಿ ) ತಾಲೂಕಿನ ಸ್ಥಳ.

**ಆ**ದವಾನಿ:—( ಬ ) ತಾಲೂಕಿನ ಸ್ಥಳ.

ಆನೆಗುಂದಿ:—...ಒಂದು ಸಂಸ್ಥಾನವು.

ಆಲಮನೆ:—( ವಿ ) ಚಿತ್ರಕೊರೆದ ಗುಡಿಗಳಿವೆ.

ಆಲೂರ:—( ಬ ) ತಾಲೂಕಿನ ಸ್ಥಳ.

**ಇ**ಂಡಿ:—( ವಿ ) ತಾಲೂಕಿನ ಸ್ಥಳ.

ಇಳಕಲ್ಲ:—( ವಿ ) ಇಳಕಲ್ಲ ಶೀರೆಗಳು ಪ್ರಸಿದ್ಧ.

**ಉ**ಡಪಿ:—( ಮ ) ವೈಷ್ಣವರ ಪವಿತ್ರವಾದ ಕ್ಷೇತ್ರ.

ಉದಕಮಂಡಲ:—( ನೀ ) ಜಿಲ್ಹೆಯಸ್ಥಳ, ಆರೋಗ್ಯಕರವಾದದ್ದು.

ಉಪ್ಪಿನಂಗಡಿ:—( ಮ ) ವ್ಯಾಪಾರಸ್ಥಳ.

ಉಳವಿ:—( ಕಾ ) ಕ್ಷೇತ್ರಸ್ಥಳ.

ಎಡೂರ:—( ಬೆ ) ವೀರಭದ್ರ ದೇವಸ್ಥಾನ ಪ್ರಸಿದ್ಧ, ( ಕ್ಷೇತ್ರಸ್ಥಳ. )
ಎಳಂದೂರು:—( ಮೈಸೂರು ) ಷಡಕ್ಷರ ಕವಿಯ ಜನ್ಮಸ್ಥಾನ.
ಐನಾಪೂರ:—( ಬೆ ) ದೊಡ್ಡ ಊರು.
ಐಹೊಳೆ:—( ವಿ ) ಚಾಲುಕ್ಯರ ಕಟ್ಟಡಗಳಿವೆ.
ಒಕ್ಕುಂದ:—( ಬೆ ) ಕವಿರಾಜ ಮಾರ್ಗದಲ್ಲಿ ಬಂದ ತಿರುಳಗನ್ನಡಪ್ರದೇಶ.
ಕಂಗುಂದಿ:—( ಉ|| ಅ ) ತಾಲೂಕಿನಸ್ಥಳ.
ಕರ್ಜಗಿ:—( ಧಾ ) ತಾಲೂಕಿನಸ್ಥಳ.
ಕದರೆ:—( ಮ ) ದೇವಸ್ಥಾನಗಳು ಪ್ರಸಿದ್ಧ.
ಕಲಘಟಗಿ:—( ಧಾ ) ತಾಲೂಕಿನಸ್ಥಳ, ವ್ಯಾಪಾರ.
ಕಲಬುರ್ಗೆ:—( ನಿಜಾಮನರಾಜ್ಯ ) ದೊಡ್ಡ ಊರು. ಬಾಮಿನೀ ಅರಸರ ರಾಜಧಾನಿ ಇತ್ತು.
ಕಲಾದಗಿ:—( ವಿ ) ಮೊದಲು ಜಿಲ್ಹೆಯಸ್ಥಳ. ಈಗ ದೊಡ್ಡ ಊರು.
ಕಲ್ಯಾಣದುರ್ಗ:—( ಅ ) ತಾಲೂಕಿನಸ್ಥಳ.
ಕಲ್ಯಾಣ:( ನಿಜಾಮ ) ಇತಿಹಾಸ ಪ್ರಸಿದ್ಧ ಚಾಲುಕ್ಯರ ರಾಜಧಾನಿ.
ಕಲ್ಲೋಳಿ:—( ಬೆ ) ಶ್ರೀಮಾರುತಿದೇವಸ್ಥಾನ ಪ್ರಸಿದ್ಧ. ಪ್ರತಿವರ್ಷ ಜಾತ್ರೆಯಾಗುತ್ತದೆ. ಪುರಾತನ ಬಸ್ತಿಯುಂಟು.
ಕಳಸ:—( ಮೈಸೂರು ) ಶ್ರೀಶಂಕರಾಚಾರ್ಯರ ಜನ್ಮಸ್ಥಾನ.
ಕಾರ್ಕಳ:—( ಮ ) ತಾಲೂಕಿನಸ್ಥಳ, ಬಸ್ತಿಗಳು ಪ್ರಸಿದ್ಧ.
ಕಾಗವಾಡ:—( ಬೆ ) ಬ್ರಹ್ಮನಾಥ, ಸಟವಾಯಿ ಎಂಬೆರಡು ಪ್ರಸಿದ್ಧಗುಡಿಗಳು.
ಕಾಫು:—( ಮ ) ದೀಪಸ್ತಂಭದಿಂದ ಪ್ರಸಿದ್ಧ.
ಕಾರಂಜಿ:—( ಮ ) ಪವಿತ್ರ ಕ್ಷೇತ್ರಸ್ಥಳ.
ಕಾರವಾರ:—( ಕಾ ) ಜಿಲ್ಹೆಯ ಮುಖ್ಯಸ್ಥಳ, ಪ್ರಸಿದ್ಧ ಬಂದರ.
ಕಾಸರಗೋಡು:—( ಮ ) ತಾಲೂಕಿನಸ್ಥಳ.
ಕಿತ್ತೂರ:—( ಬೆ ) ದೊಡ್ಡ ಊರು, ಇತಿಹಾಸ ಪ್ರಸಿದ್ಧ.
ಕುಂದಾಪುರ:—( ಮ ) ತಾಲೂಕಿನಸ್ಥಳ.
ಕುಮಟಾ:—( ಕಾ ) ತಾಲೂಕಿನಸ್ಥಳ, ಬಂದರ.
ಕುರುಂದವಾಡ:—( ಸಂಸ್ಥಾನ ).

ಕೂಡಲಗಿ:—( ಬ ) ತಾಲೂಕಿನಸ್ಥಳ.
ಕೂನೂರ:—( ನೀ ) ದೊಡ್ಡ ಊರು, ಆರೋಗ್ಯಕರವಾದದ್ದು.
ಕೃಷ್ಣಗಿರಿ:—( ಸೇ ) ತಾಲೂಕಿನಸ್ಥಳ.
ಕೆಂಣ್ಣೂರ:—( ಬೆ ) ದೊಡ್ಡ ಊರು, ಕೆಂಪಯ್ಯಸ್ವಾಮಿಯ ಮಠವು.
ಕೊಪ್ಪಳ:—( ನಿಜಾಮ ) ಪ್ರಾ. ಕೋಪಣನಗರ. ತಿರುಳಗನ್ನಡ ಪ್ರದೇಶ.
ಕೊಳ್ಳೆಗಾಲ:—( ಕೊಯ ) ತಾಲೂಕಿನಸ್ಥಳ.
ಕೋಟ:—( ಮ ) ನರಸಿಂಹದೇವಸ್ಥಾನ ಪ್ರಸಿದ್ಧ.
ಕೋಡ:—( ಧಾ ) ವ್ಯಾಪಾರಸ್ಥಳ.
ಕೋಯಿಮತ್ತೂರ:—( ಕೊ ) ಜಿಲ್ಹೆಯಸ್ಥಳ, ವ್ಯಾಪಾರ ಪ್ರಸಿದ್ಧ. ಕರ್ನಾಟಕದ ದಕ್ಷಿಣಗಡಿಯು.
ಕೋಲಾರ:—( ಮೈಸೂರ ಸಂ ) ಬಂಗಾರದ ಕಣಿಗಳು.
ಖಾನಾಪುರ:—( ಬೆ ) ತಾಲೂಕಿನಸ್ಥಳ.
ಗಂಗೊಳ್ಳಿ:—( ಮ ) ಬಂದರ.
ಗದಗ:—( ಧಾ ) ತಾಲೂಕಿನಸ್ಥಳ, ಪ್ರಾಚೀನ ಪ್ರಸಿದ್ಧ. ( ಕುಮಾರವ್ಯಾಸನ ವಾಸಸ್ಥಾನ ).
ಗಲಗಲಿ:—( ವಿ ) ಕ್ಷೇತ್ರಸ್ಥಳ.
ಗುಂತಕಲ್ಲ:—( ಅ ) ಕೂಡುದಾರಿಯ ಸ್ಟೇಶನ್.
ಗುತ್ತಿ:—( ಅ ) ತಾಲೂಕಿನಸ್ಥಳ, ಬಲವಾದ ದುರ್ಗವದೆ.
ಗುಳೇದಗುಡ್ಡ:—( ವಿ ) ಕುಬ್ಬಸದ ಖಣಗಳು ಪ್ರಸಿದ್ಧ.
ಗೆರಸಪ್ಪೆ:—( ಕಾ ) ರಮಣೀಯವಾದ ತಡಸಲುಂಟು.
ಗೋಕರ್ಣ:—( ಕಾ ) ಕ್ಷೇತ್ರಸ್ಥಳ.
ಗೋಕಾವಿ;—(ಬೆ) ತಾಲೂಕಿನಸ್ಥಳ, ಬಣ್ಣದ ಸಾಮಾನುಗಳು ಪ್ರಸಿದ್ಧ. ಇಲ್ಲಿಂದ ೪ ಮೈಲಿನ ಮೇಲೆ ಘಟಪ್ರಭಾನದಿಯ ತಡಸಲುಂಟು. ಈ ತಡಸಲದ ಹತ್ತರ ನೂಲಿನ ಗಿರಣಿಯುಂಟು.
ಗೋಪಿಶೆಟ್ಟಿಪಾಳ್ಯ:—( ಕೊಯ ) ತಾಲೂಕಿನಸ್ಥಳ.
ಚಂದಗಡ:—( ಬೆ ) ಮಹಾಲಿನ ಮುಖ್ಯಸ್ಥಳ.
ಚಿಕ್ಕೋಡಿ:—( ಬೆ ) ತಾಲೂಕಿನಸ್ಥಳ, ಎಲೆದೋಟಗಳು ಬಹಳ.

**ಚಿಂಚಲಿ:**—( ಬೆ ) ಮಾಯುವ್ವನ ಜಾತ್ರೆಯಾಗುತ್ತದೆ. ದನಗಳ ವ್ಯಾಪಾರಕ್ಕೆ ಪ್ರಸಿದ್ಧ.

**ಜಮಖಂಡಿ:**—( ಸಂಸ್ಥಾನ ).

**ಜೋಲಾರಪೇಟೆ:**—......ರೇಲ್ವೆ ಜಂಕ್ಶನ್ ( ಕೂಡು ದಾರಿಯಸ್ಥಳ ).

**ತಾಳೀಕೋಟೆ:**--( ವಿ ) ಇತಿಹಾಸ ಪ್ರಸಿದ್ಧ ಸ್ಥಳ. ( ಕನ್ನಡಿಗರ ಸಾಮ್ರಾಜ್ಯವು ಮಣ್ಣು ಪಾಲಾಯಿತು ).

ತೇರದಾಳ:—( ಸಾಂಗಲಿ ಸಂ ) ತಾಲೂಕಿನಸ್ಥಳ. ವ್ಯಾಪಾರ ಪ್ರಸಿದ್ಧ.

**ದೇವರಗುಡ್ಡ:**—( ಧಾ ) ಮೈಲಾರಲಿಂಗ ದೇವಸ್ಥಾನ ಪ್ರಸಿದ್ಧ.

ದೇವಿಹೊಸೂರ:—( ಧಾ ) ಒಕ್ಕಲತನದ ಶಾಲೆಯದೆ.

**ಧರ್ಮಪುರಿ:**—( ಸೇ ) ತಾಲೂಕಿನಸ್ಥಳ.

ಧರ್ಮವರ:—( ಅ ) ತಾಲೂಕಿನಸ್ಥಳ.

ಧರ್ಮಸ್ಥಳ:—( ಮ ) ದೇವಸ್ಥಾನಗಳು ಪ್ರಸಿದ್ಧ.

**ಧಾರವಾಡ:**—( ಧಾ ) ಜಿಲ್ಹೆಯ ಮುಖ್ಯಸ್ಥಳ.

**ನಂದಗಡ:**—( ಬೆ ) ಪ್ರಸಿದ್ಧ ವ್ಯಾಪಾರಸ್ಥಳ.

ನರಗುಂದ:—( ಧಾ ) ಮಹಾಲಿನ ಮುಖ್ಯಸ್ಥಳ. ವೆಂಕಟೇಶ ದೇವಸ್ಥಾನ.

ನವಲಗುಂದ:—( ಧಾ ) ತಾಲೂಕಿನಸ್ಥಳ. ವ್ಯಾಪಾರ ಪ್ರಸಿದ್ಧ.

ನರಸೋಬನವಾಡಿ:—( ಕೊಲ್ಹಾಪುರ ಸಂ. ) ಪ್ರಸಿದ್ಧ ದತ್ತನಕ್ಷೇತ್ರ.

ನಿಪ್ಪಾಣಿ:—( ಬೆ ) ದೊಡ್ಡ ಊರು, ವ್ಯಾಪಾರಸ್ಥಳ.

**ಪಟ್ಟದಕಲ್ಲು:**—( ವಿ ) ಚಾಲುಕ್ಯರ ಕಟ್ಟಡಗಳಿವೆ. ಪ್ರಾಚೀನ ಪ್ರಸಿದ್ಧ.

ಪಡುಬಿದರೆ:—( ಮ ) ವ್ಯಾಪಾರಸ್ಥಳ.

**ಪುಂಗನೂರು:**—( ಚಿ ) ತಾಲೂಕಿನಸ್ಥಳ.

**ಪುತ್ತೂರು:**—( ಮ ) ತಾಲೂಕಿನಸ್ಥಳ.

ಪೆನಗೊಂಡ:—( ಅ ) ತಾಲೂಕಿನಸ್ಥಳ. ೩೧೦೦ ಅಡಿ ಎತ್ತರವಾದ ದುರ್ಗವದೆ.

**ಬಂಕಾಪುರ:**—( ಧಾ ) ತಾಲೂಕಿನಸ್ಥಳ.

ಬನ್ನಟ್ಟಿ:—( ಜಮಖಂಡಿ ಸಂ ) ವ್ಯಾಪಾರ ಪ್ರಸಿದ್ಧ. ಮಗ್ಗಗಳು ಬಹಳ.

ಬನವಾಸಿ:—( ಕಾ ) ಪುರಾತನ ಕಾಲದಲ್ಲಿ ಹೆಸರಾದ ಪಟ್ಟಣ. ಪ್ರಸಿದ್ಧ ದೇವಸ್ಥಾನ.

ಬಳ್ಳಾರಿ:—( ಬ ) ಜಿಲ್ಹೆಯಸ್ಥಳ. ಲಷ್ಕರವಿರುತ್ತದೆ.

ಬಾಗಲಕೋಟೆ:—( ವಿ ) ತಾಲೂಕಿನಸ್ಥಳ, ವ್ಯಾಪಾರಪ್ರಸಿದ್ಧ.

ಬಾಗೇವಾಡಿ:—( ವಿ ) ತಾಲೂಕಿನಸ್ಥಳ, ಶ್ರೀಬಸವೇಶ್ವರನ ಜನ್ಮಸ್ಥಾನ.

ಬಾದಾಮಿ:—( ವಿ ) ತಾಲೂಕಿನಸ್ಥಳ, ಶ್ರೀಬನಶಂಕರಿ, ಮಹಾಕೂಟಗಳು ಪ್ರಸಿದ್ಧ, ( ಚಲುಕ್ಯರ ರಾಜಧಾನಿ ).

ಬ್ಯಾಡಿಗಿ:—( ಧಾ ) ಪ್ರಸಿದ್ಧ ವ್ಯಾಪಾರಸ್ಥಳ.

ಬೀದರ:—( ನಿಜಾಮನ ರಾಜ್ಯ ) ಇತಿಹಾಸ ಪ್ರಸಿದ್ಧಸ್ಥಳ.

ಬೀಳಗಿ:—( ವಿ ) ಪುರಾತನ ಗುಡಿಗಳು, ಪೇಠೆಯು ಸ್ಥಳ.

ಬೆಂಗಳೂರು:—( ಮೈಸೂರ ಸಂ. ) ದೊಡ್ಡ ಊರು. ನೋಡತಕ್ಕ ಸ್ಥಳವು.

ಬೆಳಗಾಂವಿ:—( ಬೆ ) ಜಿಲ್ಹೆಯು ಸ್ಥಳ, ಲಷ್ಕರವಿರುತ್ತದೆ. ೯ ಮೈಲಿನ ಮೇಲೆ ವೈಜನಾಥನ ಗುಡ್ಡವದೆ.

ಬೇಲೂರ:—(ಮೈಸೂರ ಸಂ.) ಚನ್ನಕೇಶವನ ಗುಡಿ, ಶಿಲಾವಿಗ್ರಹಗಳು ಪ್ರಸಿದ್ಧ.

ಬೈಲಹೊಂಗಲ:—( ಬೆ ) ತಾಲೂಕಿನ ಸ್ಥಳ, ಅರಳೆಯ ಗಿರಣಿಗಳಿವೆ.

ಭವಾನಿ:—( ಕೊಯಿ ) ತಾಲೂಕಿನ ಸ್ಥಳ.

ಮಂಗಳೂರ:—( ಮ ) ಜಿಲ್ಹೆಯು ಸ್ಥಳ, ಬಂದರ, ಹಂಚು ಪ್ರಸಿದ್ಧ, ( ಮಂಗಲಾದೇವಿಯು ಗುಡಿ ).

ಮಡಕಶಿರ:—( ಅ ) ತಾಲೂಕಿನ ಸ್ಥಳ.

ಮಡಿಕೇರಿ:—( ಕೊಡಗ ) ಮುಖ್ಯಪಟ್ಟಣ.

ಮದನಪಲ್ಲಿ:—( ಚಿ ) ತಾಲೂಕಿನ ಸ್ಥಳ.

ಮಲ್ಪೆಯು:—( ಮ ) ಬಂದರ.

ಮಹಾಲಿಂಗಪುರ:—( ಮುಧೋಳ ಸಂ ) ದೊಡ್ಡ ಊರು. ವ್ಯಾಪಾರ ಪ್ರಸಿದ್ಧ.

ಮಳಖೇಡ:—( ನಿಜಾಮನ ರಾಜ್ಯ ) ರಾಷ್ಟ್ರಕೂಟ ಅರಸರ ರಾಜಧಾನಿ ಇತ್ತು.

ಮಿರಜಿ:—( ಸಂಸ್ಥಾನ ). ವಾಲನೆಸ್‌ನ ಪ್ರಸಿದ್ಧ ದವಾಖಾನೆಯದೆ.

ಮುಂಡಗೋಡ:—( ಕಾ ) ಮಹಾಲಿನ ಮುಖ್ಯಸ್ಥಳ.

ಮುಂಡರಗಿ:—( ಧಾ ) ಮಹಾಲಿನ ಮುಖ್ಯಸ್ಥಳ.

ಮುದಗಲ್ಲು:( ನಿಜಾಮನ ರಾಜ್ಯ ) ಇತಿಹಾಸಪ್ರಸಿದ್ಧ ಸ್ಥಳ.

ಮುಧೋಳ:—( ಸಂಸಾನ ) ರನ್ನ ಕವಿಯು ಜನ್ಮಸ್ಥಾನ.

ಮುರಗೋಡ:—( ಬೆ ) ಮಹಾಲಿನ ಮುಖ್ಯಸ್ಥಳ. ಚಿದಂಬರದೀಕ್ಷಿತರ ಮಠವದೆ.

ಮೂಡಬಿದರೆ:—( ಮ ) ಬಸ್ತಿಗಳ ನಿಮಿತ್ತವಾಗಿ ಪ್ರಸಿದ್ಧ ( ಒಂದು ಬಸ್ತಿಯಲ್ಲಿ ೧೦೦೦ ಕಂಬಗಳವೆ ).

ಮೂಡಲಗಿ:—( ಬೆ ) ದೊಡ್ಡ ಊರು. ದನಗಳ ವ್ಯಾಪಾರ ಪ್ರಸಿದ್ಧ.

ಮೇಡಲೇರಿ:—( ಧಾ ) ಖರ್ಬೂಜಿಯ ಹಣ್ಣು ಪ್ರಸಿದ್ಧ.

ಯಮನೂರ:—( ಧಾ ) ಪ್ರತಿವರ್ಷ ಪೀರನ ದೊಡ್ಡ ಜಾತ್ರೆಯಾಗುತ್ತದೆ.

ಯಲ್ಲಮ್ಮನ ಗುಡ್ಡ:—( ಬೆ ) ಪ್ರಸಿದ್ಧ ದೇವಸ್ಥಾನ. ಪ್ರತಿವರ್ಷ ೨ ಸಾರೆ ಜಾತ್ರೆಯಾಗುತ್ತದೆ.

ಯಲ್ಲಾಪುರ:—( ಕಾ ) ತಾಲೂಕಿನ ಸ್ಥಳ.

ರಬಕವಿ:—( ಸಾಂಗಲಿ ಸಂ ) ವ್ಯಾಪಾರಸ್ಥಳ.

ರಾಣಿಬೆನ್ನೂರ:—( ಧಾ ) ತಾಲೂಕಿನ ಸ್ಥಳ.

ರಾಮದುರ್ಗ:—( ಸಂಸ್ಥಾನ )

ರಾಯಚೂರ:—( ನಿಜಾಮನ ರಾಜ್ಯ ) ವ್ಯಾಪಾರಸ್ಥಳ.

ರಾಯದುರ್ಗ:—( ಅ ) ತಾಲೂಕಿನ ಸ್ಥಳ.

ಲಕ್ಕುಂಡಿ:—( ಧಾ ) ೫೦ ದೇವಾಲಯಗಳೂ, ೩೫ ಶಿಲಾಲಿಪಿಗಳೂ ಅವೆ.

ಲಕ್ಷ್ಮೇಶ್ವರ:—( ಮಿರಜ ಸಂ. ) ಆದಿಪಂಪ ಕವಿಯ ವಾಸಸ್ಥಾನವು.

ವಿಜಾಪುರ:—( ವಿ ) ಜಿಲ್ಹೆಯ ಸ್ಥಳ. ಇತಿಹಾಸಪ್ರಸಿದ್ಧ. ನೋಡತಕ್ಕಂಥ ಕಟ್ಟಡಗಳುಂಟು. ಅಭಿನವ ಪಂಪಕವಿಯ ವಾಸಸ್ಥಾನ.

ವೀರರಾಜಪೇಟೆ:—( ಕೊಡ ) ದೊಡ್ಡ ಊರು.

ವೇಣೂರ:—( ಮ ) ಬಸ್ತಿಗಳ ನಿಮಿತ್ತವಾಗಿ ಪ್ರಸಿದ್ಧ.

ಶ್ರವಣಬೆಳಗುಳ:—( ಮೈಸೂರ ಸಂ. ) ಶ್ರೀಗೋಮಟೇಶ್ವರನ ಭವ್ಯವಾದ ಮೂರ್ತಿ.

ಶಿಗ್ಗಾವಿ:—( ಧಾ ) ವ್ಯಾಪಾರಪ್ರಸಿದ್ಧ. ( ಬಂಕಾಪುರ ತಾಲೂಕಿನ ಕಚೇರಿಯು ಇಲ್ಲಿರುತ್ತದೆ. )

ಶಿರಗುಪ್ಪಿ:—( ಬ ) ತಾಲೂಕಿನ ಸ್ಥಳ.

ಶಿರಹಟ್ಟಿ:—( ಸಾಂಗಲಿ ಸಂ. ) ತಾಲೂಕಿನ ಸ್ಥಳ.

ಶಿವರೂಪ್ಯ:—( ಮ ) ಶ್ರೀಮಧ್ವಾಚಾರ್ಯರ ಜನ್ಮಸ್ಥಾನ.

ಶ್ರೀರಂಗಪಟ್ಟಣ:—( ಮೈಸೂರ ಸಂ. ) ಟೀಪುವಿನ ರಾಜಧಾನಿ ಇತ್ತು.
ಶ್ರಿಂಗೇರಿ:—( ಮೈಸೂರ ಸಂ. ) ಶ್ರೀಶಂಕರಾಚಾರ್ಯರ ಮುಖ್ಯಮಠವು.
ಶೂರ್ಪಾಲಿ:—( ಬೆ ) ಕ್ಷೇತ್ರಸ್ಥಳ. ( ನರಸಿಂಹ ದೇವಸ್ಥಾನ ).
**ಸಂಕೇಶ್ವರ**:—( ಬೆ ) ವ್ಯಾಪಾರಸ್ಥಳ. ಶ್ರೀಶಂಕರಾಚಾರ್ಯರ ಮಠವಿರುತ್ತದೆ.
ಸವದತ್ತಿ:—( ಬೆ ) ತಾಲೂಕಿನ ಸ್ಥಳ. ರಟ್ಟ ಅರಸರ ರಾಜಧಾನಿ.
ಸವಣೂರ:—( ಸಂಸ್ಥಾನ ) ಎಲೆದೋಟಗಳು ಬಹಳ.
ಸ್ವಾದಿ:—( ಕಾ ) ವಾದಿರಾಜ ಸ್ವಾಮಿಗಳ ವೃಂದಾವನ.
ಸಿದ್ದಾಪುರ:—(ಕಾ) ತಾಲೂಕಿನ ಸ್ಥಳ. ಅಡಿಕೆ, ಯಾಲಕ್ಕಿ ಕೈಗಾರಿಕೆಯು ಒಡವೆ.
ಸಿಂದಿಗಿ:—( ವಿ ) ತಾಲೂಕಿನ ಸ್ಥಳ.
ಸಿರಸಿ:—( ಕಾ ) ತಾಲೂಕಿನ ಸ್ಥಳ. ಅಡಿಕೆ, ಯಾಲಕ್ಕಿ, ಕೈಗಾರಿಕೆಯು ಒಡವೆ.
ಸುಬ್ರಹ್ಮಣ್ಯ:—( ಮ ) ದೇವಸ್ಥಾನಗಳ ನಿಮಿತ್ತವಾಗಿ ಪ್ರಸಿದ್ಧ.
ಸುರಪುರ:—( ನಿ. ರಾ. ) ತಾಲೂಕಿನ ಸ್ಥಳ, ಲಕ್ಷ್ಮೀಶಕವಿಯ ವಾಸಸ್ಥಾನವೆಂದು ವಾದವದೆ.
ಸೊಗಲ:—( ಬೆ ) ರಮಣೀಯವಾದ ಸಣ್ಣ ತಡಸಲುಂಟು.
ಸೊಂಡೂರ:—( ಸಂಸ್ಥಾನ ) ಕಾರ್ತಿಕಸ್ವಾಮಿಯ ದೇವಸ್ಥಾನ.
ಸೊಲ್ಲಾಪುರ:—( ಸೊ ) ಜಿಲ್ಹೆಯ ಸ್ಥಳ, ನೂಲಿನ ಗಿರಣಿಗಳು.
**ಹಂಗಾರಕಟ್ಟೆ**:—( ಮ ) ಬಂದರ.
ಹಂಪಿ:—( ಬ ) ವಿಜಯನಗರ ಅರಸರ ರಾಜಧಾನಿ ಇತ್ತು. ಕ್ಷೇತ್ರವದೆ. ಪ್ರಸಿದ್ಧ ಕಟ್ಟಡಗಳು.
ಹರಪನಹಳ್ಳಿ:—( ಬ ) ತಾಲೂಕಿನ ಸ್ಥಳ.
ಹರಿಹರ:—( ಮೈಸೂರ ಸಂ. ) ತುಂಗಭದ್ರಾನದಿಯ ದಂಡೆಯ ಮೇಲೆ ಕ್ಷೇತ್ರ.
ಹಲಸಿಗಿ:—( ಬೆ ) ಕದಂಬ ಅರಸರ ರಾಜಧಾನಿ ಇತ್ತು.
ಹಲ್ಯಾಳ—:( ಕಾ ) ತಾಲೂಕಿನ ಸ್ಥಳ. ಇಮಾರತಿ ಕಟ್ಟಿಗೆಯ ವ್ಯಾಪಾರ.
ಹಳೇಬೀಡು:—( ಮೈ. ಸಂ. ) ಬಲ್ಲಾಳ ಅರಸರ ರಾಜಧಾನಿ ಇತ್ತು. ಪ್ರಸಿದ್ಧ ಕಟ್ಟಡಗಳು.
ಹಾನಗಲ್ಲು:—( ಧಾ ) ತಾಲೂಕಿನ ಸ್ಥಳ ( ವಿರಾಟರಾಜನ ರಾಜಧಾನಿ ).
ಹಾವೇರಿ:—( ಧಾ ) ತಾಲೂಕಿನ ಸ್ಥಳ.

...ಂಡಲಗಿ:—(ಬೆಳಗಾಂವಿಯ ಹತ್ತರ) ಸೆಂಟ್ರಲ್ ಜೇಲ.
...ಂದೂಪುರ:—(ಅ) ತಾಲೂಕಿನ ಸ್ಥಳ.
...ುಕ್ಕೇರಿ:—(ಬೆ) ತಾಲೂಕಿನ ಸ್ಥಳ. ಗುಮಟಗಳೂ ಕಾರಂಜಿಗಳೂ ರಮಣೀಯವಾಗಿವೆ.
...ುಟಗಿ:—(ಸೊ) ಕೂಡುದಾರಿಯ ಸ್ಟೇಶನ್.
...ುನಗುಂದ:—(ವಿ) ತಾಲೂಕಿನ ಸ್ಥಳ.
...ುಬ್ಬಳ್ಳಿ:—(ಧಾ) ತಾಲೂಕಿನ ಸ್ಥಳ. ನೇಯುವ ಗಿರಣಿಗಳೂ, ರೇಲ್ವೆ ವರ್ಕಶಾಪ್‌ವೂ ಉಂಟು.
...ೂವಿನಹಡಲಗಿ:—(ಬ) ತಾಲೂಕಿನ ಸ್ಥಳ.
ಹೊಸಪೇಟೆ:—(ಬ) ತಾಲೂಕಿನ ಸ್ಥಳ. ಹಂಪಿಗೆ ಹೋಗುವ ಸ್ಟೇಶನ್.
ಹೊನ್ನಾವರ:—(ಕಾ) ತಾಲೂಕಿನ ಸ್ಥಳ.
ಹೊಸೂರ:—(ಸೇ) ತಾಲೂಕಿನ ಸ್ಥಳ. ಸಬ್‌ಕಲೆಕ್ಟರರ ನಿವಾಸಸ್ಥಾನ.

---

## ನಂಬರ ೨.

## ಧಾರವಾಡ, ಮೊದಲನೆಯ ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾದ ದಿವಾಣಬಹಾದ್ದೂರ ವ್ಹಿ. ಪಿ. ಮಾಧವರಾಯರ ಭಾಷಣದ ಸಾರಾಂಶವು. (ಮೇ ೧೯೭೦).

..................ಹೋದ ಖಾನೇಸುಮಾರಿಯ ಮೇಲಿಂದ, ಕನ್ನಡ ಭಾಷೆ ಮಾತಾಡುವವರ ಸಂಖ್ಯೆಯು ಆಗ ಒಂದು ಕೋಟಿ ಐದು ಲಕ್ಷ ಇತ್ತೆಂದು ಗೊತ್ತಾಗುತ್ತದೆ. ಅವರು ಐದು ಭಿನ್ನ ಭಿನ್ನ ಅಧಿಳಿತಕ್ಕೆ ಒಳಪಟ್ಟಿರುವರು. ಸುಮಾರು ೩೦ ಲಕ್ಷಕ್ಕಿಂತ ಹೆಚ್ಚು ಜನರು ಮುಂಬಯಿ ಇಲಾಖೆಯಲ್ಲಿ ಇರುವರು. ಮೈಸೂರಿನಲ್ಲಿ ೪೦ ಲಕ್ಷ ಜನರು; ಮದ್ರಾಸ ಇಲಾಖೆಯಲ್ಲಿಯೂ ಹೈದರಾಬಾದಿನಲ್ಲಿಯೂ ಕೂಡಿ ೩೦ ಲಕ್ಷ; ಉಳಿದವರು ಕೊಡಗು ಪ್ರಾಂತದಲ್ಲಿ ಇರುವರು. ಅಂದರೆ ಒಟ್ಟು ಸುಮಾರು ೪೫ ಲಕ್ಷ ಜನರು ಬ್ರಿಟಿಶ ಸರಕಾರದ ಪ್ರಜೆಗಳಾಗಿರುರುವರು. ಸುಮಾರು ೪೮ ಲಕ್ಷ ಜನರು ಮೈಸೂರು ಮಹಾರಾಜರ ಪ್ರಜೆಗಳೂ ಸುಮಾರು ೧೫ ಲಕ್ಷ ಜನರು ನಿಜಾಮ ಸರಕಾರದ ಪ್ರಜೆಗಳೂ ಆಗಿರುವರು.

ಮೈಸೂರಪ್ರಾಂತ ಹಾಗು ಅದರ ಹತ್ತರಕ್ಕಿರುವ ಪ್ರದೇಶಗಳಾದ ಕೊಯಿಮುತ್ತೂರ, ಸೇಲಮ್, ಅನಂತಪುರ ಮತ್ತು ಬಳ್ಳಾರಿ ಜಿಲ್ಹೆಗಳ ಮುಖ್ಯ ಭಾಷೆಯು ಕನ್ನಡವು. ಕನ್ನಡಸೀಮೆಯ್ಯ ಮೇರೆಯು ಮುಂದೆ ಉತ್ತರಕ್ಕೆ ನಿಜಾಮು ಇಲಾಖೆಯಲ್ಲಿರುವ ಬೀದರ ಪಟ್ಟಣದ ವರೆಗೆ ಸಾಗಿದೆ. ಅಲ್ಲಿಂದ ಅದು ನೆಟ್ಟಗೆ ಪಶ್ಚಿಮಕ್ಕೆ ಸುಮಾರು ೭೪ನೆಯ ರೇಖಾಂಶದ ವರೆಗೆ ತಿರುಗಿ, ಮುಂದೆ ದಕ್ಷಿಣಕ್ಕಿಳಿದು ಜತ್ತ ಮತ್ತು ಢಪಳಾಪುರ ಸಂಸ್ಥಾನಗಳನ್ನು ಒಳಕೊಂಡಿರುತ್ತದೆ. ಸಾತಾರಾ ಜಿಲ್ಹೆಯ ಆಗ್ನೇಯ ಮೂಲಿಯಲ್ಲಿ ಅಂದರೆ ತಾಸಗಾಂವ ತಾಲೂಕಿನಲ್ಲಿಯೂ, ಕೆಲವು ಮಟ್ಟಿಗೆ ಔಂಧ ಸಂಸ್ಥಾನದಲ್ಲಿಯೂ, ಬೆಳಗಾವಿ ಜಿಲ್ಹೆಯಲ್ಲಿಯೂ ಪಶ್ಚಿಮಕ್ಕೆ ಕೊಲ್ಹಾಪುರ ಪಟ್ಟಣದ ವರೆಗೆ ಸಹ ಕನ್ನಡ ಭಾಷೆಯು ಪ್ರಚಲಿತವಾಗಿದೆ. ಅಲ್ಲಿಂದ, ಕರ್ನಾಟಕದ ಮೇರೆಯ ಈ ಗೆರೆಯು ಪಶ್ಚಿಮ ಘಟ್ಟಗಳ ಗುಂಟ ದಕ್ಷಿಣದ ಕಡೆಗೆ ಹೊನ್ನಾವರದ ವರೆಗೆ ಸಾಗಿ ಸಮುದ್ರಕ್ಕೆ ಕೂಡಿದೆ. ಉತ್ತರ ಕಾನಡಾ ಜಿಲ್ಹೆಯಲ್ಲಿ ತೀರ ದಕ್ಷಿಣದ ಮೂಲಿಯನ್ನು ಬಿಟ್ಟು ಮಿಕ್ಕ ಕಡೆಗೆ ದರಬಾರ ಭಾಷೆಯು ಕನ್ನಡವು. ಕರ್ನಾಟಕದ ಮೇರೆಯ ಈ ಗೆರೆಯು ಆ ಮೇಲೆ ಮೈಸೂರ ಸೀಮೆಗೆ ಕೂಡುತ್ತದೆ. ನೀಲಗಿರಿಯಲ್ಲಿಯೂ ಕನ್ನಡ ಭಾಷೆಯ ಒಳಭೇದಗಳಾಗಿರುವ ಭಾಷೆಗಳನ್ನೇ ಜನರು ಆಡುತ್ತಾರೆ. ಈ ಭಾಷೆಯು ಕನ್ನಡಿಗರಿಂದ ಇತ್ತ ಮಧುರೆಯವರೆಗೂ ಅತ್ತ ಮಧ್ಯಪ್ರಾಂತದವರೆಗೂ ಒಯ್ಯಲ್ಪಟ್ಟಿದೆ.

ಮದ್ರಾಸಪಟ್ಟಣದಲ್ಲಿಯೇ ಆಗಲಿ, ಮುಂಬಯಿಪಟ್ಟಣದಲ್ಲಿಯೇ ಆಗಲಿ, ಕನ್ನಡಿಗರ ಪರಿಚಿತಿಯು ತೀರ ಕಡಿಮೆ ಇರುತ್ತದೆ. ಆ ಪಟ್ಟಣಗಳಲ್ಲಿ ಆಗುವ ಸಭೆಗಳಲ್ಲಿ ಈ ಮಾತಿನ ಪ್ರತೀತಿಯು ಬರುತ್ತದೆ. ಮುಂಬಯಿಯಲ್ಲಿ ಉಪನ್ಯಾಸಗಳು ದೇಶಭಾಷೆಯಲ್ಲಾಗುವದಾದರೆ, ಅವೆಲ್ಲವೂ ಮರಾಠೀ, ಗುಜರಾಥೀ ಭಾಷೆಗಳಲ್ಲಿಯೇ ಆಗುತ್ತವೆ. ಒಮ್ಮೊಮ್ಮೆ ಉರ್ದು ಅಥವಾ ಹಿಂದೀ ಭಾಷೆಗಳಲ್ಲಿ ಕೂಡ ಆಗುತ್ತವೆ. ಮುಂಬಯಿ ಇಲಾಖೆಯ ದಕ್ಷಿಣಭಾಗವೆಲ್ಲವೂ ಕನ್ನಡ ಪ್ರಾಂತವೇ ಆಗಿದ್ದರೂ, ಮುಂಬಯಿಪಟ್ಟಣದಲ್ಲಿ ಆ ಭಾಷೆಯಲ್ಲಿ ಮಾತಾಡುವದೆಂದರೆ, ಯಾವುದೋ ಒಂದು ವಿದೇಶೀಯ ಭಾಷೆಯಲ್ಲಿ ಮಾತಾಡಿದಂತೆಯೇ ಭಾಸವಾಗುತ್ತದೆ. ಮದ್ರಾಸಪಟ್ಟಣದಲ್ಲಿಯೂ ಇದೇ ಸ್ಥಿತಿ. ತಮಿಳು, ತೆಲಗು, ಉರ್ದು ಅಥವಾ ಹಿಂದುಸಾನೀ ಇಲ್ಲವೆ ಮಲಿಯಾಳ ಭಾಷೆಗಳಲ್ಲಿ ಉಪನ್ಯಾ

ಸಗಳಾದರೆ ಕೂಡ ಮದ್ರಾಸದ ಜನರು ಕೇಳಲಿಕ್ಕೆ ಹೋಗುವರು. ಕನ್ನಡ ಭಾಷೆಯಲ್ಲಿ ಆದರೆ ಮಾತ್ರ ಯಾರೂ ಲಕ್ಷವನ್ನೇ ಕೊಡುವದಿಲ್ಲ.

ಹೀಗಾಗುವದು ಕರ್ನಾಟಕರಿಗೆ ಭೂಷಣವೋ? ಕರ್ನಾಟಕವು ಒಂದಾನೊಂದು ಕಾಲಕ್ಕೆ ಗೋದಾವರಿಯ ವರೆಗೆ ಹಬ್ಬಿತ್ತಲ್ಲವೆ? ಪಂಢರಪುರದ ಬಡವೆ ಜನರು ಕನ್ನಡಿಗರೇ ಅಲ್ಲವೆ? ಈಗ ನೋಡಿರಿ ಅವರಿಗೆ ಕನ್ನಡದ ಗಂಧವೇ ಇಲ್ಲ. ಆದರೆ, ಇದರ ತಪ್ಪು ಕರ್ನಾಟಕರದು ಅಲ್ಲವೆಂದು ಇತಿಹಾಸವು ನಮಗೆ ಹೇಳುತ್ತದೆ. ಈಗಿನ ರಾಜಕೀಯ ವಿಭಾಗಗಳಲ್ಲಿ ಕರ್ನಾಟಕವು ಯಾವ ಸ್ಥಲವನ್ನು ಹೊಂದುವದೆಂಬದನ್ನು ನೋಡಿದರೆ, ಪ್ರತಿಯೊಂದು ವಿಭಾಗದಲ್ಲಿಯೂ ಕನ್ನಡಿಗರು ಆಯಾ ವಿಭಾಗಗಳ ತುಟ್ಟತುದಿಯ ಒಂದು ಮೂಲಿಯಲ್ಲಿಯೇ ಇರುವರೆಂಬದು ಗೊತ್ತಾಗುತ್ತದೆ. ಮುಂಬಯಿ ಇಲಾಖೆಯಲ್ಲಿ ಈ ಕನ್ನಡ ಜಿಲ್ಹೆಗಳು ತುಟ್ಟತುದಿಗೆ ದಕ್ಷಿಣದಲ್ಲಿವೆ, ಹೈದರಾಬಾದ ಸಂಸ್ಥಾನದಲ್ಲಿ ಅವು ಪಶ್ಚಿಮತುದಿಗೆ; ಅದೇ ಮೇರೆಗೆ ಬಳ್ಳಾರಿ, ಕೊಯಿಮತ್ತೂರು ಮತ್ತು ಮಂಗಳೂರ ಜಿಲ್ಹೆಗಳು ಮದ್ರಾಸ ಇಲಾಖೆಯ ಮೇರೆಯ ಮೇಲಿರುತ್ತವೆ. ಆದುದರಿಂದ ಆಯಾ ಇಲಾಖೆಗಳ ರಾಜಧಾನಿಗಳಲ್ಲಿರುವ ಸಾರ್ವಜನಿಕ ವಿಚಾರಗಳ ಗಾಳಿಯು ಅವರಿಗೆ ಕಟ್ಟಕಡೆಗೆ ಸೋಂಕಿದರೆ ಆಶ್ಚರ್ಯವೇನು?

ಕರ್ನಾಟಕವು ಅಖಂಡವಾದ ಪ್ರಾಂತವಾಗಲಿಕ್ಕೆ ಮೈಸೂರು ಮತ್ತು ಹೈದರಾಬಾದ ಸಂಸ್ಥಾನಗಳು ಅಡ್ಡಬರುತ್ತವೆಂಬದೇನೊ ನಿಜ. ಆದರೆ ಆ ಸಂಸ್ಥಾನಗಳು ದೇಶೀಯ ಸಂಸ್ಥಾನಗಳೇ ಇರುವದರಿಂದ ಈ ವ್ಯಂಗವು ತುಸುಮಟ್ಟಿಗೆ ಕಡಿಮೆಯಾಗುವದು. ಅವುಗಳನ್ನು ಬಿಟ್ಟರೂ ಕೂಡ ಮಿಕ್ಕುಳಿದ ೪೫ ಲಕ್ಷ ಜನ ಸಂಖ್ಯೆಯು ಭಾವೀ ಸಂಯುಕ್ತ ಹಿಂದುಸ್ಥಾನದಲ್ಲಿ ಪ್ರತ್ಯೇಕವಾದ ಪ್ರಾಂತವಾಗಲಿಕ್ಕೆ ಸಾಕಷ್ಟು ಇರುತ್ತದೆ.

ಕಾಶ್ಮೀರ, ಬಡೋದೆ ಮುಂತಾದ ಸಂಸ್ಥಾನಗಳ ಜನಸಂಖ್ಯೆಯು ಇದಕ್ಕಿಂತ ಕಡಿಮೆ ಇರುವದಿಲ್ಲವೇ? ಆದುದರಿಂದ ಜನಸಂಖ್ಯೆಯು ಸುಮಾರು ೪೫ ಲಕ್ಷವೇ ಇರುವದೇನೋ ಅಂತಹ ಬಗೆಹರಿಯದಂಥ ತೊಂದರೆ ಇರುವದಿಲ್ಲ. ಕೊಡಗುಪ್ರಾಂತದವರು ತಮ್ಮ ಪ್ರಾಂತವನ್ನು ಮದ್ರಾಸ ಇಲಾಖೆಗೆ ಕೂಡಿಸಬೇಕೆಂದು ಕೇಳಹತ್ತಿದ್ದಾರೆ. ಮೊನ್ನೆ ಮೊನ್ನೆ ವ್ಹಾಯಿಸರಾಯ ಸಾಹೇಬರಿಗೆ ಅಲ್ಲಿಯ ಪ್ಲಾಂಟರ ಸಂಘದವರು ಕೊಟ್ಟ ಮಾನಪತ್ರದಲ್ಲಿ ಇದಕ್ಕೆ ವಿರುದ್ಧವಾಗಿ

ನಿರ್ದೇಶವಿರುವದು. ಆದರೆ ಸ್ವತಂತ್ರವಾದದ್ದೊಂದು ಕರ್ನಾಟಕ ಪ್ರಾಂತವನ್ನೇ ಮಾಡಿಬಿಟ್ಟರೆ ಈ ಪರಸ್ಪರ ವಿರುದ್ಧ ವಿಚಾರಗಳೆಲ್ಲವೂ ಹೋಗಿ ಎರಡೂ ಪಕ್ಷದ ವರಿಗೆ ಸಮಾಧಾನವಾಗಬಹುದು. ಯಾಕಂದರೆ ಕರ್ನಾಟಕ ಪ್ರಾಂತವು ಈಗಿನ ಗಿಂತ ದೊಡ್ಡದಾಗುವದಾದರೂ, ಮಿತಿಮೀರಿ ದೊಡ್ಡದು ಆಗುವದಿಲ್ಲ. ಮುಂದೆ ಈ ಬಗೆಯು ಪ್ರಾಂತರಚನೆಯು ಆಗುವದಕ್ಕೆ ಪೂರ್ವಸಿದ್ಧತೆಯೆಂದೋ ಏನೋ ಧಾರವಾಡವು ಈಗಾಗಲೆ ಮುಂಬಯಿ ಇಲಾಖೆಯು ದಕ್ಷಿಣಭಾಗದ ರಾಜಧಾನಿಯಾದಂತೆ ಆಗಿಹೋಗಿದೆ. ಇದರ ಹವೆಯು ಬಲು ಸೊಗಸಾದದ್ದು, ಇಲ್ಲಿ ರಮ್ಯವಾದ ಸುಳಿಗಾಳಿಯು ಬೀಸುತ್ತದೆ; ಇದಲ್ಲದೆ ಧಾರವಾಡವು ಎಲ್ಲ ಕನ್ನಡ ಜಿಲ್ಹೆಗಳಿಗೆ ಮಧ್ಯವರ್ತಿಯಾದ ನಗರವಾಗಿದೆ ಮದ್ರಾಸ, ಮುಂಬಯಿ, ಹೈದರಾಬಾದ ಈ ಮೂರು ಊರುಗಳಿಗೂ ಈ ಊರಿಗೂ ನಡುವೆ ಹೊಗೆಬಂಡಿಯ ಮಾರ್ಗಗಳುಂಟು. ಮೈಸೂರಿನವರು ಹಾಕಬೇಕೆಂದಿದ್ದ ಲೋಹಮಾರ್ಗವು ಸಿದ್ಧವಾದಕೂಡಲೆ ಧಾರವಾಡದಿಂದ ಕೊಡಗು ಮತ್ತು ಸೇಲಮ್‌ಗಳಿಗೆ ಹೋಗಲಿಕ್ಕೂ ಸಮೀಪದ ಮಾರ್ಗಗಳಾಗುತ್ತವೆ. ಇಷ್ಟೆಲ್ಲ ಆಗಬೇಕಾದರೆ, ಕೆಲವು ಜಿಲ್ಹೆಗಳು ಒಂದು ಇಲಾಖೆಯಿಂದ ಮತ್ತೊಂದು ಇಲಾಖೆಗೆ ಸೇರಬೇಕಾಗುತ್ತವೆ. ಆದರೆ ಇಷ್ಟಕ್ಕೆ ಗಾಬರಿಗೊಂಡು ಯಾರೂ ಸ್ವಸ್ಥವಾಗಿ ಕುಳಿತುಕೊಳ್ಳಬಾರದು. ಹಿಂದಕ್ಕೆ ಹೀಗೆ ಬದಲಾದ ಉದಾಹರಣೆಗಳು ಅನೇಕವಾಗಿವೆ. ಹೋದ ೨೦ ವರ್ಷಗಳಲ್ಲಿ ಆಸಾಮುಪ್ರಾಂತವು ಈ ಬಗೆಯಾಗಿ ಎರಡು ಸಾರೆ ಒಂದು ಇಲಾಖೆಯಿಂದ ಮತ್ತೊಂದು ಇಲಾಖೆಗೆ ಸೇರಿಸಲ್ಪಟ್ಟಿತು. ಲಾರ್ಡ ಕರ್ಝನ್ ಸಾಹೇಬರು ಮೊದಲು ಅದನ್ನು ಪೂರ್ವಬಂಗಾಲಕ್ಕೆ ಕೂಡಿಸಿದರು; ಪುನಃ ಅದು ಅಲ್ಲಿಂದ ತೆಗೆಯಲ್ಪಟ್ಟು ಈಗ ಸ್ವತಂತ್ರ ಪ್ರಾಂತವಾಗಿದೆ. ೧೯೦೫ನೇ ಇಸ್ವಿಯಲ್ಲಿ ಕೆಲವು ಹಿಂದೀ ಭಾಷೆಯನ್ನಾಡುವ ಸಂಸ್ಥಾನಗಳನ್ನು ಮಧ್ಯಪ್ರಾಂತಕ್ಕೆ ಕೊಟ್ಟು, ಒಡಿಸಾಭಾಷೆಯನ್ನಾಡುವ ಪ್ರದೇಶಗಳನ್ನು ಆಸಾಮುಕ್ಕೆ ಕೊಟ್ಟರು. ಬಂಗಾಲ ವಿಭಾಗದ ಕೋಲಾಹಲವೇಳಲಿಕ್ಕೆ ಈ ಭಾಷೆಯು ಏಕೀಕರಣವೇ ಮೂಲವಾಗಿತ್ತು. ಆದದರಿಂದ ಮುಂಬಯಿ, ಮದ್ರಾಸ ಇಲಾಖೆಗಳಲ್ಲಿರುವ ಕನ್ನಡಪ್ರದೇಶಗಳನ್ನೂ ಕೊಡಗು ಹಾಗು ಬೇರೆ ಕನ್ನಡಪ್ರದೇಶಗಳನ್ನೂ ಒಟ್ಟುಗೂಡಿಸಿ, ಧಾರವಾಡವನ್ನೇ ರಾಜಧಾನಿಯಾಗಿ ಮಾಡಿ, ಮಡಿಕೇರಿಯನ್ನು ಸರಕಾರದ ಬೇಸಿಗೆಯ ವಾಸಸ್ಥಾನವಾಗಿ ಮಾಡಿ, ಸ್ವತಂತ್ರವಾದ ಬ್ರಿಟಿಶ್ ಕರ್ನಾಟಕವನ್ನೇ ಸಿದ

ಪಡಿಸಲೆತ್ನಿಸುವದೇ ನಾವು ಮಾಡತಕ್ಕ ಮಹಾಕಾರ್ಯಗಳಲ್ಲಿ ಅತ್ಯಂತ ಮಹತ್ವದ ಕಾರ್ಯವು. ಈ ಹೊಸ ಕರ್ನಾಟಕ ಪ್ರಾಂತಕ್ಕೆ ಧಾರವಾಡವು ಕೇಂದ್ರವಾಗಿಯೂ, ಕೋಯಿಮತ್ತೂರು ದಕ್ಷಿಣದ ಮುಖ್ಯ ಪಟ್ಟಣವಾಗಿಯೂ, ಕಾರವಾರ ಮೊದಲಾದ ದಂಡೆಯು ಪಟ್ಟಣಗಳು ಮುಖ್ಯ ಬಂದರಗಳಾಗಿಯೂ ಪರಿಣಮಿಸುವವು. ಈ ಪ್ರಾಂತದ ವಿಸ್ತಾರವಾದರೂ ತೀರ ದೊಡ್ಡದೂ ಅಲ್ಲ, ತೀರ ಸಣ್ಣದೂ ಅಲ್ಲದಂತೆ ಹವಣಿಯಾದದ್ದಾಗುವದು. ಜನರಾದರೂ ತಮ್ಮದೊಂದು ಸ್ವತಂತ್ರ ಪ್ರಾಂತವಾದರೆ ಅದರ ಏಳಿಗೆಯಲ್ಲಿ ವಿಶೇಷ ಮನಸ್ಸು ಹಾಕುವರು.

---

## ನಂಬರ ೩.

## ಮುತ್ತಿನಂಥ ಮಾತುಗಳು.

( ಅಲ್ಲಲ್ಲಿ ಕಂಸಿನೊಳಗೆ ಕಾಣಿಸಿದ ಮಾತುಗಳು ನಮ್ಮವಿರುತ್ತವೆ. )

**೧ ಸಾರ್ವಭೌಮರಾದ ಪಂಚಮಜಾರ್ಜರು:**—ಬಂಗಾಲವನ್ನು ಪುನಃ ಏಕೀಕರಿಸುವದರಲ್ಲಿಯೂ, ಬಿಹಾರ-ಓಡಿಸಾ ಪ್ರಾಂತವನ್ನು ಬೇರೆಮಾಡುವದರಲ್ಲಿಯೂ ಪ್ರಾಂತಿಕ ಚಳವಳಿಗಾರರ ಮುಖ್ಯತತ್ವವನ್ನು ಮಾನ್ಯಮಾಡಿ, ಅದನ್ನೇ ಸಾರಿ ಹೇಳಿದ್ದರಿಂದ ನಾವು ಸಾರ್ವಭೌಮರವರಿಗೆ ಅದೆಷ್ಟು ಕೃತಜ್ಞರಾಗಿದ್ದರೂ ತೀರದು.

**೨ ಗವರ್ನರ ಜನರಲ್‍ರಾಗಿದ್ದ ಲಾರ್ಡ ಹಾರ್ಡಿಂಜರು:**—( **೨೫-೮-೧೧, ಭಾಷಾಂತರಿಸಿದ್ದು** ) ಹೊಸಪ್ರಾಂತದ ಮೇರೆಯು ರಾಜ್ಯದಾಢಳತೆಗೆ ಸೌಲಭ್ಯವುಂಟಾಗುವ ಘಟಕಗಳನ್ನು ಒಳಕೊಂಡಿರಬೇಕು. ಪ್ರಜೆಗಳ ನ್ಯಾಯವಾದ ಆಕಾಂಕ್ಷೆಯನ್ನು ತೃಪ್ತಗೊಳಿಸುತ್ತಿರಬೇಕು. ರಾಜಕೀಯ ದೃಷ್ಟಿಯಿಂದ ವಿಶೇಷ ಉಪಯುಕ್ತವೂ, ಆತುರವೂ ಆಗಿರಬೇಕು. ಬಂಗಾಲವನ್ನು ಏಕೀಕರಿಸುವದಲ್ಲದೆ, ಹಿಂದೀಭಾಷೆಯನ್ನಾಡುವ ಜನರನ್ನು ಬಂಗಾಲದಿಂದ ಬೇರ್ಪಡಿಸಿ ಸ್ವತಂತ್ರ ಆಢಳತೆಯ ಕೆಳಗೆ ತರಬೇಕೆಂದು ನಾವು ಇಚ್ಛಿಸುತ್ತೇವೆ. ಯಾಕಂದರೆ ಬಹುಸಂಖ್ಯಾಕರಾದ ಬಂಗಾಲಿಗಳ ಕೂಡ ಆ ಜನರ ಕೊರಳ ಕಟ್ಟಿದೆ. ಈಗ ಬಿಹಾರದಲ್ಲಿಯೂ ಜಾಗೃತೆಯುಂಟಾಗಿದ್ದು ಬಂಗಾಲದಿಂದ ಬೇರೆಯಾದ ಹೊರ್ತು ತನ್ನ ಉನ್ನತಿಗೆ ಆಸ್ಪದವಿಲ್ಲೆಂಬ ನಂಬಿಗೆಯು ಅಲ್ಲಿ ದೃಢವಾಗಿದೆ. ( ಕರ್ನಾಟಕವು ಈ ನಂಬಿಗೆಯನ್ನು ದೃಢಪಡಿಸಬೇಡವೇ ? )

೩ **ಲಾರ್ಡ ಕರ್ಝನ್‌ರು**:—( ಲಾರ್ಡ ಜನರ ಸಭೆಯಲ್ಲಿ ಭಾಷಣ. ಜೂನ ೧೯೧೨) ಓರಿಯಾ ಜನರ ಹಿತವೆಲ್ಲ ಆಹುತಿಯಾಗುತ್ತ ನಡೆದದೆ. ಆ ಜನರ ಹಿತದ ಕಡೆಗೆ ದುರ್ಲಕ್ಷವಾಗುವದಕ್ಕೆ ಓರಿಯಾ ಜನರು ಚಳವಳಿಗಾರರಿಲ್ಲದಿರುವದೇ ಕಾರಣವು. ( ಇದರಿಂದ ಚಳವಳಿಯ ಮಹತ್ವವನ್ನು ಕನ್ನಡಿಗರು ಕಲಿಯುವರೇನು ! )

೪ **ಜಾನ್ ರೆಡ್‌ಮಂಡರು**:—ಪ್ರಕೃತಿಯು ಸುಸ್ಥಿತಿಯಲ್ಲಿರುವ ಮನುಷ್ಯನು ತನ್ನ ಶರೀರದ ಬಗ್ಗೆ ನಿಶ್ಚಿಂತನಿರುವಂತೆ ಸುಸಂಪನ್ನ ರಾಷ್ಟ್ರವು ತನ್ನ ರಾಷ್ಟ್ರೀಯತ್ವದ ಬಗ್ಗೆ ನಿಶ್ಚಿಂತವಾಗಿರುತ್ತದೆ. ಶರೀರದಲ್ಲಿ ಅವ್ಯವಸ್ಥೆಯಾದಾಗ ಅದನ್ನು ತಿದ್ದಿಕೊಳ್ಳಲು ಪ್ರಕೃತಿಯು ತಾನೆ ಪ್ರಯತ್ನಿಸುವಂತೆ ಒಂದು ರಾಷ್ಟ್ರದ ರಾಷ್ಟ್ರೀಯತ್ವವು ಭಂಗವಾದಾಗ ಅದನ್ನು ಸುವ್ಯವಸ್ಥೆಗೊಳಿಸಲು ಆ ರಾಷ್ಟ್ರವು ಪ್ರಯತ್ನಿಸುವದು ಸ್ವಾಭಾವಿಕವಾಗಿದೆ. ( ಹಾಗಾದರೆ ಏಕೀಕರಣದ ಬಗ್ಗೆ ಕರ್ನಾಟಕದ ಇಚ್ಛೆಯು ನೈಸರ್ಗಿಕವಾಗಲಿಕ್ಕಿಲ್ಲವೇ? )

೫ **ಸರ್ ಜಾನ್ ಸ್ಟ್ರೈಚಿಯವರು**:—ಹಿಂದುಸ್ಥಾನದ ಈಗಿನ ರಾಜಕೀಯ ವಿಭಾಗಗಳು ಸ್ವಾಭಾವಿಕ ಲಕ್ಷಣಗಳಲ್ಲಿ ಒಂದಕ್ಕೂ ಸಂಬಂಧಿಸಿರುವದಿಲ್ಲ.

೬ **ಆ್ಯಕ್ಯನ್‌ಫ್ರಂಟರು**:—ಮನುಷ್ಯಜಾತಿಯ ಲಕ್ಷಣಗಳನ್ನೂ, ಭಾಷೆಯನ್ನೂ ಅನುಲಕ್ಷಿಸಿ ಪ್ರಾಂತಗಳನ್ನು ವಿಭಾಗಿಸಬೇಕು. ಹಿಂದುಸ್ಥಾನದ ನಕ್ಷೆಯನ್ನೇ ಹೊಸದಾಗಿ ರಚಿಸಬೇಕಾಗುವದು. ಪಂಜಾಬೀಪ್ರಾಂತ, ತಮಿಳಪ್ರಾಂತ, ತೆಲಗುಪ್ರಾಂತ ಇತ್ಯಾದಿ ಪ್ರಾಂತಗಳಾಗುವವು. ಇಷ್ಟೇಯೆಂದು ತಿಳಿಯಬಾರದು, ಉದಾಹರಣೆಗಾಗಿ ಇಷ್ಟು ಕೊಟ್ಟದೆ.

೭ **ಶ್ರೀಯುತ ವ್ಹಿ. ಸೂರ್ಯನಾರಾಯಣರಾವ**:—ಒಂದು ಪ್ರಾಂತದ ಅಭ್ಯುದಯಕ್ಕಾಗಿ ಕೆಲವೊಂದು ಮರ್ಯಾದೆಯವರೆಗೆ ಪ್ರಾಂತಿಕ ಅಭಿಮಾನವಿರುವದು ಲೇಸು. ದೇಶಾಭಿಮಾನಕ್ಕೆ ಮುಟ್ಟುವ ಮೊದಲು ಮೆಟ್ಟಾದ ಇದನ್ನು ಬಿಟ್ಟುಬಿಡದೆ ಏರಬೇಕಾಗುವದು.

೮ **ಶ್ರೀಯುತ ಪಟ್ಟಾಭಿಸೀತಾರಾಮಯ್ಯರು**:—ವ್ಯಕ್ತಿ ಹಾಗು ದೇಶ ಇವುಗಳ ನಡುವೆ ಸಮಾಜಗಳಿದ್ದು, ಇವಕ್ಕೆ ರಾಜಕೀಯ ಭಾಷೆಯಲ್ಲಿ ಪ್ರಾಂತಗಳೆನ್ನಬಹುದು. ಇದನ್ನು ಎಲ್ಲರೂ ಒಪ್ಪಿಕೊಳ್ಳಲೇ ಬೇಕು. ಇಂಥ ಪ್ರಾಂತಗಳ ಬೆಳವಣಿಗೆಯಾಗುವದು ಅತ್ಯಾವಶ್ಯಕವು.

**೯ ಆಂಧ್ರಸಭೆಯಲ್ಲಾದ ನಿರ್ಣಯವು:**— ( ಮೇ ೧೯೧೩ ) "ರಾಜ್ಯದಾಢ್ಯತೆಯಲ್ಲಿ ಬಲವು ಬರುವದಕ್ಕೂ ಜನರ ಹಿತಾಭಿವೃದ್ಧಿಯಾಗುವದಕ್ಕೂ ಭಾಷೆಯಂತೆ ಪ್ರಾಂತಗಳನ್ನು ವಿಭಾಗಿಸಬೇಕಾಗಿದೆ" ಎಂದು ಈ ಸಭೆಯ ಅಭಿಪ್ರಾಯವಿರುತ್ತದೆ. ಭಾರತರಾಷ್ಟ್ರೀಯ ಸಭೆಯು ಬೇಡುತ್ತಿರುವ ಹಾಗು ಸರಕಾರಕ್ಕೆ ಮಾನ್ಯವಾದ ಜವಾಬದಾರ ರಾಜ್ಯಪದ್ಧತಿಯನ್ನು ಪ್ರಸ್ಥಾಪಿಸುವ ಮೊದಲು, ಭಾಷೆಯಂತೆ ಪ್ರಾಂತವಿಭಾಗವು ಅತ್ಯಾವಶ್ಯಕವು. ತೆಲಗು ಜಿಲ್ಹೆಗಳನ್ನು ಕೂಡಿಸಿ ಒಂದು ಸ್ವತಂತ್ರಪ್ರಾಂತವನ್ನು ಮಾಡುವ ಬಗ್ಗೆ ಸರಕಾರವನ್ನು ಕೇಳುವ ವಿಷಯದಲ್ಲಿ ಸಾರ್ವಜನಿಕ ಲಕ್ಷವನ್ನು ಕೇಂದ್ರೀಕರಿಸಬೇಕೆಂದು ಈ ಸಭೆಯು ತೆಲಗರನ್ನು ಒತ್ತಾಯಪಡಿಸುತ್ತದೆ. ( ಕನ್ನಡಿಗರ ಸಭೆಯಲ್ಲಿ ಇಂಥ ನಿರ್ಣಯವಾಗಿ ಚಳವಳಿಯು ಪ್ರಾರಂಭವಾಗುವದು ಎಂದು ?)

**೧೦ ರಾಷ್ಟ್ರೀಯ ಸಭೆಯ ಮೇಲೆ ಉರಿಯಾ ಜನರ ಟೀಕೆಯು:**—( ೩೦-೧೨-೧೯೦೩ ರಲ್ಲಾದ ೧೯ನೆಯ ರಾಷ್ಟ್ರೀಯ ಸಭೆಯು ಬಂಗಾಲದ ಇಭ್ಭಾಗದ ವಿಷಯದಲ್ಲಿ ಬಂಗಾಲಿಗಳಿಗೆ ಅನುಕೂಲವಾಗುವಂತೆ ಅಭಿಪ್ರಾಯವನ್ನು ಕೊಟ್ಟದ್ದರಿಂದ ಉರಿಯಾಜನರಿಗೆ ವಿರೋಧವಾಗಲು ಅವರು ರಾಷ್ಟ್ರೀಯ ಸಭೆಯ ಮೇಲೆ ಮಾಡಿದ ಟೀಕೆಯು ) ದೊಡ್ಡವರ ಹಿತದ ಕಡೆಗೆ ಲಕ್ಷವಿಟ್ಟು ಸಣ್ಣವರ ರಾಷ್ಟ್ರೀಯತ್ವವನ್ನು ದುರ್ಲಕ್ಷಿಸುತ್ತಿರುವ ರಾಷ್ಟ್ರೀಯ ಸಭೆಯ ಕೃತ್ಯವು ಅವಿಚಾರತನದ್ದಾಗಿದೆ. ಪ್ರಾತಿನಿಧ್ಯಸ್ವರೂಪವುಳ್ಳದ್ದೆನಿಸುವ ರಾಷ್ಟ್ರೀಯ ಸಭೆಗೆ ಈ ಟೀಕೆಯು ಕಠೋರವೆನಿಸದಿರದು. ( ಉರಿಯಾಜನರ ಪ್ರಾಂತಿಕ ಭಾವನೆಯು ಎಷ್ಟು ಬಲವತ್ತರವಾಗಿರಬೇಕೆಂಬದನ್ನು ವಾಚಕರೇ ಊಹಿಸಲಿ. )

**೧೧ ಹಿಂದುಸ್ಥಾನ ಸರಕಾರದ ಸೆಕ್ರೇಟರಿಯಾಗಿದ್ದ ರೆಸ್ಲಿಯವರ ಪತ್ರವು:**— ( ನಂ. ೩೬೭ಲ. ೩-೧೨-೧೯೦೩, ೧೩ನೆಯ ಪ್ಯಾರಾದಲ್ಲಿ ಬಂದಿರುವ ಮಾತುಗಳು ) ಅನೇಕ ಭಾಷೆಗಳಿಂದ ರಾಜ್ಯದಾಢ್ಯತೆಗುಂಟಾಗುವ ಚಿಂತಾಜನಕ ಸ್ಥಿತಿಯ ಬಗ್ಗೆ ಮದ್ರಾಸ ಸರಕಾರವು ಮೇಲೆ ಮೇಲೆ ತಕರಾರು ಮಾಡಿರುತ್ತದೆ. ಈ ಪರಿಸ್ಥಿತಿಯು ಕೂಡ ಮದ್ರಾಸ 'ಸಿವ್ಹಿಲ್ ಸರ್ವ್ಹಂಟರು, ಹೋರಾಡಬೇಕಾಗಿದೆ. ಒಬ್ಬ ಅಧಿಕಾರಿಯನ್ನು ಒಂದು ಭಾಗದಿಂದ ಎರಡನೆಯಭಾಗಕ್ಕೆ ಬದಲಿಸುವದು ಕಠಿಣ ಕೆಲಸವಾಗಿದೆ. ಸಾರ್ವಜನಿಕ ಹಿತಕ್ಕೂ ಬಾಧೆತಟ್ಟುವದು ನಿಶ್ಚಿತ!

———

## ನಂಬರ ೪.

### ಅಖಿಲಭಾರತ ರಾಷ್ಟ್ರೀಯ ಸಭೆಗೆ ಕಳಿಸಿದ ಅರ್ಜಿಯ ಸಾರಾಂಶವು.

ಅಖಿಲಭಾರತ ರಾಷ್ಟ್ರೀಯ ಸಭೆಯ ಕಾರ್ಯವಾಹಕ ಮಂಡಳದ ಸಭಾ ಸದರಿಗೆ—

ಮಹಾಶಯರೇ,

ಮುಂಬಯಿ, ಮದ್ರಾಸ ಇಲಾಖೆಗಳ ಕನ್ನಡ ಜಿಲ್ಹೆಗಳಲ್ಲಿ ಹಾಗು ಕೊಡಗು ಪ್ರಾಂತದಲ್ಲಿ ವಾಸಮಾಡಿಕೊಂಡಿರುವ ಕನ್ನಡ ಭಾಷೆಯನ್ನಾಡುವ ಬ್ರಿಟಿಶ್ ಪ್ರಜೆಗಳಾದ ನಾವು ಬಿನ್ನಹಮಾಡಿಕೊಳ್ಳುವದೇನಂದರೆ—

ಭಾಷಾಭೇದದ ತತ್ವಾನುಸಾರ ಹಿಂದುಸ್ಥಾನದೊಳಗಿನ ರಾಷ್ಟ್ರೀಯ ಸಭೆಯ ಸ್ವತಂತ್ರ ಪ್ರಾಂತಿಕ ವಿಭಾಗಗಳ ಪುನರ್ಘಟನೆಯಾಗಿ, ಮುಂಬಯಿ, ಮದ್ರಾಸ ಇಲಾಖೆಗಳಿಗೆ ಸೇರಿದ ಹಾಗು ಕೊಡಗು ಪ್ರಾಂತದ ಕನ್ನಡಿಗರ ಪ್ರದೇಶವನ್ನೆಲ್ಲ ಒಂದು ಗೂಡಿಸಿ, ಒಂದು ಸ್ವತಂತ್ರವಾದ ರಾಷ್ಟ್ರೀಯ ಸಭೆಯ ಪ್ರಾಂತಿಕ ವಿಭಾಗವನ್ನು ಮಾಡಿಕೊಡಬೇಕೆಂಬದೇ ನಮ್ಮ ಅಂತಃಕರುಣ ಪೂರ್ವಕವಾದ ಪ್ರಾರ್ಥನೆಯಿರುತ್ತದೆ. ಹಿಂದುಸ್ಥಾನದಲ್ಲಿ ಈಗ ಇದ್ದ ರಾಷ್ಟ್ರೀಯ ಸಭೆಯ ಸ್ವತಂತ್ರ ಪ್ರಾಂತಿಕ ವಿಭಾಗಗಳು ಜನಾಂಗಗಳ ಸ್ವಾಭಾವಿಕ ಭಾಗಗಳಾಗಿರುವದಿಲ್ಲೆಂಬದನ್ನು ತಮಗೆ ಆದರ ಪೂರ್ವಕವಾಗಿ ತಿಳಿಸುತ್ತೇವೆ. ಭಿನ್ನ ವಾಙ್ಮಯ, ಭಿನ್ನ ಪರಂಪರೆಗಳುಳ್ಳ ಭಿನ್ನ ಭಿನ್ನ ಜನರನ್ನು ಒಂದೇ ರಾಷ್ಟ್ರೀಯ ಸಭೆಯ ಸ್ವತಂತ್ರ ಪ್ರಾಂತಿಕ ವಿಭಾಗದಲ್ಲಿ ಒಂದು ಗೂಡಿಸುವದು ಆ ಜನರ ರಾಷ್ಟ್ರೀಯತ್ವದ ಪರಿಪೋಷಣಕ್ಕಾಗಲಿ, ರಾಷ್ಟ್ರೀಯ ಐಕ್ಯಕ್ಕಾಗಲಿ ಸಹಾಯಕವಾಗಲಾರದು.

ಅಖಿಲಭಾರತ ರಾಷ್ಟ್ರೀಯ ಸಭೆಯ ಕಾರ್ಯವಾಹಕ ಮಂಡಳವು ಮದ್ರಾಸ ಇಲಾಖೆಯಲ್ಲಿ ಆಂಧ್ರರಿಗೂ, ಮುಂಬೈ ಇಲಾಖೆಯಲ್ಲಿ ಸಿಂಧಿಗಳಿಗೂ, ಸ್ವತಂತ್ರವಾದ ರಾಷ್ಟ್ರೀಯ ಸಭೆಯ ಪ್ರಾಂತಿಕ ವಿಭಾಗಗಳನ್ನು ದಯಪಾಲಿಸಿರುತ್ತದೆಂಬದನ್ನೂ, ನೇಕನಾಮದಾರ ಈ. ಎಸ್. ಮಾಂಟೆಗೊ ಸಾ॥ ಬಾಹದ್ದೂರರವರ ಕಡೆಗೆ ಭಾಷೆಯಂತೆ ಪ್ರಾಂತಗಳ ಪುನರ್ಘಟನೆಯನ್ನು ಮಾಡುವ ಕುರಿತು ಅರ್ಜಿಯನ್ನು ಕಳಿಸಿರುತ್ತೇವೆಂಬದನ್ನೂ ಇಲ್ಲಿ ಸೂಚಿಸುತ್ತೇವೆ.

ಮುಂಬಯಿ, ಮದ್ರಾಸ, ಇಲಾಖೆಗಳಲ್ಲಿರುವ ಕನ್ನಡ ಭಾಗವೂ, ಕೊಡಗು ಸೀಮೆಯೂ ಕೂಡಿ ಸುಮಾರು ೩೦೪೯೭ ಚ. ಮೈ. ಕ್ಷೇತ್ರವುಳ್ಳದ್ದೂ, ೬೪೪೦೪೯೫ ಜನಸಂಖ್ಯೆಯುಳ್ಳದ್ದೂ ಆಗಿದೆ. ಆದ್ದರಿಂದ ಇದನ್ನೊಂದು ಸ್ವತಂತ್ರ ವಾದ ರಾಷ್ಟ್ರೀಯ ಸಭೆಯ ಪ್ರಾಂತಿಕ ವಿಭಾಗವನ್ನು ಮಾಡಬೇಕೆಂದು ನಾವು ಪ್ರಾರ್ಥಿಸುತ್ತೇವೆ. ( ಕ್ಷೇತ್ರ ಜನಸಂಖ್ಯೆಗಳು ಇದಕ್ಕೂ ಹೆಚ್ಚಾಗಿವೆ. )

ನಾವು ನಮಗಿಂತ ಮುಂದಾದವರೊಡನೆ ಸ್ಪರ್ಧಿಸಬೇಕಾಗಿರುವದರಿಂದಲೂ, ನಮ್ಮ ಪ್ರಗತಿಗೆ ಅನುಕೂಲ ಸ್ಥಿತಿಯಿಲ್ಲದ್ದರಿಂದಲೂ, ಬಹಳ ಹಿಂದು ಳಿದಿರುತ್ತೇವೆ. ಆದ್ದರಿಂದ ಕನ್ನಡಿಗರನ್ನೆಲ್ಲ ಒಂದು ಗೂಡಿಸಿ ಒಂದೇ ರಾಷ್ಟ್ರೀಯ ಸಭೆಯ ಸ್ವತಂತ್ರವಾದ ಪ್ರಾಂತಿಕ ವಿಭಾಗವನ್ನು ಮಾಡುವದರಿಂದ ನಾವು ನಿಶ್ಚಯವಾಗಿ ಪ್ರಗತಿಯನ್ನು ಹೊಂದುತ್ತೇವೆ. ಆದ್ದರಿಂದ ಅಖಂಡವಾದ ಕರ್ನಾಟಕ ಪ್ರಾಂತಿಕ ವಿಭಾಗವನ್ನು ನಿರ್ಮಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ.

ಮಹಾಶಯರ

ಅತ್ಯಂತ ಅಜ್ಞಾಧಾರಕ ಸೇವಕರು.

---

## ನಂಬರ ೫.

## ಹಿಂದುಸ್ಥಾನದ ಸೆಕ್ರೇಟರಿಯವರಿಗೆ ಕಳಿಸಿದ ಅರ್ಜಿಯ ಸಾರಾಂಶವು.

ನೇಕನಾಮದಾರ ಈ. ಎಸ್. ಮಾಂಟೆಗೂ ಸಾ|| ಬಾಹದ್ದೂರ,

ಸೆಕ್ರೇಟರಿ ಆಫ್ ಸ್ಟೇಟ ಫಾರ್ ಇಂಡಿಯಾ,

ಖಾವಂದರವರ ಹುಜೂರಿಗೆ:—

ಘನವಂತರಾದ ಧೊರೆಗಳೇ,

ಮುಂಬಯಿ, ಮದ್ರಾಸ ಇಲಾಖೆಗಳ ಕನ್ನಡ ಜಿಲ್ಹೆಗಳಲ್ಲಿ ಹಾಗು ಕೊಡಗು ಪ್ರಾಂತದಲ್ಲಿ ವಾಸಿಸುವ ಬ್ರಿಟಿಶ್ ಪ್ರಜೆಗಳಾದ ನಾವು ಹಿಂದುಸ್ಥಾನಕ್ಕೆ ಬಂದಿರುವ ತಮಗೆ ಅಂತಃಕರುಣಪೂರ್ವಕವಾಗಿ ಸ್ವಾಗತ ಮಾಡುತ್ತೇವೆ. ಮತ್ತು ತಾವು ಈ ದೇಶದ ಈಗಿನ ಪ್ರಸಂಗದೊಳಗೆ ಇಲ್ಲಿಗೆ ಬಂದದ್ದಕ್ಕಾಗಿ ತಮಗೆ ಅನಂತ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ. ಭಾಷೆಯಂತೆ ಹಿಂದುಸ್ಥಾನದೊಳ

ಗಿನ ಪ್ರಾಂತಗಳ ಪುನರ್ಘಟನೆಯಾಗಿ ಮುಂಬಯಿ, ಮದ್ರಾಸ ಇಲಾಖೆಗಳಿಗೆ ಸೇರಿದ ಹಾಗು ಕೊಡಗು ಪ್ರಾಂತದ ಕನ್ನಡಿಗರ ಪ್ರದೇಶವನ್ನೆಲ್ಲ ಒಂದು ಗೂಡಿಸಿ, ಒಂದು ಸ್ವತಂತ್ರವಾದ ರಾಜಕೀಯ ವಿಭಾಗವನ್ನು ಮಾಡಿಕೊಡಬೇಕೆಂಬದೇ ನಮ್ಮ ಪ್ರಾರ್ಥನೆಯಿರುತ್ತದೆ. ಹಿಂದುಸ್ಥಾನದಲ್ಲಿದ್ದ ರಾಜಕೀಯ ವಿಭಾಗಗಳು ಜನಾಂಗಗಳ ಸ್ವಾಭಾವಿಕ ಭಾಗಗಳಾಗಿರುವದಿಲ್ಲವೆಂಬದನ್ನು ತಮಗೆ ಆದರ ಪೂರ್ವಕ ತಿಳಿಸುತ್ತೇವೆ. ಈಗಿರುವ ಪ್ರಾಂತಗಳು, ಅವುಗಳಲ್ಲಿಯ ಜನರು ಕ್ರಮಶಃ ಅಭಿವೃದ್ಧಿಯನ್ನು ಹೊಂದುವಂತೆ ವಿಭಾಗಿಸಲ್ಪಟ್ಟಿರುವದಿಲ್ಲ. ಭಿನ್ನ ವಾಙ್ಮಯ, ಭಿನ್ನ ಪರಂಪರೆಗಳನ್ನುಳ್ಳ ಭಿನ್ನ ಭಿನ್ನ ಜನರನ್ನು ಒಂದು ಪ್ರಾಂತದಲ್ಲಿ ಒಂದು ಗೂಡಿಸುವದು ಆ ಜನರ ರಾಷ್ಟ್ರೀಯತ್ವದ ಪರಿಪೋಷಣಕ್ಕಾಗಲಿ, ಐಕ್ಯ ಭಾವನೆಯ ಅಭಿವೃದ್ಧಿಗಾಗಲಿ, ಭೌತಿಕ ಮತ್ತು ನೈತಿಕ ಉತ್ಕರ್ಷಕ್ಕಾಗಲಿ ಸಹಾಯಕವಾಗಲಾರದು. ಏಕಭಾಷೆಯೆಂಬದು ಪ್ರಜೆಗಳ ಐಕ್ಯಕ್ಕೆ ಬಲವತ್ತರವಾದ ಸಾಧನವಾಗಿರುತ್ತದೆ. ಆದ್ದರಿಂದ ಭಾಷೆಯಂತೆ ಪ್ರಾಂತಗಳ ಪುನರ್ಘಟನೆಯಾಗುವದು ಆಗತ್ಯವಾಗಿದೆ.

ಮುಂಬಯಿ, ಮದ್ರಾಸ ಇಲಾಖೆಗಳಲ್ಲಿರುವ ಕನ್ನಡ ಭಾಗವೂ, ಕೊಡಗು ಸೀಮೆಯೂ ಒಂದಕ್ಕೊಂದು ಹೊಂದಿದ್ದು, ಸು. ೩೦೫೯೭ ಚ. ಮೈ. ಕ್ಷೇತ್ರವುಳ್ಳದ್ದೂ, ೬೪೪೦೮೯೫ ಜನಸಂಖ್ಯೆಯುಳ್ಳದ್ದೂ ಆಗಿದೆ. ಆದ್ದರಿಂದ ಇದನ್ನೊಂದು ಸ್ವತಂತ್ರವಾದ ಪ್ರಾಂತವಾಗಿ ಮಾಡಿ, ಇದಕ್ಕೆ ಕಾರ್ಯಕಾರಿ ಸಭೆ ಮತ್ತು ನಿಯಮ ನಿರ್ಮಾಣಸಭೆ ಇವುಗಳಿಂದ ಯುಕ್ತವಾದ ಸ್ವತಂತ್ರ ರಾಜ್ಯವ್ಯವಸ್ಥೆಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸುತ್ತೇವೆ.

ನಾವು ನಮಗಿಂತ ಮುಂದಾದವರೊಂದಿಗೆ ಸ್ಪರ್ಧಿಸಬೇಕಾಗಿರುವದರಿಂದ ಪ್ರಗತಿಯಲ್ಲಿ ಹಿಂದುಳಿದಿರುತ್ತೇವೆ. ಆದ್ದರಿಂದ ಕನ್ನಡಿಗರನ್ನೆಲ್ಲ ಒಂದು ಗೂಡಿಸಿ ಅಖಂಡವಾದ ಕರ್ನಾಟಕ ಪ್ರಾಂತವನ್ನು ನಿರ್ಮಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ.

ಘನವಂತರಾದ ಧೊರೆಗಳವರ
ಅತ್ಯಂತ ನಮ್ರ ಮತ್ತು ಆಜ್ಞಾಧಾರಕ ಪ್ರಜೆಗಳು.

———

## ನಂಬರ ೬.

## ಖಾನೇಸುಮಾರಿ ( ಜನರ ಎಣಿಕೆ ).

ಹತ್ತು ವರ್ಷಕ್ಕೊಮ್ಮೆ ಜನರ ಎಣಿಕೆಯಾಗುವದು ಎಲ್ಲರಿಗೂ ಗೊತ್ತಿರುವದು. ಪ್ರಜೆಗಳ ಯೋಗ ಕ್ಷೇಮವನ್ನು ತಿಳಿದುಕೊಳ್ಳಲು ಅನುಕೂಲವಾಗಬೇಕೆಂದು ಸರಕಾರವು ಬಹಳ ಹಣವನ್ನು ಖರ್ಚುಮಾಡಿ ಈ ಲೆಕ್ಕವನ್ನು ಪ್ರಸಿದ್ಧಿಸುವದು. ಇದರಲ್ಲಿ ಸರಕಾರದ ಸದುದ್ದೇಶವಿದ್ದರೂ, ಎಣಿಕೆಗಾರರ ಅಭಿಮಾನದ ಮೂಲಕವಾಗಿ ಇಲ್ಲವೆ ಜನರ ಅಜ್ಞಾನದ ಮೂಲಕವಾಗಿ ತಪ್ಪುಗಳಾಗುವ ಸಂಭವವುಂಟು. ಗಡಿನಾಡಿನಲ್ಲಿರುವ ಜನರು ಬಹುಶಃ ಎರಡು ಭಾಷೆಗಳನ್ನಾಡುತ್ತಿರುವರು. ಅಶಿಕ್ಷಿತ ಜನರಲ್ಲಿ ಭಾಷಾಭಿಮಾನವಿರುವ ಸಂಭವವಿಲ್ಲ. ಎಣಿಕೆಗಾರನು ಒಂದು ವಿಶಿಷ್ಟಭಾಷೆಯ ಅಭಿಮಾನಿಯಾಗಿದ್ದರೆ, ಇಂಥ ಪ್ರಸಂಗವನ್ನು ಯೋಗ್ಯವಾಗಿ ಉಪಯೋಗಿಸಿಕೊಳ್ಳದೆ ಬಿಡುವದಿಲ್ಲ. ಜನರಿಗೆ ೨ ಭಾಷೆಗಳು ತಿಳಿಯುವದನ್ನು ನೋಡಿ-ತನಗೆ ಯಾವ ಭಾಷೆಯುಬೇಕೋ ಅದನ್ನೇ ಕಾಣಿಸಬಹುದು. ಅಶಿಕ್ಷಿತ ಜನರು ಒಮ್ಮೆ ತಮ್ಮ ಹೆಸರನ್ನು ಹೇಳಬೇಕಾದರೆ ಸಾಕಾಗುವದು. ಉಳಿದ ಕೋಷ್ಟಕಗಳನ್ನು ಎಣಿಕೆಗಾರರೇ ತುಂಬುವದುಂಟು. ಇಷ್ಟಲ್ಲದೆ ಸುಶಿಕ್ಷಿತ ಜನರಿಂದಲೂ ತಪ್ಪುಗಳಾಗುತ್ತವೆ. ಬೆಳಗಾಂವಿಯಲ್ಲಿ ಸುಶಿಕ್ಷಿತ ಕನ್ನಡಿಗರಲ್ಲಿ ಕೆಲವರಿಗೆ ಮರಾಟಿಗರೆನಿಸಿಕೊಳ್ಳುವ ಮಬ್ಬು ಬಿದ್ದಿರುವಂತೆ ಬಳ್ಳಾರಿ, ಅನಂತಪುರಗಳಲ್ಲಿ ಸುಶಿಕ್ಷಿತ ಕನ್ನಡಿಗರಲ್ಲಿ ಕೆಲವರಿಗೆ ತೆಲಗರೆನಿಸಿಕೊಳ್ಳುವ ಮಬ್ಬು ಬಿದ್ದಿರುತ್ತದೆ. ಇಂಥವರು ಅಭಿಮಾನ ಪೂರ್ವಕವಾಗಿ ಪರಭಾಷೆಯನ್ನು ಮಾತೃಭಾಷೆಯೆಂದು ಹೇಳತೊಡಗುವರು. ಆದ್ದರಿಂದ ಜನರ ಎಣಿಕೆಯು ಸರಾಸರಿಯಿಂದ ಗೊತ್ತಾದರೂ, ಇಂಥ ಭಾಷೆಯ ಜನರು ಇಷ್ಟೇಯೆಂದು ಈ ಲೆಕ್ಕಪತ್ರವು ಹೇಳುವ ಮಾತು ವಿಶ್ವಸನೀಯವಾಗದು. ಕನ್ನಡಿಗರ ಜನಸಂಖ್ಯೆಯು ಇದಕ್ಕೂ ಹೆಚ್ಚಿರಬೇಕೆಂದು ಇದರಿಂದ ಅನುಮಾನವಾಗದಿರದು.

---

## ನಂಬರ ೭.

### ಉಪಯುಕ್ತ ಒಂದೆರಡು ಮಾತುಗಳು.

| | ಕ್ಷೇತ್ರ | ಜನಸಂಖ್ಯೆ |
|---|---|---|
| ೧ ಬ್ರಿಟಿಶ ಹಿಂದುಸ್ಥಾನ | ೧೦೯೭೯೦೧ ಚ. ಮೈ. | ೨೪೪೨೬೭೫೪ |
| ಸಂಸ್ಥಾನಗಳು | ೬೭೫೨೬೭ ,, | ೭೦೮೬೪೯೮ |
| ಇಡಿ ಹಿಂದುಸ್ಥಾನ | ೧೭೭೩೧೬೮ ಚ. ಮೈ. | ೩೧೫೧೩೨೫೨ |

ಈ ಜನಸಂಖ್ಯೆಯಲ್ಲಿ ಸು. ೧೬ ಕೋಟಿ ಗಂಡಸರೂ ೧೫ ಕೋಟಿ ಹ ಸರೂ ಇರುವರು.

೨ ಬೇರೆ ಬೇರೆ ಉದ್ಯೋಗಗಳಲ್ಲಿರುವ ಜನಸಂಖ್ಯೆ:—ಒಕ್ಕಲತನ ( ೨ ಕೋಟಿ), ಕೈಗಾರಿಕೆ ( ೩ ೧/೩ ಕೋ. ), ವ್ಯಾಪಾರ ( ೧ ೩/೪ ಕೋ. ), ನ ( ೧/೩ ಕೋ. ), ಬೇರೆ ಉದ್ಯೋಗ ( ೧ ೩/೪ ಕೋ. ), ಇವರಲ್ಲಿ ಸುಖದಿಂದ ಕ್ಷೇಪ ಮಾಡುವವರ ಸಂಖ್ಯೆಯು ೩ ಕೋಟಿಗಿಂತ ಹೆಚ್ಚಿಲ್ಲ.

---

## ನಂಬರ ೮.

### ಕರ್ನಾಟಕ ಪ್ರಾಂತಿಕ ಕಾಯದೆಮಂಡಳದ ಸ್ವರೂಪ

ಕರ್ನಾಟಕ ಪ್ರಾಂತಿಕ ಕಾಯದೆಮಂಡಳದ ಒಟ್ಟು ಸಭಾಸದರ ಸ ೭೫ ಇರತಕ್ಕದ್ದು. ಇವರಲ್ಲಿ ಸರಕಾರದಿಂದ ನಿಯಮಿಸಲ್ಪಟ್ಟವರು ೧೫, ಜನರ ಆರಿಸಲ್ಪಟ್ಟವರು ೬೦. ಒಟ್ಟು ಜನಸಂಖ್ಯೆಯು ೧/೧೦ ಮುಸಲ್ಮಾನರು ಇರುವವರ ಅವರ ಬಗ್ಗೆ ೭-೮ ಸ್ಥಳಗಳು ಹೋಗುವವು.

**೬೦ ಸ್ಥಳಗಳ ವಿಭಾಗವು:**--ಹಳ್ಳಿಗಳ ಬಗ್ಗೆ (ರೂರಲ್) ಮುಸ ನೇತರ ೨೬, ಶಹರಗಳ ಬಗ್ಗೆ (ಅರ್ಬನ್) ಮುಸಲ್ಮಾನೇತರ ೧೪, ಹಳ್ಳಿಗಳ (ರೂರಲ್) ಮುಸಲ್ಮಾನ ೬, ಶಹರ (ಅರ್ಬನ್) ಮುಸಲ್ಮಾನ ೨, ಜಮೀನದ ೬, ಹೀಗೆ ೫೪. ಇದರ ಹೊರತು ಉದ್ಯೋಗ-ವ್ಯಾಪಾರ ೨, ವಿದ್ಯಾಪೀಠ ಆಂಗ್ಲೋ ಇಂಡಿಯನ್ ೧, ಇಂಡಿಯನ್ ಕ್ರಿಶ್ಚಿಯನ್ ೧, ಕೂಲಿಕಾರಸ ೧=೬, ಒಟ್ಟು ೬೦. ದೊಡ್ಡ ಜಿಲ್ಹೆಗಳಿಗೆ ೩, ಸಣ್ಣ ಜಿಲ್ಹೆಗಳಿಗೆ ೨ ಸಭಾಸದ ಬರುವರು.

---